ಮೈಸೂರು-ಮದ್ರಾಸ-ಮುಂಬಯಿ ಸರಕಾರಗಳಿಂದ ಮಂಜೂರಾದ

# ಅಕ್ಬರ ಚಕ್ರವರ್ತಿಯ ಚರಿತ್ರ.

ಧಾರವಾಡದ ಸರಕಾರಿ ಹ್ಯಾಸ್ಕೂಲಿನ ಮಾಜಿ ಹೆಡ್ಮಾಸ್ತರರಾದ

**ರಾಮಚಂದ್ರ ಹಣಮಂತ ದೇಶಪಾಂಡೆ,** ಎಮ್. ಎ.

ಅವರಿಂದ ರಚಿತವಾದುದು.

ತಿದ್ದಿ ಬೆಳಿಸಿದ ೩ನೆಯಾವೃತ್ತಿ—೧೦೦೦ ಪ್ರತಿಗಳು.





...y J. M. Suares, Codialbail Press, Mangalore and
... by Ramachandra H. Desapande, M. A., Dharwad.
1919.

[ಬೆಲೆ ೧ ರೂಪಾಯಿ.]



# ಅಕ್ಬರ ಚಕ್ರವರ್ತಿಯ ಚರಿತ್ರ

---

ಧಾರವಾಡದ ಸರಕಾರಿ ಹ್ಯಾಸ್ಕೂಲಿನ ಮಾಜಿ ಹೆಡ್ಮಾಸ್ತರರಾದ

**ರಾಮಚಂದ್ರ ಹಣಮಂತ ದೇಶಪಾಂಡೆ, ಎಮ್. ಎ.**

ಅವರಿಂದ ರಚಿತವಾದುದು.

ತಿದ್ದಿ ಬೆಳಿಸಿದ ೩ನೆಯಾವೃತ್ತಿ—೧೦೦೦ ಪ್ರತಿಗಳು.



---

Printed by J. M. Suares, Codialbail Press, Mangalore and
published by Ramachandra H. Desapande, M. A., Dharwad.

**1919.**

[ಬೆಲೆ ೧ ರೂಪಾಯಿ.]

ರಾಮಚಂದ್ರ ಹಣಮಂತ ದೇಶಪಾಂಡೆ ಎಮ್. ಎ. ಯವರ

ಇತರ ಪುಸ್ತಕಗಳು.



| | | ರೂ. ಆ. ಪೈ. |
|---|---|---|
| ೧. | ಚರಿತ್ರ ಸಂಗ್ರಹ ೧ನೆಯ ಭಾಗ (ಸಚಿತ್ರ) | ೧— ೦—೦ |
| ೨. | ಮೊಗಲ್ ಬಾದಶಾಹಿ | ೦—೧೦—೦ |
| ೩. | ಗ್ರೇಟಬ್ರಿಟನ್, ಆಯರ್ಲಂಡ್ ದೇಶಗಳ ಸಂಕ್ಷಿಪ್ತ ವರ್ಣನೆ | ೦— ೬—೦ |
| ೪. | ಹೈದರಲ್ಲಿಯೂ ಟೀಪು ಸುಲ್ತಾನನೂ | ೦— ೪—೦ |
| ೫. | ಧರ್ಮಸ್ಥಾಪಕರೂ ಧರ್ಮಸುಧಾರಕರೂ | ೦— ೫—೦ |
| ೬. | ನಾನಾಫಡನವೀಸ | ೦— ೩—೦ |
| ೭. | ನೂರ್‌ಜಹಾನ್ ರಾಣಿ | ೦— ೧—೬ |

೮. ಚರಿತ್ರ ಸಂಗ್ರಹ ೨ನೆಯ ಭಾಗ
೯. ಚೈತನ್ಯ ಚರಿತ್ರ
} ಇವುಗಳ ೨ನೆಯ ಆವೃತ್ತಿಯು ಸಿದ್ಧವಾಗುತ್ತಲಿದೆ.

ಈ ಚರಿತ್ರೆಯನ್ನು

ಮೈಸೂರುಸಂಸ್ಥಾನವನ್ನು ಆಳಿದ ಶ್ರೀಮಂತ ಛತ್ರಪತಿ

# ಶ್ರೀಚಾಮರಾಜೇಂದ್ರ ಒಡೆಯರ್

## ಬಹದ್ದೂರ್, ಜಿ. ಸಿ. ಎಸ್. ಐ.,

**ಮಹಾಸ್ವಾಮಿಯವರಿಗೆ**

ಇವರ ಕನ್ನಡಭಾಷಾಭಿವೃದ್ಧಿಯ ಉತ್ಕಟೇಚ್ಛೆಯನ್ನು ನೋಡಿ

(ಅಪ್ಪಣೆ ಪಡೆದುಕೊಂಡು)

ಮಹಾಸ್ವಾಮಿಯವರ ವಿಧೇಯಸೇವಕನಾದ ಗ್ರಂಥಕರ್ತನು

ಕೃತಜ್ಞತೆಯಿಂದ

**ಕಾಣಿಕೆಯಾಗಿ ಅರ್ಪಿಸಿರುತ್ತಾನೆ**



# ಚಿತ್ರಗಳು



* ಈ ಚಿತ್ರಗಳು ಸಂಬಂಧವಾದ ಪುಟಗಳ ಮಧ್ಯದಲ್ಲಿ ಇಟ್ಟಿರುವುದನ್ನು ನೋಡಿರಿ.

# ೨ನೆಯ ಆವೃತ್ತಿಯ ಪ್ರಸ್ತಾವನೆ

ಈ ಪ್ರಸ್ತಾವನೆಯನ್ನು ಬರೆಯುವುದಕ್ಕೆ ನನಗೆ ಅತ್ಯಾನಂದವಾಗುತ್ತದೆ: ಏಕೆಂದರೆ ಇದು ತಿದ್ದಿಬೆಳಿಸಿದ ಮತ್ತು ಸಚಿತ್ರವಾದ ಆವೃತ್ತಿಯು ಮಾತ್ರವಲ್ಲ; ಇದರ ಭಾಷೆಯಲ್ಲಿ ಒಂದು ದೊಡ್ಡ ಬದಲಾವಣೆಯು ಆಗಿದೆ. ೧೯೧೫ರಲ್ಲಿ ಬೆಂಗಳೂರಿನೊಳಗೆ ಕೂಡಿದ ಮೊದಲನೆಯ ಕರ್ಣಾಟಕ ಸಾಹಿತ್ಯ ಸಮ್ಮೇಳನದಲ್ಲಿ ಗ್ರಂಥಸ್ಥವಾದ ಕನ್ನಡಭಾಷೆಗೆ ಏಕರೂಪತೆಯನ್ನು ಉಂಟುಮಾಡುವ ಪ್ರಯತ್ನಗಳನ್ನು ಕೈಕೊಳ್ಳಬೇಕೆಂದು ಸರ್ವಾನುಮತದಿಂದ ನಿರ್ಣಯವಾಯಿತು. ಆದರೆ ಆ ನಿರ್ಣಯದಂತೆ ಕೆಲಸವೇನೂ ಈ ವರೆಗೂ ನಡೆಯದಿರುವುದನ್ನು ನೋಡಿ ವಿಷಾದಪಟ್ಟು, ಏನಾದರೂ ಪ್ರಯತ್ನ ಮಾಡಬೇಕೆಂಬ ಉದ್ದೇಶದಿಂದ ನಾನು ನನ್ನ "**ಅಕ್ಬರ ಚಕ್ರವರ್ತಿಯ ಚರಿತ್ರ**"ವನ್ನು ನನ್ನ ಮಿತ್ರರಾದ ಬೆಂಗಳೂರು ಕೃಷ್ಣಪ್ಪ, ಎಮ್. ಎ. ಇವರಿಂದ ಮೈಸೂರಿನ ಭಾಷೆಗೆ ಸರಿಯಾಗುವಂತೆ ತಿದ್ದಿಸಿದೆನು. ಇದಲ್ಲದೆ ಈಪ್ರಾಂತದ ಕೆಲವು ಶಬ್ದಗಳು, ಪ್ರಯೋಗಗಳು, ವಾಕ್ಯಗಳು ಮುಂತಾದುವು ಮೈಸೂರು-ಮದ್ರಾಸಿನವರಿಗೆ ತಿಳಿಯದಿದ್ದುದರಿಂದ ಎಲ್ಲ ಕನ್ನಡಿಗರಿಗೂ ತಿಳಿಯುವಂತೆ ಮಾಡಲು, ಕಳೆದ ಫೆಬ್ರುವರಿ ತಿಂಗಳಲ್ಲಿ ಮದ್ರಾಸಿನಲ್ಲಿ ಗ್ರಂಥಕಾರರ ಒಂದು ಚಿಕ್ಕ ಸಭೆ ಕೂಡಿತು. ಅದರೊಳಗೆ ನನ್ನ ಹೊರತು ಕೆಳಗೆಬರೆದ ಗೃಹಸ್ಥರಿದ್ದರು:—

೧. ಮ. ರಾ. **ಬೆನಗಲ್ ರಾಮರಾವ್**, ಎಮ್. ಎ., ಎಲ್. ಎಲ್. ಬಿ., ಕನ್ನಡ ಟ್ರಾನ್ಸಲೇಟರ್, ಮದ್ರಾಸ್ ಸರಕಾರ.

೨. ,, **ಬೆಳ್ಳಾವಿ ವೆಂಕಟನಾರಣಪ್ಪ**, ಎಮ್. ಎ.

೩. ಮ. ರಾ. **ಬೆಂಗಳೂರು ಕೃಷ್ಣಪ್ಪ,** ಎಮ್. ಎ..
ಕನ್ನಡ ಟ್ರಾನ್ಸಲೇಟರ್, ವಿದ್ಯಾಭ್ಯಾಸದ ಇಲಾಖೆ,
ಮೈಸೂರು ಸರಕಾರ.

ಈ ಸಭೆಯಲ್ಲಿ, ಕೆಳಗೆ ಕೊಟ್ಟಿರುವಂತೆ ನಿರ್ಣಯಗಳು ಆದುವು:—

೧. ಇಂಗ್ಲಿಷ್, ಮರಾಠಿ, ತೆಲುಗು, ತಮಿಳು, ಹಿಂದೂಸ್ಥಾನಿ ಭಾಷೆಗಳ ಶಬ್ದ, ವಾಕ್ಯ, ಪ್ರಯೋಗ ಮುಂತಾದುವುಗಳನ್ನು ಆದಷ್ಟು ಮಟ್ಟಿಗೆ ಎಲ್ಲರೂ ಬಿಟ್ಟುಬಿಡಬೇಕು.

೨. ಸಂಸ್ಕೃತದ ದೊಡ್ಡ ದೊಡ್ಡ ಸಮಾಸಗಳನ್ನೂ, ವಿಭಕ್ತಿ ಪ್ರತ್ಯಯ ಸೇರಿದ ಶಬ್ದಗಳನ್ನೂ, ವಾಕ್ಯಗಳನ್ನೂ ಕನ್ನಡದಲ್ಲಿ ಸೇರಿಸಕೂಡದು.

೩. ಒಂದು ಭಾಗದಲ್ಲಿ ಪ್ರಚಾರದಲ್ಲಿರುವ ಸಾರವತ್ತಾದ ಶಬ್ದ, ಪ್ರಯೋಗ ಮುಂತಾದುವುಗಳು ಬೇರೆ ಭಾಗದವರಿಗೆ ತಿಳಿಯುವಂತಿಲ್ಲದಿದ್ದರೆ ಅವುಗಳ ಅರ್ಥವನ್ನು ಅಡಿ ಟಿಪ್ಪಣಿಯಲ್ಲಿ ಅಥವಾ ಆವರಣಚಿಹ್ನೆಗಳಲ್ಲಿ ಕೊಡಬೇಕು.

ಈ ನೇಮಗಳಿಗೆ ಅನುಸಾರವಾಗಿ ಈ ಚರಿತ್ರವನ್ನು ತಿದ್ದಿದ್ದಲ್ಲದೆ, ಅಚ್ಚು ಕಾಗದ(ಪ್ರೂಫು)ಗಳನ್ನು ನೋಡಿದಬಗ್ಗೆ ಮ. ರಾ. **ಬೆಂಗಳೂರು ಕೃಷ್ಣಪ್ಪ,** ಎಮ್. ಎ. ಇವರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ಅದರಂತೆಯೇ ಈಗ್ರಂಥದಲ್ಲಿಯ ಕನ್ನಡ ಭಾಷೆಗೆ ಏಕರೂಪತೆಯನ್ನು ಕೊಡುವ ವಿಷಯದಲ್ಲಿ ತನುಮನಧನದಿಂದ ನನಗೆ ನೆರವಾದ ಮ. ರಾ. **ಬೆನಗಲ್ ರಾಮರಾಯರಿಗೂ, ಬೆಳ್ಳಾವಿ ವೆಂಕಟನಾರಣಪ್ಪನ**ವರಿಗೂ ನಾನು ಕೃತಜ್ಞನಾಗಿರುತ್ತೇನೆ.

ಈ ಪುಸ್ತಕದ ೨೦೦ ಪ್ರತಿಗಳನ್ನು ತೆಗೆದುಕೊಳ್ಳುತ್ತೇವೆಂದು ವಾಗ್ದಾನಕೊಟ್ಟ ಮೈಸೂರು ಸರಕಾರದವರಿಗೂ, ಈ ಸರಕಾರದ ವಿದ್ಯಾಖಾತೆ(ಇಲಾಖೆ)ಯ ಮಾಜಿ ಇನ್‌ಸ್ಪೆಕ್ಟರ್-ಜನರಲ್ಲರಾದ

ಮ॥ ರಾ॥ ರಾಜಕಾರ್ಯಪ್ರಸಕ್ತ, ರಾವಬಹದ್ದೂರ್ **ಎಮ್. ಶಾಮ ರಾವ್,** ಎಮ್. ಎ.ಯವರಿಗೂ ನಾನು ಕೃತಜ್ಞನಾಗಿರುತ್ತೇನೆ.

ಈ. ಪುಸ್ತಕದ ಸುಧಾರಣೆಯ ಬಗ್ಗೆ ಕಳುಹಿಸುವ ಸೂಚನೆಗಳನ್ನು ನಾನು ಅತ್ಯಾದರದಿಂದ ಸ್ವೀಕರಿಸುವೆನು. ವಾಚಕಮಹಾಶಯರು ದಯವಿಟ್ಟು ಓದಿ, ಇದರಲ್ಲಿರುವ ಕುಂದು-ಕೊರತೆಗಳನ್ನು ತಿಳಿಸಬೇಕೆಂದು ಬೇಡಿಕೊಳ್ಳುತ್ತೇನೆ.

ಮಾಳಮಡ್ಡಿ, ಧಾರವಾಡ.
ಕಾಳಯುಕ್ತಿ ಸಂವತ್ಸರ
ವೈಶಾಖ ಕೃಷ್ಣ ೨ ಸೋಮವಾರ
ಶಕೆ ೧೮೪೦.
ತಾ. ೨೭—೫—೧೯೧೮.

**ರಾಮಚಂದ್ರ ಹಣುಮಂತ**
**ದೇಶಪಾಂಡೆ.**

# ೩ನೆಯಾವೃತ್ತಿಯ ಪ್ರಸ್ತಾವನೆ

ಈ ಆವೃತ್ತಿಯನ್ನು ಮೆ॥ ವ್ಹಿನ್ಸೆಂಟ ಸ್ಮಿಥ್ ಸಾಹೇಬರು ಬರೆದ **ಅಕ್ಬರ ಚರಿತ್ರ** ಎಂಬ ಇಂಗ್ರೇಜಿಗ್ರಂಥದ ಆಧಾರದಿಂದ ತಿದ್ದಿ ಬೆಳಿಸಿರುತ್ತೇನೆ. ಇದರಲ್ಲಿದ್ದ ತಪ್ಪುಗಳಿಗೆ ನಾನೇ ಜವಾಬುದಾರನಾಗಿದ್ದೇನೆ. ಅವುಗಳನ್ನು ತೋರಿಸಿಕೊಟ್ಟವರಿಗೆ ಕೃತಜ್ಞನಾಗುವೆನು. ಶ್ರೀಮನ್ಮಹಾರಾಜರವರ ಚಿತ್ರದ ಅಚ್ಚು ದೊರೆಯಲಿಲ್ಲೆಂದು ವಿಷಾದಿಸುತ್ತೇನೆ. ಮೈಸೂರು-ಮದ್ರಾಸ ಸರಕಾರದವರು ಈ ಪುಸ್ತಕ

ವನ್ನು ಪಠ್ಯಪುಸ್ತಕವಾಗಿ ಆರಿಸಿದ್ದರಿಂದ ಈ ಎರಡೂ ಸರಕಾರದವರಿಗೆ ನಾನು ಅತ್ಯಂತ ಕೃತಜ್ಞನಾಗಿರುತ್ತೇನೆ.

ಸ್ಥಳಗಳ ಮುಂದೆ ಕಂಸಗಳಲ್ಲಿ ಕೊಟ್ಟ ಅಂಕಿಗಳು ಪರಿಶಿಷ್ಟ ಇಯಲ್ಲಿ ಕೊಟ್ಟ ಸ್ಥಳವಿವರಣೆಗೆ ಸಂಬಂಧಿಸಿರುತ್ತವೆ.

ಮಾಳಮಡ್ಡಿ, ಧಾರವಾಡ.
ಸಿದ್ಧಾರ್ಥಿ ಸಂವತ್ಸರ ವೈಶಾಖ
ಶುದ್ಧ ೧೫ ತಾ. ೧೪ ಮೇ ೧೯೧೯.

ರಾಮಚಂದ್ರ ಹಣುಮಂತ
ದೇಶಪಾಂಡೆ.



# ಸಂಪಾದಕರ ಪೀಠಿಕೆ

ಗ್ರಂಥಕರ್ತರು ತಮ್ಮ ಪ್ರಸ್ತಾವನೆಯಲ್ಲಿ ಈ ಗ್ರಂಥದ ಮೊದಲನೆಯ ಮುದ್ರಣಕ್ಕೂ ಈಗಿನ ಮುದ್ರಣಕ್ಕೂ ಇರುವ ಮುಖ್ಯ ವ್ಯತ್ಯಾಸಗಳನ್ನು ಸಂಕ್ಷೇಪವಾಗಿ ತಿಳಿಸಿರುವರು. ಈ ಮುದ್ರಣದ ಮುಖ್ಯೋದ್ದೇಶವು ಗ್ರಾಂಥಿಕಭಾಷೆಯನ್ನು ಎಲ್ಲಾ ಕನ್ನಡನಾಡುಗಳಲ್ಲಿಯೂ ಒಂದೇ ಆಗಿರುವಂತೆ ಮಾಡಬೇಕೆಂಬುದೇ ಎಂದು ಅವರ ಪ್ರಸ್ತಾವನೆಯಿಂದಲೇ ಗೊತ್ತಾಗುವುದು. ಈಗ ಒಂದೊಂದು ಪ್ರಾಂತದಲ್ಲಿ ಒಂದೊಂದು ಬಗೆಯ ಕನ್ನಡವು ಗ್ರಂಥಸ್ಥವಾಗಿರುವುದರಿಂದ, ಒಂದೇ ಗ್ರಂಥವನ್ನು ಹಲವರು ಗ್ರಂಥಕರ್ತರು ತಮ್ಮ ತಮ್ಮ ಪ್ರಾಂತಗಳ ಕನ್ನಡದಲ್ಲಿ ಬರೆಯುತ್ತಲಿರುವರು. ಇದರಿಂದ ಶ್ರಮ ನಷ್ಟ ಮಾತ್ರವಲ್ಲದೆ ಯಾವ ಪ್ರಾಂತದ ಗ್ರಂಥಕರ್ತರಿಗೂ ಸಾಕಾದಷ್ಟು ಪ್ರೋತ್ಸಾಹವಿಲ್ಲದೆ ಇರುತ್ತದೆ. ಇದರ ಜತೆಗೆ ಬೇರೆ ಬೇರೆ ಪ್ರಾಂತದ ಕನ್ನಡದ ವೈಲಕ್ಷಣ್ಯಗಳು ರೂಢಮೂಲವಾಗುತ್ತ ಬಂದು ಕಾಲಾಂತರದಲ್ಲಿ ಕನ್ನಡವು ಎರಡು ಮೂರು ಬೇರೆ ಬೇರೆ ಭಾಷೆಗಳಾಗಿ ಒಡೆದು ಹೋಗುವ ಸಂಭವವೂ ಹೆಚ್ಚುತ್ತಿರುವುದು. ಈ ಅಪಾಯವನ್ನು ತಪ್ಪಿಸಿ, ಸಕಲಕರ್ಣಾಟಕಪ್ರಾಂತಗಳಲ್ಲೂ ಒಂದೇ ಗ್ರಂಥಸ್ಥಭಾಷೆಯು ರೂಢಿಗೆ ಬರುವಂತೆ ಮಾಡಲು ಯತ್ನಿಸುವುದು ಅಕ್ಷರಜ್ಞರಾದ ಕನ್ನಡಿಗರೆಲ್ಲರ ಕರ್ತವ್ಯವಾಗಿರುವುದು.

ಈ ಉದ್ದೇಶವನ್ನು ಸಾಧಿಸಲು ಹಲವರು ಹಲವು ಉಪಾಯಗಳನ್ನು ಸೂಚಿಸುತ್ತಿರುವರು. ಇವುಗಳಲ್ಲಿ ಮುಖ್ಯವಾದುವು ಯಾವುವೆಂದರೆ:— (೧) ಸಪ್ರಮಾಣವಾದ ನಿಘಂಟನ್ನೂ, ಉದಾರವಾದ ಆಶಯದಿಂದ ಬರೆದ ಹೊಸಗನ್ನಡ ವ್ಯಾಕರಣವೊಂದನ್ನೂ ರಚಿಸುವುದು; (೨) ಕರ್ಣಾಟಕ ಪ್ರಾಂತಗಳಿಗೆಲ್ಲಾ ತಿಳಿಯುವಂತೆ ಒಂದು ಗ್ರಂಥಮಾಲೆಯನ್ನು ಹೊರಡಿಸುವುದು; (೩) ಬೇರೆ ಬೇರೆ ಪ್ರಾಂತಗಳಲ್ಲಿ ಹುಟ್ಟಿದ ಕನ್ನಡ ಗ್ರಂಥಗಳನ್ನು ಪರೀಕ್ಷೆಗಳಿಗೆ ನಿಯಮಿಸುವುದು; (೪) ಎಲ್ಲಾ ಕನ್ನಡ ಪಾಠಶಾಲೆಗಳಲ್ಲೂ ಒಂದೇ ಬಗೆಯ "ಕ್ರಮಿಕ ಪುಸ್ತಕ"ಗಳನ್ನು ಉಪಯೋಗಿಸುವುದು; (೫)

ಕರ್ಣಾಟಕದ ಮುಖ್ಯಪಟ್ಟಣಗಳಲ್ಲಿ ಇತರ ಪ್ರಾಂತಗಳ ವಿದ್ವಾಂಸರಿಂದ ಆಗಾಗ ಕನ್ನಡದಲ್ಲಿ ಉಪನ್ಯಾಸಗಳನ್ನು ಕೊಡಿಸುವುದು; (೬) ಗ್ರಂಥ ಗಳನ್ನು ತಿದ್ದಿಕೊಡುವುದಕ್ಕಾಗಿ ಉದಾರಹೃದಯರಾದ ಪಂಡಿತರ ಸಂಘ ವನ್ನು ಏರ್ಪಡಿಸುವುದು; (೭) ಬೇರೆ ಬೇರೆ ಪ್ರಾಂತಗಳ ಕನ್ನಡದಲ್ಲಿ ಹುಟ್ಟಿರುವ ಮುಖ್ಯವಾದ ಪುಸ್ತಕಗಳನ್ನು ಗ್ರಂಥಕರ್ತರಿಗೆ ಸುಲಭ ಕ್ರಯದಲ್ಲಿ ಕೊಡಿಸುವ ಏರ್ಪಾಡುಮಾಡುವುದು; (೮) ಗ್ರಂಥಕರ್ತರು ಗಳು ಕೆಲವು ನಿಯಮಗಳನ್ನು ಏರ್ಪಡಿಸಿಕೊಂಡು ಅವುಗಳನ್ನು ತಮ್ಮ ಗ್ರಂಥಗಳಲ್ಲಿ ತಪ್ಪದೆ ಅನುಸರಿಸುವುದು. ಮೇಲೆ ಹೇಳಿದ ಇಷ್ಟು ಉಪಾ ಯಗಳಲ್ಲೆಲ್ಲಾ ಕೊನೆಯದಾದ, "ಗ್ರಂಥಕರ್ತರುಗಳು ಕೆಲವು ನಿಯಮ ಗಳನ್ನು ಏರ್ಪಡಿಸಿಕೊಂಡು ಅವುಗಳನ್ನು ತಮ್ಮ ಗ್ರಂಥಗಳಲ್ಲಿ ತಪ್ಪದೆ ಅನುಸರಿಸುವುದು" ಎಂಬುದು, ಆಚರಿಸಲು ಬಹಳ ಸುಲಭವಾಗಿಯೂ, ಹೆಚ್ಚು ಫಲವನ್ನು ಕೊಡತಕ್ಕುದಾಗಿಯೂ ಇರುವುದು. ಈಗಿನ ಸ್ಥಿತಿ ಯಲ್ಲಿ ಯಾವ ಬಗೆಯ ಭಾಷಾನಿಯಮಗಳನ್ನೂ ಸರಕಾರದವರಾಗಲಿ, ವಿದ್ವಾಂಸಮಂಡಲಿಯವರಾಗಲಿ ರೂಢಿಗೆ ತರುವುದು ಸಾಧ್ಯವಾಗಿರು ವಂತೆ ತೋರುವುದಿಲ್ಲ. ಇದುವರೆಗೂ ಕರ್ಣಾಟಕದ ಉದ್ದಾಮಕವಿಗಳು ಕೆಲವು ಸಾಮಾನ್ಯ ನಿಯಮಗಳನ್ನು ತಮ್ಮ ಗ್ರಂಥಗಳಲ್ಲಿ ಅನುಸರಿಸಿ ಕೊಂಡು ಬಂದಿರುವಂತೆಯೇ ಈಗಿನ ಗ್ರಂಥಕರ್ತರೂ ಭಾಷಾಭಿಮಾನ ದಿಂದ ಕೆಲವು ನಿಯಮಗಳಿಗೆ ಒಳಪಟ್ಟು ತಮ್ಮ ಗ್ರಂಥಗಳನ್ನು ಬರೆಯುತ್ತ ಬಂದರೆ ಗ್ರಾಂಥಿಕಭಾಷಾ ಏಕೀಕರಣವೆಂಬ ಮಹತ್ಕಾರ್ಯವು ಹತ್ತಾರು ವರ್ಷಗಳಲ್ಲೇ ಸಫಲವಾಗುವುದು. ಈಗ ಗ್ರಂಥಗಳನ್ನು ಬರೆಯುತ್ತಿರು ವವರು ಹಲವು ಮಂದಿ ಇದ್ದರೂ ಕೆಲವು ವರ್ಷಗಳ ವರೆಗಾದರೂ ಸ್ಥಿರವಾಗಿ ನಿಲ್ಲುವ ಉತ್ತಮಗ್ರಂಥಗಳನ್ನು ಬರೆಯುವವರು ಹತ್ತಾರು ಮಂದಿಗಿಂತ ಹೆಚ್ಚಾಗಿರುವುದಿಲ್ಲ. ಈ ಹತ್ತಾರು ಮಂದಿಯಲ್ಲಿ ಐಕಮತ್ಯವು ನೆಲೆಗೊಳ್ಳುವುದಾದರೆ, ಗತಾನುಗತಿಕವಾಗಿ ಅವರನ್ನು ಅನುಸರಿಸಿಕೊಂಡು ಬರೆಯುತ್ತಿರುವ ಇತರ ಗ್ರಂಥಕರ್ತರುಗಳಲ್ಲೂ ಒಂದು ಬಗೆಯ ಏಕೀ ಭಾವವು ತಲೆದೋರಿ ಎಲ್ಲಾ ಪ್ರಾಂತಗಳ ಗ್ರಾಂಥಿಕಭಾಷೆಯು ಅತ್ಯಲ್ಪ ಕಾಲದಲ್ಲಿಯೆ ಸುವ್ಯವಸ್ಥಿತವಾಗುವುದು.

ಹಾಗಾದರೆ ಗ್ರಂಥಕರ್ತರುಗಳು ಅನುಸರಿಸಬೇಕಾಗಿರುವ ಸಾಮಾನ್ಯ ನಿಯಮಗಳು ಯಾವುವು? ಇವುಗಳು ಹೆಚ್ಚಾಗಿಯೂ ಇಲ್ಲ, ಇವುಗಳನ್ನು ಅನುಸರಿಸುವುದು ಕಷ್ಟವೂ ಅಲ್ಲ. ಬೇರೆ ಬೇರೆ ಪ್ರಾಂತಗಳ ಗ್ರಾಂಥಿಕ ಭಾಷೆಗಳಲ್ಲಿ ಕಂಡುಬರುತ್ತಿರುವ ಕುಂದುಕೊರತೆಗಳಿಗೆ ಇನ್ನು ಮುಂದೆ ಅವಕಾಶಕೊಡದಿರುವುದು **ಮೊದಲನೆಯ ನಿಯಮ.**

ಈಗ ಮೈಸೂರಿನ ಕನ್ನಡದಲ್ಲಿ ಈ ಮುಂದೆ ಹೇಳುವ **ನ್ಯೂನತೆ** ಗಳು ಇರುವುವೆಂದು ಇತರಕನ್ನಡಿಗರು ಹೇಳುವರು:—(೧) ಬರೆವಣಿಗೆಯಲ್ಲಿ ಸಂಸ್ಕೃತಪದಗಳನ್ನು ಹುಡುಕಿ ಹಿಡಿದುತಂದು ತುಂಬಿರುವರೋ ಎಂಬಂತೆ ಸಂಸ್ಕೃತ ಶಬ್ದಗಳನ್ನು ಹೇರಳವಾಗಿ ಉಪಯೋಗಿಸುವುದು; (೨) ಅತಿದೀರ್ಘವಾಗಿಯೋ ಅಥವಾ ಅಪೂರ್ಣವಾಗಿಯೋ ಇರುವಂತೆ ವಾಕ್ಯಗಳನ್ನು ಬರೆಯುವುದು; (೩) ಅನ್ವಯಕಾಠಿನ್ಯ; (೪) ಹಳಿ, ತೆಗಳು, ಕರೆ (ಆಹ್ವಾನ) ಮುಂತಾದ ಹಳಗನ್ನಡ ಶಬ್ದಗಳೂ, ಅಚ್ಚಗನ್ನಡ ಪ್ರಯೋಗಗಳೂ ಬಿಟ್ಟುಹೋಗಿ, ಅವುಗಳ ಬದುಲಾಗಿ ಅಸಮರ್ಥಕವಾದ ಶಬ್ದಜಾಲಗಳಿಗೆ ಅವಕಾಶಕೊಡುವುದು; (೫) ತೆಲುಗು, ತಮಿಳು, ಹಿಂದೂಸ್ಥಾನಿ, ಇಂಗ್ಲೀಷ್ ಶಬ್ದಗಳಿಗೂ, ಪ್ರಯೋಗಗಳಿಗೂ, ಎಡೆಕೊಡುವುದು; (೬) ಕೆಲವು ಸಂಸ್ಕೃತಶಬ್ದಗಳಿಗಿರುವ ಮೂಲಾರ್ಥವನ್ನು ತಪ್ಪಿಸಿ ಅವುಗಳನ್ನು ಬೇರೆ ಅರ್ಥಗಳಲ್ಲಿ ಪ್ರಯೋಗಮಾಡುವುದು.

ಮುಂಬಯಿಕರ್ಣಾಟಕದ ಭಾಷೆಯ ವಿಷಯದಲ್ಲಿ ಈ ಮುಂದೆ ಹೇಳುವ ಲೋಪದೋಷಗಳು ಇರುತ್ತವೆಂದು ಇತರ ಪ್ರಾಂತಗಳ ಕನ್ನಡಿಗರು ಹೇಳುವರು :—(೧) ಹಿಂದುಸ್ಥಾನಿ, ಮರಾಟಿ, ಇಂಗ್ಲೀಷ್ ಭಾಷೆಗಳ ಶಬ್ದಗಳನ್ನೂ, ಪ್ರಯೋಗಗಳನ್ನೂ ಗೊತ್ತುಗುರಿಯಿಲ್ಲದಂತೆ ಕನ್ನಡಕ್ಕೆ ತಂದು ಸೇರಿಸಿಕೊಳ್ಳುತ್ತಲಿರುವುದು; (೨) ಶಬ್ದರೂಪಗಳಿಗೆ ಕಟ್ಟುನಿಟ್ಟುಗಳಿರುವುದಿಲ್ಲ—ಉದಾ: ಸ್ವಲ್ಪ, ಸ್ವಲ್ಪು; ಕನ್ನಡ, ಕನ್ನಡು; (೩) ವ್ಯಾಕರಣ ನಿಯಮಗಳು ಶಿಥಿಲವಾಗಿರುವುವು—ಉದಾ: ಕಳಕೊಂಡು, ಆಳುಬಂದವು; (೪) ಅನ್ಯಭಾಷೆಗಳಿಂದ ಅಂಕಿತನಾಮಗಳನ್ನೂ ಇತರಪದಗಳನ್ನೂ ಕನ್ನಡಕ್ಕೆ ತೆಗೆದುಕೊಳ್ಳುವ ಸಂದರ್ಭದಲ್ಲಿ—ಸಂಸ್ಕೃತದಿಂದಾಗಲಿ ಹಳಗನ್ನಡದಿಂದಾಗಲಿ ಹೊಸಗನ್ನಡಕ್ಕೆ ಪದಗಳನ್ನು ತೆಗೆದುಕೊಳ್ಳುವಾಗ ಅನು

ಸರಿಸುವ ನಿಯಮಗಳನ್ನುವಿಸಾರಿ, ವಿಲಕ್ಷಣವಾದ ರೂಪಗಳನ್ನು ಮಾಡಿಕೊಳ್ಳುವುದು — ಉದಾ : William = ಉಯಿಲಿಯಮ್ಮ, College = ಕಾಲೇಜ; (೫) ಅನ್ಯಭಾಷಾಶಬ್ದಗಳ ಉಚ್ಚಾರಣೆಯನ್ನು ತೋರಿಸುವುದಕ್ಕಾಗಿ ವಿಲಕ್ಷಣವಾದ ಅಕ್ಷರಸಂಯೋಜನಕ್ರಮವನ್ನು ಅನುಸರಿಸುವುದು — ಉದಾ: Bicycle tyre = ಬಾಯಿಸಿಕಲ್ಲ ಟಾಯಿರ, Viceroy = ವ್ಹಾಯಿಸರಾಯಿ, Gazette = ಗ್ಯಾಝೆಟ್ಟ.

ಮಂಗಳೂರುಕನ್ನಡದ ವಿಷಯದಲ್ಲೂ ಕೆಲವು ಕುಂದುಕೊರತೆಗಳಿರುವುವೆಂದು ಹೇಳುವರು :—(೧) ಯಾವ ದ್ರಾವಿಡಭಾಷೆಯಲ್ಲೂ ರೂಢಿಯಲ್ಲಿಲ್ಲದ ಉಚ್ಚಾರಣೆಗಳನ್ನು ರೂಢಿಗೆ ತರುತ್ತಿರುವುದು :— ಉದಾ: ಕೊಲೇಜ್, ಇಸ್ಕಂಟೇಕ್ಸ್, ಜೋರ್ಜ್; (೨) ಅಂತಹ ಉಚ್ಚಾರಣೆಗಳನ್ನು ಬರೆವಣಿಗೆಯ ಮೂಲಕ ತೋರಿಸುವುದಕ್ಕಾಗಿ ಅಶಾಸ್ತ್ರೀಯವಾದ ಉಪಾಯಗಳನ್ನು ಅನುಸರಿಸುವುದು : — ಉದಾ: ಹ್ಯಾಸ್ಕೂಲ್, ನ್ಯಾಕ; (೩) ತುಳು, ಕೊಂಕಣಿ ಶಬ್ದಗಳನ್ನೂ ಪ್ರಯೋಗಗಳನ್ನೂ ಕನ್ನಡದಲ್ಲಿ ಸೇರಿಸುತ್ತಿರುವುದು.

ಹೀಗೆ ಒಂದು ಪ್ರಾಂತದ ಕನ್ನಡಿಗರು ಬೇರೊಂದು ಪ್ರಾಂತದ ಕನ್ನಡದಲ್ಲಿ ಯಾವುದನ್ನು ನ್ಯೂನತೆಯೆಂದು ತಿಳಿದಿರುವರೋ ಆ ಭಾಗಗಳನ್ನು ಸಂಪೂರ್ಣವಾಗಿಯೂ ಬಿಟ್ಟುಬಿಡುವುದಕ್ಕೆ ಆಗದಿದ್ದರೆ, ಕಡಿಮೆಮಾಡಿಕೊಳ್ಳುವುದಕ್ಕಾದರೂ ಪ್ರಯತ್ನಿಸುವುದು ಅತ್ಯಾವಶ್ಯಕವಾಗಿರುವುದು. ಇಷ್ಟನ್ನು ಮಾಡಿದ ಮಾತ್ರದಿಂದಲೇ ಭಾಷಾ ಏಕೀಕರಣವು ಆದಂತೆ ಆಗುವುದಿಲ್ಲ.

ಸಂಧಿ, ಸಮಾಸ, ಶಬ್ದನಿಷ್ಪತ್ತಿ, ಅನ್ವಯಕ್ರಮ ಮುಂತಾದುವುಗಳ ವಿಷಯದಲ್ಲಿ ಇದುವರೆಗೂ ಎಲ್ಲಾ ಉದ್ದಾಮಕವಿಗಳಿಗೂ ಪ್ರಮಾಣಗ್ರಂಥಗಳಾಗಿದ್ದ, ಈಗಲೂ ಪದ್ಯಗ್ರಂಥಗಳ ವಿಷಯದಲ್ಲಿ ಪ್ರಮಾಣಗ್ರಂಥಗಳಾಗಿರುವ, ಶಬ್ದಮಣಿದರ್ಪಣ, ಶಬ್ದಾನುಶಾಸನಗಳ ನಿಯಮಗಳಿಗೆ ಕೇವಲವಿರುದ್ಧವಾದ ರೀತಿಯಲ್ಲಿ ಅಪಶಬ್ದಗಳಿಗೂ ಅಪಪ್ರಯೋಗಗಳಿಗೂ ಅವಕಾಶವಿಲ್ಲದಂತೆ ಮಾಡಿಕೊಳ್ಳಬೇಕೆಂಬುದು **ಎರಡನೆಯ ನಿಯಮ**. ಆದರೆ ಈ ವಿಷಯದಲ್ಲಿ ಕೆಲವರು ಬಹಳ ವಿಲಕ್ಷಣವಾದ

ಭ್ರಮೆಗೆ ಒಳಗಾಗಿ ಈ ವ್ಯಾಕರಣಗ್ರಂಥಗಳು ಹಳಗನ್ನಡಕ್ಕೆ ಸಂಬಂಧ ಪಟ್ಟುವು, ಬೆಳೆಯುತ್ತಿರುವ ಹೊಸಗನ್ನಡಕ್ಕೆ ಈ ಗ್ರಂಥಗಳ ಸೂತ್ರಗಳಿಂದ ಬಿಗಿದುಬಿಟ್ಟರೆ ಭಾಷಾಭಿವೃದ್ಧಿಗೇ ತಡೆಹಾಕಿದಂತಾಗುವುದು ಎಂದು ಭಾವಿಸುವರು; ಇದು ಸರಿಯಲ್ಲ. ಹೊಸಗನ್ನಡವು ಹಳಗನ್ನಡದಿಂದ ತೀರ ಭಿನ್ನವಾಗಿರುವುದಿಲ್ಲ. ಕೆಲವೇಕೆಲವು ಶಬ್ದಗಳನ್ನೂ ಪ್ರಯೋಗ ಗಳನ್ನೂ ಬಿಟ್ಟರೆ ಹೊಸಗನ್ನಡದ ಎಲ್ಲಾ ಶಬ್ದರೂಪಗಳನ್ನೂ ಪ್ರಯೋಗ ಗಳನ್ನೂ ಪ್ರಾಯಶಃ ಹಳಗನ್ನಡದ ರೂಪಗಳಿಂದಲೇ ಸಾಧಿಸಬಹುದು. ಆದುದರಿಂದ ಸಂಧಿ, ಸಮಾಸ, ಶಬ್ದನಿಷ್ಪತ್ತಿ ಮುಂತಾದ ವಿಷಯಗ ಳಲ್ಲಿ ಆಧುನಿಕಗ್ರಂಥಕರ್ತರುಗಳ ಪ್ರಯೋಗಗಳಲ್ಲಿ ಭಿನ್ನತೆಯು ತೋರು ವಾಗ ಹಳಗನ್ನಡರೂಪ, ಪ್ರಯೋಗಗಳಿಂದ ಸಾಧಿಸಬಹುದಾದುವು ಗಳನ್ನೊ ಅಥವಾ ಅವುಗಳಿಗೆ ಸಮೀಪಸ್ಥವಾದುವುಗಳನ್ನೊ ಅನುಸರಿಸ ಬೇಕು. ಈಕ್ರಮವನ್ನೆ ಉದ್ದಾಮಕವಿಗಳೆಲ್ಲರೂ ಅನುಸರಿಸುತ್ತಬಂದಿ ರುವುದರಿಂದ ಹಲವು ಶತಮಾನಗಳಾದರೂ ಗ್ರಾಂಥಿಕಭಾಷೆಯಲ್ಲಿ ಪ್ರಬಲವಾದ ಬದಲಾವಣೆಗಳಾಗಿಲ್ಲ. ಆದುದರಿಂದಲೇ ಅನೇಕಶತಮಾನ ಗಳಿಗೆ ಹಿಂದೆ ಹುಟ್ಟಿದ ಗ್ರಂಥಗಳನ್ನು ಈಗ ಓದಿ ಕೆಲವುಮಟ್ಟಿಗೆ ತಿಳಿದುಕೊಳ್ಳಲು ಸಾಮಾನ್ಯರಿಗೂ ಸಾಧ್ಯವಾಗಿರುವುದು. ಮುಂದೆ ಹುಟ್ಟುವ ಕನ್ನಡಿಗರ ವಿಷಯದಲ್ಲಿ ನಮ್ಮ ಕರ್ತವ್ಯವನ್ನು ಸೂಕ್ಷ್ಮವಾಗಿ ವಿಚಾರಮಾಡಿ ನೋಡಿದರೆ, ಈ ನಿಯಮದ ಪ್ರಾಮುಖ್ಯವು ಪ್ರತಿಯೊಬ್ಬ ಭಾಷಾಭಿಮಾನಿಗೂ ವಿಶದವಾಗುವುದು.

ಅನ್ಯಭಾಷೆಗಳಿಂದ ಶಬ್ದಗಳನ್ನಾಗಲಿ, ಪ್ರಯೋಗಗಳನ್ನಾಗಲಿ ತೆಗೆದುಕೊಳ್ಳುವುದು ಅಗತ್ಯವಾಗಿರುವಾಗ—ಭಾಷಾರೂಢಿ, ಶಬ್ದನಿಷ್ಪತ್ತಿ ಕ್ರಮ, ವ್ಯಾಕರಣನಿಯಮ ಈವಿಷಯಗಳಲ್ಲಿ ಅತ್ಯಂತವ್ಯತ್ಯಾಸಗಳನ್ನು ಹೊಂದಿರುವ ಇಂಗ್ಲೀಷ್, ಸಂಸ್ಕೃತ, ಹಿಂದೂಸ್ಥಾನಿ ಮುಂತಾದ ಅನ್ಯ ಭಾಷೆಗಳ ಸಾಮಗ್ರಿಗಳಿಗೆ ಕೈಯೊಡ್ಡುವುದಕ್ಕಿಂತಲೂ ಸರಿಸುಮಾರು ಈ ವಿಷಯಗಳಲ್ಲಿ ಒಂದೇ ಬಗೆಯವಾಗಿ ಅಕ್ಕತಂಗಿಯರಂತಿರುವ ತಮಿಳು, ತೆಲುಗು ಮುಂತಾದ ದ್ರಾವಿಡಭಾಷೆಗಳ ಸಹಾಯವನ್ನು ಪಡೆಯ ಬೇಕೆಂಬುದು **ಮೂರನೆಯ ನಿಯಮ.** ಉದಾಹರಣೆಗಾಗಿ, ಸರಿ

ಸುಮಾರು ಒಂದೇ ರೂಪವಾಗಿರುವ ಎರಡು ಶಬ್ದಗಳ ಅಥವಾ ಪ್ರಯೋಗಗಳ ವಿಷಯದಲ್ಲಿ ಸ್ಪರ್ಧೆತೋರಿದರೆ, ದ್ರಾವಿಡೇತರ ಭಾಷೆಗಳ ಶಬ್ದರೂಪ ಅಥವಾ ಪ್ರಯೋಗಗಳಿಗಿಂತ ದ್ರಾವಿಡಭಾಷೆಯವುಗಳಿಗೆ ಪ್ರಾಶಸ್ತ್ಯ ಕೊಡಬೇಕು.

ಕಾರಣಾಂತರಗಳಿಂದ ಒಂದು ಪ್ರಾಂತದ ಕನ್ನಡದಲ್ಲಿ ಬಿಟ್ಟು ಹೋಗಿರುವ ಅಚ್ಚಗನ್ನಡಶಬ್ದಗಳನ್ನೂ, ಪ್ರಯೋಗಗಳನ್ನೂ ಎಲ್ಲಾ ಪ್ರಾಂತಗಳಲ್ಲೂ ರೂಢಿಗೆ ತರುವುದು ಆವಶ್ಯಕವಾದುದರಿಂದ ಇಂತಹವುಗಳನ್ನು ಉಪಯೋಗಿಸಿ ಇವುಗಳ ಅರ್ಥವು ಗೊತ್ತಾಗುವಂತೆ ಸುಲಭವಾದ ಮಾತುಗಳಿಂದ ಅರ್ಥಗಳನ್ನು ಆವರಣಚಿಹ್ನೆಗಳ ಮಧ್ಯದಲ್ಲಿ ಕೊಡಬೇಕೆಂಬುದು **ನಾಲ್ಕನೆಯ ನಿಯಮ.**

ಮೇಲೆ ಹೇಳಿದ ನಿಯಮಗಳನ್ನು ಈ ಗ್ರಂಥದ ಪುನರ್ಮುದ್ರಣದಲ್ಲಿ ಎಷ್ಟುಮಟ್ಟಿಗೆ ಅನುಸರಿಸಲಾಗಿದೆಯೆಂಬುದನ್ನು ವಾಚಕರು ಹೇಳಬೇಕಾಗಿದೆ. ಒಟ್ಟಿನಲ್ಲಿ ನೋಡಿದರೆ ಇಂತಹ ಗ್ರಂಥಗಳು ಮೊದಮೊದಲು ಯಾವ ಒಂದು ಪ್ರಾಂತದವರಿಗೂ ಸಮರ್ಪಕವಾಗದೆ ಇರಬಹುದು. ಆದರೆ ಈಬಗೆಯ ಗ್ರಂಥಗಳು ಹತ್ತಾರು ಹುಟ್ಟಿ ಕನ್ನಡಿಗರ ಪ್ರೋತ್ಸಾಹಕ್ಕೆ ಪಾತ್ರವಾದರೆ, ಅತ್ಯಲ್ಪಕಾಲದಲ್ಲಿಯೇ ಗ್ರಾಂಥಿಕಭಾಷಾಏಕೀಕರಣವೆಂಬ ಮುಖ್ಯವಿಷಯವು ಸಮರ್ಪಕವಾಗಿ ವ್ಯವಸ್ಥಿತವಾದಂತಾಗುವುದು. ಭಾಷಾಭಿಮಾನಿಗಳು ಈಬಗೆಯ ಗ್ರಂಥಗಳಿಗೆ ಉದಾರವಾದ ಸಹಾಯವನ್ನು ಮಾಡಬೇಕೆಂತಲೂ, ಕರ್ಣಾಟಕಗ್ರಂಥಕರ್ತರು ಇನ್ನುಮುಂದೆ ತಾವು ಬರೆಯುವ ಗ್ರಂಥಗಳಲ್ಲಿ ಈಗ ತೋರಿ ಬರುತ್ತಿರುವ ಪ್ರಾಂತಿಕವೈಲಕ್ಷಣ್ಯಗಳಿಗೆ ಅವಕಾಶಕೊಡದೆ ಇರಲೆಂತಲೂ ಹಾರೈಸುವ,

ಸಜ್ಜನ ವಿಧೇಯ,

**ಬಿ. ಕೃಷ್ಣಪ್ಪ,** ಎಂ. ಎ.,

ಸಂಪಾದಕ.

# ವಿಷಯಸೂಚಿಕೆ





# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧ | ಟಿಪ್ಪಣಿ | ಜ..ಸ್ | ಜಂಗಿಸ್ |
| ೨ | ೩, ೪, ೫, ೬ | ಈ ಹೊತ್ತು | ಈಹೊತ್ತು |
| ೩ | ೨೬ | ಬೆಳೆಯುಲಾರಂಭಿತುಸಿ | ಬೆಳೆಯುಲಾರಂಭಿಸಿತು |
| ೬,೮೯,೯೧ | ೨೫, ೮, ೪ | ರಣಥಂಬೇರ, ರಂತಂಭರ | ರಣತಂಭರ |
| ೮ | ೯ | ಮನಶ್ಯಾಂತಿ | ಮನಶ್ಯಾಂತಿ |
| ೧೩ | ೨ | ಹುಮಾಯೂನನಿದ್ದೆಡೆಗೆ | (ಹುಮಾಯೂನನಿದ್ದೆಡೆಗೆ) |
| ೧೪ | ಟಿಪ್ಪಣಿ | ಅಳಿಗಳಿರ್ಭಕನ | ಅಳಿಗಳರ್ಭಕನ |
| ೧೯ | ೨೩ | ಸಿಕಂದರಿನ | ಸಿಕಂದರನ |
| ೨೪ | ೪ | ಅಕಬರನು | ಅಕ್ಬರನು |
| ,, | ಟಿಪ್ಪಣಿ | ಸೋದರ್ಣಂ | ಸೋದರ್ಡಂ |
| ,, | | ಆನೆಯ | ಆನೆಯು |
| ೨೫ | ೨೫ | ತುರ್ಕಸ್ಥಾನದವಾದದರಿಂದ | ತುರ್ಕಸ್ಥಾನದವಾದುದರಿಂದ |
| ೨೮ | ೨೩ | ಅವನು | ಅವರು |
| ೨೯ | ೭ | ಸೇರಿಸಿ | ಸೇವಿಸಿ |
| ೩೫ | ೧೭, ೧೮ | ಅಕ್ಬರನ ವಿರೋಧವಾಗಿ ಬೈರಾಮುಖಾನನಿಗೆ | ಬೈರಾಮುಖಾನನ ವಿರೋಧವಾಗಿ ಅಕ್ಬರನಿಗೆ |
| ೪೨, ೮೩ | ೨, ೧೪ | ಬೇಸಗೆ | ಬೇಸಿಗೆ |
| ೪೭ | ೬ | ಅದಕ್ಕೆ | ಅದು |
| ೬೪ | ೧೩ | ಹೊರಟಿರುತ್ತಾರೆಂಬ | ಹೊರಟಿರುತ್ತಾನೆಂಬ |
| ೭೧ | ೪ | ಪ್ರಸಿದ್ದಳಾದ | ಪ್ರಸಿದ್ಧಳಾದ |
| ೮೨ | ೫ | ಹುದೋಟವು | ಹೂದೋಟವು |
| ೮೭ | ೧೦ | ಕೊಟ್ಲುದಲ್ಲದೆ | ಕೊಟ್ಟುದಲ್ಲದೆ |
| ೯೦ | ೧೦ | ಮುರಗುಡಿಗಳನ್ನು | ಮುಠಗುಡಿಗಳನ್ನು |
| ,, | ೧೪ | ಡಾಗನ್ನು | ಡಾವನ್ನು |
| ೧೦೭ | ೧೯ | ಆಗಿದ್ಧೀರಿ | ಆಗಿದ್ದೀರಿ |
| ,, | ಟಿಪ್ಪಣಿ | ಸದುಷ್ಕರ | ಸುದುಷ್ಕರ |
| ೧೦೯ | ೧೩ | ಸೇವೆಯುನ್ನು, ಮಾಡಿ | ಸೇವೆಯುನ್ನು ಮಾಡಿ |
| ೧೧೩ | ೧೮ | ಸ್ವಾತಂತ್ರ್ಯ, ಪ್ರೀತಿಗಳಿಗಿಂತ | ಸ್ವಾತಂತ್ರ್ಯಪ್ರೀತಿಗಳಿಗಿಂತ |

| ಪುಟ | ಸಾಲು | ತಪ್ಪು | ಒಪ್ಪು |
| --- | --- | --- | --- |
| ೧೧೯ | ಟಿಪ್ಪಣಿ | ಈ ಟಿಪ್ಪಣಿಯು | ಇಲ್ಲೆಂದು ತಿಳಿಯಿರಿ. ಇದು ತಪ್ಪು. |
| ೧೨೮ | ೪ | ಜೀವನವನ್ನು ಆಸ್ತಿಗಳನ್ನು | ಜೀವನವನ್ನೂ ಆಸ್ತಿಗಳನ್ನೂ |
| ೧೪೧ | ೩ | ಧರ್ಮಾಧಿಕಾರಿಗಳಿಗೂ | ಧರ್ಮಾಧಿಕಾರಗಳಿಗೂ |
| ೧೪೨ | ೧೪ | ಆ ಬಾಲವೃದ್ಧರಿಗೂ | ಆಬಾಲವೃದ್ಧರಿಗೂ |
| ೧೪೫ | ೧೯ | ಮುಟ್ಟುಗೋಳು | ಮುಟ್ಟುಗೋಲು |
| ೧೪೬ | ೧೦ | ಬರೆಹವನ್ನು | ಬರಹವನ್ನು |
| ೧೪೯ | ಟಿಪ್ಪಣಿ ೯ | ಹೋಗುವದಕ್ಕಿಂತ | ಹೊಗುವುದಕ್ಕಿಂತ |
| ೧೫೧ | ೧೩ | ಇದಲ್ಲದೇ | ಇದಲ್ಲದೆ |
| ೧೫೨ | ೧೭, ೧೯ | ಬೈಬಿಲ್ಲೆಂಬ | ಬೈಬಲ್ಲೆಂಬ |
| ೧೬೧ | ಟಿಪ್ಪಣಿ | ಪುಟ ೧೨೦, ೧೨೧ನ್ನು | ಪುಟ ೪೩, ೫೧ನ್ನು |
| ೧೬೨ | ೧೪ | ಭೂಮಿಯಲ್ಲಿ | ಚೂಣಿಯಲ್ಲಿ |
| ೧೬೩ | ೧೪ | ಹಾಲನ್ನವನ್ನುಣ್ಣು | ಹಾಲೂ ಅನ್ನವನ್ನುಣ್ಣು |
| ೧೬೪ | ೧೩ | (ಪುಟ ೨೩) | (ಪುಟ ೨೬) |
| ೧೬೯ | ೨೦ | ದಿನವಹಿ | ದಿನಾಲು |
| ೧೭೦ | ಟಿಪ್ಪಣಿ | ಸ್ನಾನ ಮಾಡಿ ಜೋಥ ಬಾಯಿಯು ಸೆಲೀಮುನನ್ನು ಬಸುರಿನಲ್ಲಿದ್ದಾಗ | ಜೋಥ ಬಾಯಿಯು ಸೆಲೀಮುನನ್ನು ಬಸರಿದ್ದಾಗ |
| ೧೭೨ | ಟಿಪ್ಪಣಿ | ಸಾಮ್ಯಾನವಾದ | ಸಾಮಾನ್ಯವಾದ |
| ,, | ,, | ಚೀಡದವನು | ಚೀಡಾದವನು |
| ೧೭೩ | ೭ | ಬರೆದಿರುವುದನು | ಬರೆದಿರುವಂತೆ |
| ೧೭೪ | ಟಿಪ್ಪಣಿ | ಅಬ್ದಿಯುಮ್ | ಅಬ್ಧಿಯುಮ್ |



# ೧ನೆಯ ಅಧ್ಯಾಯ

## ಅಕ್ಬರನ ಪೂರ್ವಜರು



ಈ ಪೃಥ್ವಿಯೊಳಗೆ ಐದು ಮುಖ್ಯ ಧರ್ಮ*ಗಳಿರುತ್ತವೆ: (೧) ಹಿಂದು, (೨) ಬೌದ್ಧ, (೩) ಮಹಮ್ಮದೀಯ, (೪) ಕ್ರೈಸ್ತ, (೫) ಪಾರ್ಸಿ. ಈ ಅಯ್ದೂ ಧರ್ಮಗಳ ಮುಖ್ಯ ಗ್ರಂಥಗಳು ಮನುಷ್ಯರು ದೇವರ ಮಕ್ಕಳೆಂತಲೂ ಒಂದು ಜನಾಂಗದವರು ಮತ್ತೊಂದು ಜನಾಂಗದವರ ಬಂಧುಗಳೆಂತಲೂ ಪ್ರತಿಪಾದಿಸುತ್ತವೆ.

ಆದರೂ ಪಾಶ್ಚಾತ್ಯಪಂಡಿತರು ಮನುಷ್ಯರೊಳಗೆ (೧) ತುರಾಣರು, (೨) ಸೆಮೆಟಿಕರು; (೩) ಆರ್ಯರು ಎಂಬ ೩ ವರ್ಗಗಳನ್ನೂ, ತುರಾಣರೊಳಗೆ (೧) ತುಂಗಸಿ, (೨) ಮೊಗಲ್, (೩) ತುರ್ಕಿ ಎಂಬ ೩ ಉಪವರ್ಗಗಳನ್ನೂ ಕಲ್ಪಿಸಿರುತ್ತಾರೆ. ಮೊಗಲ್ ವಂಶಕ್ಕೆ ಸೇರಿದ ಬರ್ಬರರೆಂಬ ಜನರು ೧೪ನೆಯ ಶತಮಾನದಲ್ಲಿ **ಸಮರ್ಕಂದಿನ** ಬಡಗಲಲ್ಲಿದ್ದ **ಸೇರಸೆಬ್ಜ** ಎಂಬೂರಲ್ಲಿರುತ್ತಿದ್ದರು. ಇತಿಹಾಸದಲ್ಲಿ ಹೆಸರುಪಡೆದ **ತೈಮೂರ್ಲಂಗನು** ಈ ಬರ್ಬರರ ಮುಖ್ಯಸ್ಥನಾಗಿದ್ದನು. ಇವನ ಮರಿಮಗನ ೩ನೆಯ ಮಗನಾದ **ಉಮರ್‌ಶೇಖ ಮಿರ್ಜನು** ಈ ದೇಶದಲ್ಲಿ ಮೊಗಲರ ರಾಜ್ಯವನ್ನು ಸ್ಥಾಪಿಸಿದ **ಬಾಬರನ** ತಂದೆಯು. ಅವನು ಸತ್ತಾಗ (೧೪೯೪) **ಬಾಬರನು** ೧೨ ವರುಷದ ಚಿಕ್ಕ ಹುಡುಗನಾಗಿದ್ದನು. ಈ ಬಾಬರನ ಮುಮ್ಮಗನೇ ನಮ್ಮ ಚರಿತ್ರನಾಯಕನಾದ ಅಕ್ಬರನು.† ಅವನಲ್ಲಿ ಬಾಬರನ ಧೈರ್ಯಸಾಹಸಾದಿಗುಣಗಳು ಆನುವಂಶಿಕವಾಗಿ ಬಂದುದರಿಂದ ಬಾಬರನ ಚರಿತ್ರವನ್ನು ಸಂಕ್ಷಿಪ್ತವಾಗಿ ಕೆಳಗೆ ಕೊಡುತ್ತೇವೆ.

---

* ಮತವು ಸಂಕುಚಿತಾರ್ಥವನ್ನು ಕೊಡುತ್ತದೆ. ಉ. ವೈಷ್ಣವ ಮತ ಗಾಣಪತ್ಯ ಮತ ಮು. ಧರ್ಮ ಶಬ್ದವು ವಿಸ್ತೃತವಾದ್ದರಿಂದ ಈ ಎಲ್ಲಾ ಮತಗಳು ಅದರಲ್ಲಿ ಸಮಾವೇಶವಾಗುತ್ತವೆ.

† ಅಕ್ಬರನು ತಂದೆಯ ಕಡೆಯಿಂದ ತುರ್ಕನೆಂತಲೂ ತಾಯಿಯ ಕಡೆಯಿಂದ ಹೆಸರುವಾಸಿಯಾದ ಜಂಗಿಸ್ ಖಾನನ ವಂಶದವನೆಂತಲೂ ವ್ಹಿನ್ಸೆಂಟ ಸ್ಮಿಥ ಸಾಹೇಬರು ತಮ್ಮ ಅಕ್ಬರ ಚರಿತ್ರದಲ್ಲಿ ಬರೆಯುತ್ತಾರೆ.




ಬಾ ಬ ರ್

ಆ ಕಾಲದಲ್ಲಿ ಪಶ್ಚಿಮ ಏಸಿಯಾ ಖಂಡದೊಳಗೆ ಸುಸ್ಥಿರವಾದ ರಾಜ್ಯಗಳೇ ಇರಲಿಲ್ಲ. ದೇಶದಲ್ಲೆಲ್ಲ ಪುಂಡಾಟವೇ ಹಬ್ಬಿತ್ತು. ಈ ಹೊತ್ತು ಅರಸಾಗಿದ್ದವನು ನಾಳೆ ವನಚರನಾಗುತ್ತಿದ್ದನು; ಈ ಹೊತ್ತು ಒಬ್ಬನ ಕಯ್ಕೆಳಗಿದ್ದ ದಂಡು ನಾಳೆ ಮತ್ತೊಬ್ಬನನ್ನು ಆಶ್ರಯಿಸುತ್ತಿತ್ತು; ಈ ಹೊತ್ತು ಒಬ್ಬನ ಅಂಕೆಯಲ್ಲಿದ್ದ ಊರು ನಾಳೆ ಮತ್ತೊಬ್ಬನ ವಶವಾಗುತ್ತಿತ್ತು; ಈ ಹೊತ್ತು ಒಬ್ಬನ ದಳವಾಯಿಯಾದವನು ನಾಳೆ ಮತ್ತೊಬ್ಬನ ದಳವಾಯಿಯಾಗುತ್ತಿದ್ದನು. ಸಾರಾಂಶವೇನಂದರೆ— ಆ ಕಾಲದಲ್ಲಿ ರಾಜಕೀಯ, ನೈತಿಕ, ಸಾಮಾಜಿಕ ತತ್ವಗಳು, ಈಗಿನಂತೆ ಜನರ ಮನಸ್ಸಿನಲ್ಲಿ ನೆಲೆಗೊಳ್ಳದೆ, ಉಕ್ಕೇರಿದ ಸಮುದ್ರದ ತೆರೆಗಳಂತೆ ಅಥವಾ ಬಿರುಗಾಳಿಯಲ್ಲಿ ಸಿಕ್ಕಿದ ಧೂಳಿಯ ಕಣಗಳಂತೆ ಉಲ್ಲೋಲ-ಕಲ್ಲೋಲವಾಗಿದ್ದವು.

ಬಾಬರನು ಎದೆಗಾರನೂ, ಸಾಹಸಿಯೂ, ಉಪಾಯಗಾರನೂ, ಪ್ರಯತ್ನಶೀಲನೂ, ಕಲಿಯೂ ಆಗಿದ್ದನು. ಆದ್ದರಿಂದ ಅವನು ತನ್ನ ತಂದೆ ಸತ್ತ ಬಳಿಕ ತನ್ನ ರಾಜ್ಯದ ಕೆಲಭಾಗವನ್ನು ಶತ್ರುಗಳಿಗೆ ಬಿಟ್ಟುಕೊಟ್ಟು, ಉಳಿದ ರಾಜ್ಯವನ್ನು ಸುವ್ಯವಸ್ಥೆಗೆ ತರುವುದರಲ್ಲಿಯೂ, ಹೊಸ ದಂಡನ್ನು ಕೂಡಿಸುವುದರಲ್ಲಿಯೂ ಮುಂದೆ ಎರಡು ವರ್ಷ ಕಳೆದನು. ತರುವಾಯ ಆ ಕಾಲದಲ್ಲಿ ಹೆಸರುವಾಸಿಯಾಗಿದ್ದ **ಸಮರ್ಕಂದ** ಪಟ್ಟಣವನ್ನು ಮುತ್ತಿ, ಒಡನೆಯೇ ಹಿಡಿದುಕೊಂಡನು. ಆದರೆ ಆ ನಗರವನ್ನು ಸುಲಿಯಲಿಕ್ಕೆ ಅಪ್ಪಣೆ ಕೊಡದಿದ್ದುದರಿಂದ ಅವನ ದಂಡಾಳುಗಳೊಳಗೆ ಎಷ್ಟೋ ಜನರು ಅವನನ್ನು ಬಿಟ್ಟುಹೋದರು. ಆದರೂ ಅವನು ಧೈರ್ಯದಿಂದ ಆ ಪಟ್ಟಣವನ್ನು ಕಾಯ್ದುಕೊಂಡಿರಲು, ತನ್ನ ರಾಜಧಾನಿಯಾದ **ಅಂಡಿಜನವನ್ನು** ಹಗೆಗಳು ಮುತ್ತಿರುತ್ತಾರೆಂಬ **ಸುದ್ದಿಯು** ಬಂತು. ಆದ್ದರಿಂದ ಅವನು ಜಾಗ್ರತೆಯಾಗಿ **ಸಮರ್ಕಂದನ್ನು** ಬಿಟ್ಟು **ಅಂಡಿಜನಕ್ಕೆ** ಹೊರಟು ಹಾದಿಯಲ್ಲಿ ರೋಗಕ್ಕೆ ಒಳಗಾದನು. ಅವನಿಗೆ ಗುಣವಾಗುವದರೊಳಗೆ **ಅಂಡಿಜನವು** ವೈರಿಗಳ ಕಯ್ಸೇರಿತು; ಅವನು ಅತೋ ಭ್ರಷ್ಟ ತತೋ ಭ್ರಷ್ಟನಾದನು!!

ಈ ಕಾಲದಲ್ಲಿ ಬಾಬರನಿಗೆ ರಾಜ್ಯವೇ ಇರಲಿಲ್ಲ. ಕೆಲವು ಜನರನ್ನು ಕಟ್ಟಿಕೊಂಡು ಹೇಗೋ ಉದರಭರಣಮಾಡುತ್ತಿದ್ದನು. ಅವನು ೨ ಸಾರಿ **ಸಮರ್ಕಂದನ್ನು** ಹಿಡಿದುಕೊಳ್ಳಲಿಕ್ಕೆ ಯತ್ನಮಾಡಿ ನಿಷ್ಫಲನಾದನು. ೩ನೆಯ ಸಾರಿ ಅದು ಅಕಸ್ಮತ್ತಾಗಿ ಅವನ ಕಯ್ಸೇರಿದರೂ, ಬಹಳ ದಿವಸ ಅವನ ವಶದಲ್ಲುಳಿಯಲಿಲ್ಲ. ಆದ್ದರಿಂದ ಭಗ್ನಮನೋರಥನಾಗಿ ಬೇಸತ್ತು ಅವನು **ಖುರಾಸಾನ್** ಪ್ರಾಂತದ ಕಡೆಗೆ ಹೊರಡಲು, ಬೇರೆ ಕಡೆಯಲ್ಲಿ ದಂಗೆಯೆದ್ದಿದ್ದ ಮೊಗಲ್ ದಂಡಾಳುಗಳು ಅವನನ್ನು ಹಾದಿಯಲ್ಲಿ ದೈವಯೋಗದಿಂದ ಕೂಡಿದರು. ಇದರಿಂದ ಅವನು ಹುರಿದುಂಬಿ ಆ ಕಾಲದಲ್ಲಿ ಅವ್ಯವಸ್ಥಿತಸ್ಥಿತಿಯಲ್ಲಿದ್ದ **ಕಾಬೂಲು** ರಾಜ್ಯವನ್ನು ನುಗ್ಗಿ ಅಲ್ಲಿಯ ಮುಖ್ಯ ಪಟ್ಟಣಗಳಾದ **ಕಾಬೂಲ್-ಗಿಜನಿ** ನಗರಗಳನ್ನು ಹಿಡಿದುಕೊಂಡನು (೧೫೦೪). ಈ ಹೊಸ ರಾಜ್ಯವು ಅವನ ಪಿತ್ರಾರ್ಜಿತ ರಾಜ್ಯಕ್ಕಿಂತ ದೊಡ್ಡದಾಗಿತ್ತು. ಈ ಕಾಲದಿಂದ ಅವನ ಭಾಗ್ಯೋದಯವು ಬೆಳೆಯಲಾರಂಭಿತುಸಿ.

ಒಳಜಗಳವೂ ದೀರ್ಘದ್ವೇಷವೂ ಭಾರತೀಯರ ಅವನತಿಗೆ ಮುಖ್ಯ ಕಾರಣಗಳಾಗಿರುತ್ತವೆಂಬುದಕ್ಕೆ ಬಾಬರನ ಮುಂದಿನ ಚರಿತ್ರದಿಂದ ನಿದರ್ಶನ ಕಾಣಬರುತ್ತದೆ. ಈ ಕಾಲದಲ್ಲಿ ಮುಸಲ್ಮಾನರು ಉತ್ತರ ಹಿಂದುಸ್ಥಾನ ದಲ್ಲೆಲ್ಲಾ ನೆಲೆಗೊಂಡು ಭಾರತೀಯರನ್ನು ಕುಗ್ಗಿಸಿ ತಾವು ಇರುವಲ್ಲೆಲ್ಲ ತಮ್ಮ ಪುಂಡಾಟವನ್ನು ಹಬ್ಬಿಸಿದರು. ಕೃತಜ್ಞತೆ, ರಾಜನಿಷ್ಠೆ, ಪ್ರಜಾನು ರಂಜನಗಳೆಂಬ ಸದ್ಗುಣಗಳು ಹೆಸರು ಹೇಳದೆ ಹೋಗಿದ್ದವು. ಪ್ರತಿಯೊಬ್ಬ ವೀರನೂ ಕೆಲಜನರನ್ನು ಕಟ್ಟಿಕೊಂಡು ತಾನೇ ಮುಖ್ಯಸ್ಥನಾಗಲಿಕ್ಕೆ ಹವಣಿ ಸುತ್ತಿದ್ದನು. ಪ್ರತಿಯೊಬ್ಬ ಸರದಾರನು ಬಂಡು* ಎಬ್ಬಿಸಲಿಕ್ಕೆ ಹೊಂಚು ಹಾಕಿಕೊಂಡಿದ್ದನು. ಈ ಸ್ಥಿತಿಯು ಬಾಬರನಂತಹ ಎದೆಗಾರನಿಗೆ ಅತ್ಯನು ಕೂಲವಾದ ಸಮಯವೇ ಸರಿ. ಅವನು ಕಾಬೂಲಿನ ಸುಲ್ತಾನನಾದ ಕೂಡಲೆ ಈ ಭರತ ಖಂಡದ ಮೇರೆಯಲ್ಲಿದ್ದ **ಚೀರಾ** ಎಂಬ ಪ್ರಾಂತದ ಮೇಲೆ ದಂಡೆತ್ತಿ ಬರಲಿಕ್ಕೆ ಅವನಿಗೆ ಕರೆ† ಬಂತು. ಅವನು ಸಂತೋಷ ದಿಂದ ಆ ಆಮಂತ್ರಣವನ್ನು ಸ್ವೀಕರಿಸಿ ತನ್ನ ದಂಡನ್ನು ಸಜ್ಜುಮಾಡಿಕೊಂಡು **ಜಲಾಲಬಾದಿ**ನ ಹಾದಿಯನ್ನು ಹಿಡಿದು **ಪಿಷಾವರಿ**ನ ಮುಂದೆ **ಸಿಂಧು** ನದಿಯನ್ನು ದಾಟ ಅದರ ದಡದಲ್ಲಿಯೇ ಕೆಲದಿನ ಪ್ರವಾಸ§ ಮಾಡಿ, **ಘುಜನಿಯ** ದಾರಿಯಿಂದ **ಕಾಬೂಲಿಗೆ** ಹಿಂದಿರುಗಿ ಹೋದನು (೧೫೦೫). ಈ ದಂಡಯಾತ್ರೆಯಲ್ಲಿ ಭಾರತ ಭೂಮಿಯ ವಿಚಿತ್ರವಾದ ವೈಭವವು ಅವನ ಕಣ್ಣಿಗೆ ಬಿತ್ತು. ಈ ವಿಷಯವಾಗಿ ಅವನು ತನ್ನ ಸ್ವಚರಿತ್ರದಲ್ಲಿ ಬರೆದಿರು ವುದೇನಂದರೆ:—"ಉಷ್ಣಪ್ರದೇಶವಾದ ಈ ಹಿಂದೂಸ್ಥಾನದೇಶವನ್ನು ನಾನು ಹಿಂದೆ ಎಂದೂ ನೋಡಿರಲಿಲ್ಲ. ನೋಡಿದ ಕೂಡಲೆ ಇದು ಹೊಸ ಸೃಷ್ಟಿ ಯಂತೆ ಕಂಡಿತು. ಇಲ್ಲಿಯ ಮರಗಳೂ, ಬಳ್ಳಿಗಳೂ, ಗಿಡಗಳೂ, ವನ್ಯ ಪಶುಗಳೂ ಸೋಜಿಗವಾಗಿ ತೋರಿ ಬಂದುವು. ಇವನ್ನೆಲ್ಲ ನೋಡಿ ನಾನು ಆಶ್ಚರ್ಯ-ಚಕಿತನಾದೆನು."

ಮರುವರುಷ **ಬಾಬರನು ಯುಜಬೆಕ್** ಜನರಿಗೆ ವಿರುದ್ಧವಾಗಿ **ಹಿರಾತಿನ** ಸುಲ್ತಾನನಿಗೆ ನೆರವಾಗಲಿಕ್ಕೆ ಹೋದನು. ಆದರೆ ಆ ಸುಲ್ತಾ ನನು ಸೋಮಾರಿಯೂ ದುಂದುಗಾರನೂ ಆಗಿದ್ದುದರಿಂದ ಅಲ್ಲಿ ಸುಮ್ಮನೆ ಕುಳಿತು ಕುಳಿತು ಬೇಸತ್ತು, ಚಳಿಗಾಲದಲ್ಲಿ ತಿರುಗಿ **ಕಾಬೂಲಿಗೆ** ಹೊರ

---

* ದಂಗೆ. † ಆಹ್ವಾನ § ಪ್ರಯಾಣ

ಟನು. ಹಾದಿಯಲ್ಲಿ ಅವನು ಅನುಭವಿಸಿದ ವಿಪತ್ತುಗಳನ್ನು ಹೇಳಲಳವಲ್ಲ. ಒಂದು ದಿನ ಸಾಯಂಕಾಲ ದೊಡ್ಡ ಬಿರುಗಾಳಿ ಎದ್ದಿತು. ಬರ್ಫವು* ಗುಡ್ಡದ ಮೇಲಿಂದ ಧಡಧಡನೆ ಬೀಳಲಾರಂಭಿಸಿತು. ದಂಡಾಳುಗಳಿಗೆ ಮುಂದೆ ಹಜ್ಜೆಯಿಡಲಿಕ್ಕೆ ಧೈರ್ಯವಾಗಲಿಲ್ಲ. ಇಂತಹ ಸಂದರ್ಭದಲ್ಲಿ ಬಾಬರನು ತೋರಿಸಿದ ಸ್ವಾರ್ಥತ್ಯಾಗವೂ, ಸ್ವಜನಾಭಿಮಾನವೂ ಹೊಗಳತಕ್ಕಂತಹವೇ ಸರಿ. ಅವನು ನೆರೆಯಲ್ಲಿದ್ದ ಒಂದು ಸಣ್ಣ ಗವಿಯೊಳಗೆ ತನ್ನ ಜನರನ್ನು ಕುಳ್ಳಿರ ಹೇಳಿ ಗುಡ್ಡದ ಮೇಲಕ್ಕೆ ಹತ್ತಿ ನೋಡುತ್ತಿರಲು, ಅಲ್ಲಿ ಒಂದು ಕಡೆ ಗುಹೆಯಿರುವಂತೆ ತೋರಿದ್ದರಿಂದ ತಾನು ಸ್ವತಃ ಗುಡ್ಡದ ಓರೆಯನ್ನು§ ಅಗೆಯಲಾರಂಭಿಸಿದನು. ಧರ್ಮಕರ್ಮ-ಸಂಯೋಗದಿಂದ ಅಲ್ಲೊಂದು ದೊಡ್ಡ ನೆಲಮನೆಯೇ ಸಿಕ್ಕಿತು. ದಂಡಿನವರು ಅಲ್ಲಿ ಪ್ರಶಸ್ತವಾಗಿ ವಿಶ್ರಮಿಸಿ ಬಿರುಗಾಳಿಯು ನಿಂತ ಬಳಿಕ ಮುಂದಕ್ಕೆ ಹೊರಟರು.

ಮರುವರುಷ **ಯುಜಬೆಕ್ಕರು ಹಿರಾತ**ನ್ನು ಹಿಡಿದುಕೊಂಡು **ಕಂದಹಾರಿ**ನ ಮೇಲೆ ದಂಡೆತ್ತಿ ಹೋದರು. ಅಲ್ಲಿಯ ಸುಬೇದಾರನಿಗೆ ನೆರವಾಗಲಿಕ್ಕೆ ಬಾಬರನು ಹೋಗುವಷ್ಟರಲ್ಲಿ **ಕಂದಹಾರು** ಹಗೆಗಳ ಕಯ್ಸೇರಿತ್ತು. ಆದರೂ ಬಾಬರನು ಧೈರ್ಯಮಾಡಿ ಆವೂರ ಹತ್ತಿರದಲ್ಲೇ ಪಾಳೆಯಹಾಕಿದನು. ಹಗೆಗಳು ಅವನ ಮೇಲೆ ಬಂದು ಬೀಳಲು, ಅವನು ಯುಕ್ತಿಯಿಂದಲೂ ಶೌರ್ಯದಿಂದಲೂ ಅವರನ್ನು ಮುರಿಯಬಡಿದು ಓಡಿಸಿ, **ಕಂದಹಾರ**ನ್ನು ಹಿಡಿದುಕೊಂಡು, ಅದನ್ನು ಸುಲಿಗೆ ಮಾಡಿದನು. ಈ ಸುಲಿಗೆಯಿಂದ ಅವನಿಗೆ ಅಪಾರಸಂಪತ್ತೂ ವಿಪುಲಕೀರ್ತಿಯೂ ಬಂದವು. ಬಾಬರನು ಮುಂದೆ ಬಹಳ ದಿವಸ ಅಲ್ಲಿ ನಿಲ್ಲದೆ ತನ್ನ ತಮ್ಮನೊಬ್ಬನನ್ನು **ಕಂದಹಾರಿನ** ಸಂರಕ್ಷಣಕ್ಕಿಟ್ಟು ತಾನು ಕಾಬೂಲಿಗೆ ಮರಳಿ ಬಂದನು. ಮುಂದೆ ಕೆಲವು ದಿವಸದಲ್ಲೆ **ಯುಜಬೆಕ್ಕರ** ದಳವಾಯಿಯಾದ **ಸೈಬಾನಿಯು** ಬಾಬರನ ತಮ್ಮನನ್ನು ಅಲ್ಲಿಂದೋಡಿಸಿ **ಕಂದಹಾರ**ನ್ನು ಹಿಡಿದುಕೊಂಡನೆಂಬ ಸುದ್ದಿಯು ಬಂತು (೧೫೦೭).

ಮುಂದೆ ಏಳೆಂಟುವರ್ಷ ಬಾಬರನು ಯುಜಬೆಕ್ಕರೊಡನೆ **ಸಮರ್ಕಂದಿ**ಗೋಸ್ಕರ ನಿರರ್ಥಕವಾಗಿ ಕಾದಿದನು. ಕಟ್ಟಕಡೆಗೆ ಬೇಸತ್ತು ಅವನು ಅದರ ಆಸೆಯನ್ನೇ ತೊರೆದು **ಕಂದಹಾರ**ನ್ನೂ ಅದಕ್ಕೆ ಒಳಪಟ್ಟ

* ಮಂಜಿನಗಡ್ಡೆ § ಇಳಿಜಾರು

ಪ್ರದೇಶವನ್ನೂ ಹಿಡಿದುಕೊಂಡು ತನ್ನ ರಾಜ್ಯವನ್ನು ತಹಬಂದಿಗೆ ತರತೊಡಗಿದನು. ಅಷ್ಟರಲ್ಲಿ ನಮ್ಮ ಇಂಡಿಯಾದೇಶದೊಳಗೆ ಹಬ್ಬಿದ ಗೊಂದಲವು ಅವನ ಲಕ್ಷ್ಯವನ್ನು ಎಳೆಯಿತು. ಅದು ಹೇಗೆಂದರೆ:—

೧೬ನೆಯ ಶತಮಾನದ ಆರಂಭದಲ್ಲಿ ಡಿಲ್ಲಿಯ ಸುಲ್ತಾನನಾದ **ಸಿಕಂದರ ಲೋದಿಯು** ಸತ್ತ ಬಳಿಕ ಅವನ ಮಗನಾದ **ಇಭ್ರಾಹಿಮನು** ಪಟ್ಟವೇರಿದನು (೧೫೧೬). ಅವನ ಸರದಾರರು ಒಟ್ಟುಗೂಡಿ ದಂಗೆಯೇಳಲು ಸುಲ್ತಾನನು ಅವರನ್ನು ಅಡಗಿಸಲು ಪ್ರಯತ್ನಿಸಿದನು. **ಪಂಜಾಬಿನ** ಸುಬೇದಾರನಾದ **ದೌಲತ್ತುಖಾನ ಲೋದಿಯು** ಬಾಬರನ ನೆರವನ್ನು ಬೇಡಿದ್ದರಿಂದ ಅವನು ದಂಡೆತ್ತಿ ಬಂದು ಸುಲ್ತಾನನ ದಂಡನ್ನು ಸೋಲಿಸಿದನು. ಅಷ್ಟರೊಳಗೆ **ಬಾಬರ್ ದೌಲತ್ತುಖಾನ**ರಿಗೆ ಮನಸ್ತಾಪವುಂಟಾದ್ದರಿಂದ ಬಾಬರನು ಕಾಬೂಲಿಗೆ ಹಿಂದಿರುಗಿದನು (೧೫೨೪). ಮರುವರುಷ ಸುಲ್ತಾನನ ತಮ್ಮನಾದ **ಅಲ್ಲಾವುದ್ದೀನ**ನು ಸಹಾಯಬೇಡಿದ್ದರಿಂದ ಬಾಬರನು ತನ್ನ ಹಿರಿಮಗನಾದ ಹುಮಾಯೂನನೊಡನೆ ಮತ್ತೆ ದಂಡೆತ್ತಿ ಬಂದು **ಸಿಯಾಲಕೋಟ್, ಕಲಾನಾರ, ಮಿಲವಟಿ** ಇವುಗಳ ಮಾರ್ಗವಾಗಿ ನಡೆದು ಡಿಲ್ಲಿಯ ವಾಯುವ್ಯಕ್ಕೆ ೫೩ ಮೈಲು ದೂರದಲ್ಲಿರುವ **ಪಾಣಿಪತ್** ಎಂಬಲ್ಲಿ ಠಾಣೆಯು ಹಾಕಿದನು. ಇಭ್ರಾಹಿಮ ಸುಲ್ತಾನನು ೧ ಲಕ್ಷ ದಂಡು ತೆಗೆದುಕೊಂಡು ಬಂದು ಬಾಬರನ ದಂಡಿನ ಮೇಲೆ ಬಿದ್ದು ವೀರಾವೇಶದಿಂದ ಕಾದಿ ರಣದಲ್ಲಿ ಮಡಿಯಲು ಜಯಶ್ರೀಯು ಬಾಬರನ ಕೊರಳಲ್ಲಿ ಮಾಲೆ ಹಾಕಿದಳು (೨೧ ಎಪ್ರಿಲ್ ೧೫೨೬). ಮುಂದೆ ಕೆಲವು ದಿವಸಗಳಲ್ಲೇ ಅವನು **ಡಿಲ್ಲಿ-ಆಗ್ರಾ** ಪಟ್ಟಣಗಳನ್ನು ಹಿಡಿದುಕೊಂಡನು.

ಈ ಗೆಲವಿನಿಂದ ಡಿಲ್ಲಿರಾಜ್ಯದ ರಾಜಧಾನಿಯು ಬಾಬರನ ಕಯ್ಸೇರಿದರೂ ಸಣ್ಣ ಪ್ರದೇಶ ಮಾತ್ರ ಅವನ ವಶಕ್ಕೆ ಬಂದಂತಾಯಿತು. **ಅಯೋಧ್ಯಾ, ಜೋನಪುರ, ಪಶ್ಚಿಮವಿಹಾರ, ಬಂಗಾಳ, ಗುಜರಾತು, ಮಾಳವಾ** ಈ ಪ್ರಾಂತಗಳಲ್ಲಿ **ಮುಸಲ್ಮಾನ** ಸರದಾರರು ಸ್ವತಂತ್ರವಾಗಿ ಆಳುತ್ತಿದ್ದರು. **ಮಾಳವದ** ಒಂದು ಭಾಗದಲ್ಲಿದ್ದ **ರಣಥಂಬೇರ, ಸಾರಂಗಪುರ, ಭಿಲಸಾ, ಚಾಂದೇರಿ, ಚಿತ್ತೂರು** ಮುಂತಾದ ಕೋಟೆಯ ಸ್ಥಳಗಳು ಆ ಕಾಲದಲ್ಲಿ ಹೆಸರುವಾಸಿಯಾಗಿದ್ದ **ಸಂಗರಾಜನ** ವಶದಲ್ಲಿದ್ದುವು. ದಕ್ಷಿಣದಲ್ಲಿ ಬ್ರಾಹ್ಮಣಿ (ಬಹಾಮನಿ) ರಾಜ್ಯವೂ **ವಿಜಯ**

**ನಗರದ** ರಾಜ್ಯವೂ ಪ್ರಬಲವಾಗಿದ್ದುವು. ಇದಲ್ಲದೆ ಬಾಬರನ ದಂಡಿನವರು ಇಲ್ಲಿಯ ಬಯಲುನಾಡನ್ನು ನೋಡಿ ದಿಗ್ಭ್ರಮೆಗೊಂಡು, ತಮ್ಮ ದೇಶಕ್ಕೆ ಹಿಂದಿರುಗಿ ಹೋಗಬೇಕೆಂದು ಹಟಹಿಡಿದರು.

ಆದರೆ ಬಾಬರನು ಧೈರ್ಯಶಾಲಿಯೂ, ದೃಢಸಂಕಲ್ಪನೂ, ವ್ಯವಹಾರ ಚತುರನೂ ಆದ್ದರಿಂದಲೂ, ಈ ಸಂಪತ್ಸಮೃದ್ಧಿಯುಳ್ಳ ದೇಶವನ್ನು ನೋಡಿ ಮರುಳಾದ್ದರಿಂದಲೂ, ಅವನು ತನ್ನ ಸೈನಿಕರನ್ನು ಕರೆದು ಇಷ್ಟು ಕಷ್ಟಪಟ್ಟು ಸಂಪಾದಿಸಿದ ಇಂತಹ ಸಂಪತ್ತಿಯುಳ್ಳ ದೇಶವನ್ನು ಬಿಟ್ಟು ಹೋಗುವುದು ತೀರ ಹೆಡ್ಡತನವೆಂತಲೂ, ಇಷ್ಟೂ ಮೀರಿ ಹೋಗಲೆಳಸುವವರು ಹೋಗಬಹುದೆಂತಲೂ, ತಾನು ಮಾತ್ರ ತಿರುಗಿ ಹೋಗಲೆಣಿಸುವದಿಲ್ಲವೆಂತಲೂ ಖಂಡಿತವಾಗಿ ಹೇಳಿ, ಅವರನ್ನು ಇಲ್ಲಿರಲಿಕ್ಕೆ ಒಡಂಬಡಿಸಿದನು. ಈ ಕೃತನಿಶ್ಚಯದ ಸುದ್ದಿಯು ಹಬ್ಬಿದ ಕೂಡಲೆ **ಇಭ್ರಾಹಿಮ ಲೋಡಿಯ** ಪಕ್ಷದ ಎಷ್ಟೋ ಮುಸಲ್ಮಾನರೂ ಕೆಲವು ಹಿಂದೂ ಸರದಾರರೂ ಬಂದು ಅವನ ಶರಣು ಹೊಕ್ಕರು. ಬಳಿಕ ಬಾಬರನು **ರೋಹಿಲ್‌ಖಂಡದ** ಹೆಚ್ಚಿನ ಭಾಗವನ್ನು ಗೆದ್ದು, ತನ್ನ ಮಗನಾದ **ಹುಮಾಯೂನನನ್ನು** ಕಳುಹಿಸಿ ಅವನ ಮೂಲಕ **ಅಯೋಧ್ಯಾ ಜೋನಪುರ** ಪ್ರಾಂತಗಳನ್ನು ಹಿಡಿದುಕೊಂಡು, ದಿನದಿನಕ್ಕೆ ಪ್ರಬಲನಾಗುತ್ತಿದ್ದ ಉದಯಪುರದ ರಾಜನಾದ **ಸಂಗರಾಜ**ನನ್ನು ಮುರಿಬಡಿಯುವ ಉದ್ದೇಶದಿಂದ ದಂಡೆತ್ತಿ ಹೋಗಿ **ಸಿಕ್ರಿ** ಎಂಬಲ್ಲಿ ಪಾಳೆಯ ಹಾಕಿದನು (೧೫೨೭).

ಇಲ್ಲಿರುವಾಗ ಮುಸಲ್ಮಾನರಿಗೂ ರಜಪೂತರಿಗೂ ಆದ ಹಲವು ಸಣ್ಣಪುಟ್ಟ ಕಾಳಗಗಳಲ್ಲಿ ರಜಪೂತರು ವಿಜಯಿಗಳಾದರು. ಆದ್ದರಿಂದ ಬಾಬರನಿಗೆ ವಿಷಾದವಾಗಿ ಅವನು ಭಕ್ತಿಪೂರ್ವಕವಾಗಿ ವಿಚಾರಮಾಡಿ ತಾನು ತನ್ನ ಧರ್ಮಕ್ಕೆ ವಿರುದ್ಧವಾಗಿ ಸಾರಾಯಿ ಕುಡಿಯುತ್ತಿರುವುದರಿಂದ ಈ ಬಗೆಯ ಹಾನಿಗೊಳಗಾದೆನೆಂದು ನೆನಸಿ, ವೈರಾಗ್ಯದಿಂದ ತನ್ನ ಪಾಳೆಯದಲ್ಲಿದ್ದ ಎಲ್ಲಾ ಸಾರಾಯಿಯನ್ನು ಉರುಳಿಸಿ ಬಿಟ್ಟದ್ದಲ್ಲದೆ ತಾನು ಕುಡಿಯುತ್ತಿದ್ದ ಚಿನ್ನ ಬೆಳ್ಳಿಯ ಪಾತ್ರೆಗಳನ್ನು ಒಡಿಸಿ, ಮಾರಿ ಬಂದ ಹಣವನ್ನು ಬಡವರಿಗೆ ದಾನ ಮಾಡಿಬಿಟ್ಟನು!! ವಾಚಕರೇ ಇದು ಎಂತಹ ಮನೋನಿಗ್ರಹವು! ಇಂತಹ ಸಂಯಮನ-ಶಕ್ತಿಗೆ ಮೆಚ್ಚಿ ದೇವರು ಅವನಿಗೆ ಈ ಭರತ ಭೂಮಿಯ

ಸಾಮ್ರಾಜ್ಯವನ್ನಿತ್ತನೆಂಬಲ್ಲಿ ಆಶ್ಚರ್ಯವೇನು? ಹೆಸರುಗೊಂಡ **ಸಿಕ್ರಿ** ಕಾಳಗದಲ್ಲಿ* ಮುಂದೆ ಕೆಲವು ದಿವಸದೊಳಗೆ ಬಾಬರನು ಪೂರ್ಣ ಜಯಹೊಂದಿ **ರಾಜಪುತಾನ ಮಾಳವಾ**ಗಳ ಒಡೆಯನಾದ್ದಲ್ಲದೆ ದುವಾಬ (Doab) ಪ್ರಾಂತಕ್ಕೂ, ಭದ್ರವಾದ **ಚಾಂಡೇರಿ** ಕೋಟೆಗೂ **ಲಕ್‍ನೊ** ಪಟ್ಟಣಕ್ಕೂ ಅಧಿಪತಿಯಾದನು.

ಈಗ ಮಾತ್ರ ಬಾಬರನಿಗೆ ಸ್ವಲ್ಪ ವಿಶ್ರಾಂತಿ ದೊರೆಯಿತು. ಆದ್ದರಿಂದ ಅವನು ತನ್ನ ರಾಜ್ಯವನ್ನು ಸುವ್ಯವಸ್ಥಿತವನ್ನಾಗಿ ಮಾಡುವದರಲ್ಲಿಯೂ, **ಧೋಲಾಪುರ**ದಲ್ಲಿ ಒಂದು ರಮಣೀಯವಾದ ಉದ್ಯಾನವನ್ನು ಮಾಡಿಸುವುದರಲ್ಲಿಯೂ ತೊಡಗಿದನು. ಆದರೆ ರಾಜರಿಗೆ ಮನಶ್ಶಾಂತಿ ಎಲ್ಲಿಯದು? **ಜೋನಪುರ ವಿಹಾರ**ದ ಜನರು **ಲೋಡಿ** ಮನೆತನದ ಪಕ್ಷ ಹಿಡಿದು ಒಳಸಂಚು ನಡಿಸಿದ ಸುದ್ಧಿಯು ಬಂತು. ಕೂಡಲೆ ಬಾಬರನು ತ್ವರಿತದಿಂದ ಆಗ್ರಕ್ಕೆ ತಿರುಗಿ ಹೋಗಿ ಇದ್ದಷ್ಟು ದಂಡನ್ನು ತೆಗೆದುಕೊಂಡು ಹೊರಟು **ಚುನಾರ್** ಕೋಟೆಯನ್ನು ಮುತ್ತಿದ್ದ ಲೋಡಿಯ ದಂಡನ್ನು ಓಡಿಸಿದನು. ಬಳಿಕ ದ್ರೋಹದಿಂದ ಹಗೆಗಳನ್ನು ಕೂಡಿದ್ದ ತನ್ನ ದಳವಾಯಿಯನ್ನು ಸೋಲಿಸಿ **ಗಂಗಾ-ಗೋಗ್ರಾ** ನದಿಗಳ ಸಂಗಮದಲ್ಲಿ ಪಾಳೆಯ ಹಾಕಿಕೊಂಡಿದ್ದ **ಬಂಗಾಲ**ದ ನವಾಬನ ದಂಡನ್ನು ಚಲ್ಲಾಪಿಲ್ಲಿ ಮಾಡಿ ಪಶ್ಚಿಮ ವಿಹಾರವನ್ನು ತನ್ನ ರಾಜ್ಯಕ್ಕೆ ಸೇರಿಸಿ, ಅವನೊಡನೆ ಒಪ್ಪಂದ ಮಾಡಿಕೊಂಡು ಜಯಭೇರಿ ಹೊಡಿಸುತ್ತ ಆಗ್ರಕ್ಕೆ ತಿರುಗಿ ಬಂದನು (೧೫೨೯).

ಇಲ್ಲಿಗೆ ಬಾಬರನ ಕಥೆ ಮುಗಿದಂತಾಯಿತು. ಕೆಲವು ದಿವಸದಲ್ಲೇ ಅವನ ದೇಹ ಪ್ರಕೃತಿಯು ಕೆಟ್ಟಿತು. ಆ ಸುದ್ದಿಯನ್ನು ಕೇಳಿ **ಹುಮಾಯೂನನು ಬದಕ್ಷಾನಿನಿಂದ** ಬಂದು ತಾನೇ ಅಸ್ವಸ್ಥನಾದನು. ಅವನಿಗೆ ಗುಣವಾಗುವಷ್ಟರಲ್ಲಿ ಬಾಬರನೇ ರೋಗಕ್ಕೊಳಗಾಗಿ ಮರಣ ಹೊಂದಿದನು (೧೫೩೦). ಅವನ ಶವವನ್ನು ಕಾಬೂಲಿನಲ್ಲಿ ಹುಗಿದರು. ಮುಂದೆ ಶಹಾಜಹಾನ ಬಾದಶಹನು ಆ ಸ್ಥಳದಲ್ಲಿ ಸಂಗಮರವರಿ ಕಲ್ಲಿನ ಮಸೀದೆಯನ್ನು ಕಟ್ಟಿಸಿದನು (೧೭೦೭).

---

* ಈ ಕಾಳಗವು ಸಿಕ್ರಿಯ ನೆರೆಯಲ್ಲಿದ್ದ ಭರತಪುರ ಸಂಸ್ಥಾನಕ್ಕೆ ಸೇರಿದ ಖಾನವಾ ಎಂಬ ಹಳ್ಳಿಯಲ್ಲಿ ಆಯಿತು (೧೭ ಮಾರ್ಚ್ ೧೫೨೭).

# ೨ನೆಯ ಅಧ್ಯಾಯ

## ಅಕ್ಬರನ ಬಾಲ್ಯವೂ ಬೈರಾಮ್‌ಖಾನನ ಆಡಳಿತವೂ



ಹುಮಾಯೂನನು

ತಂದೆ ಸತ್ತ ಬಳಿಕ **ಹುಮಾಯೂನನು** ಯಾರ ಅಡ್ಡಿಯೂ ಇಲ್ಲದೆ ಗಾದಿಗೆ ಬಂದನು. ಇವನು ಬಾಬರನಂತೆ ದೃಢಮನಸ್ಕನಲ್ಲ; ಸೋಮಾರಿ,

ಚಂಚಲ, ಜಂಬಗಾರ ಮತ್ತು ದುಂದುಗಾರ. ಆದರೂ ಧೈರ್ಯಶಾಲಿ. ಅಪೀಮು ತಿನ್ನುವ ಕೆಟ್ಟ ಅಭ್ಯಾಸವಿತ್ತು. ಇವನು ದೊರೆಯಾದ ಕೂಡಲೆ ತಂದೆ ಸಾಯುವಾಗ ಕೊಟ್ಟದ್ದ ಮಾತಿನಂತೆ ಕಾಬೂಲನ್ನೂ ಸಿಂಧೂ ನದಿಗೆ ಪಡುವಲಲ್ಲಿದ್ದ ಇತರ ಪ್ರಾಂತಗಳನ್ನೂ ತನ್ನ ತಮ್ಮನಾದ **ಕಾಂರಾನ**ನಿಗೆ ಬಿಟ್ಟುಕೊಟ್ಟು ಹಿಂದೂಸ್ಥಾನದ ಪ್ರಾಂತಗಳನ್ನು ತಾನೇ ಆಳತೊಡಗಿದನು. ಉಳಿದ ತಮ್ಮಂದಿರಿಗೆ ತನ್ನ ಕೈ ಕೆಳಗೆ ಸಾಮಂತಾಧಿಕಾರವನ್ನು ಕೊಟ್ಟು ಇಟ್ಟುಕೊಂಡಿದ್ದನು. ಹಾಗೂ ಹೀಗೂ ಎಂಟು ವರುಷದ ರಾಜ್ಯಭಾರ ಮಾಡಿದ ಬಳಿಕ ಬಂಗಾಳದಲ್ಲಿ ನೆಲೆಗೊಂಡಿದ್ದ ಸೂರ್ ವಂಶದ **ಷೇರ್ ಖಾನ**ನೆಂಬ ಅಫ್ಘಾನ್ ಸರದಾರನು ದಂಗೆಯೆದ್ದನು. ಹುಮಾಯೂನನ ತಮ್ಮಂದಿರಿಂದ ಈ ಕಾಲದಲ್ಲಿ ಸ್ವಲ್ಪವಾದರೂ ಸಹಾಯವಾಗಲಿಲ್ಲ. ಆದ್ದರಿಂದ **ಷೇರ್ ಖಾನ**ನು ಗಂಗಾನದೀ ತೀರದಲ್ಲಿರುವ **ಚೌಸಾ** ಎಂಬಲ್ಲಿ ಹುಮಾಯೂನನನ್ನು ಸೋಲಿಸಿದನು (೧೫೩೯). ಬಹಳ ಕಷ್ಟದಿಂದ ಹುಮಾಯೂನನು ಶೋಣ ನದಿಯನ್ನು ದಾಟಿ ಪಾರಾದನು.

ಮಾರನೆಯ ವರ್ಷ, ಅಂದರೆ, ೧೫೪೦ನೆಯ ಇಸವಿಯ ಎಪ್ರೆಲ್ ತಿಂಗಳಲ್ಲಿ **ಕನೋಜಿ**(೧)ನ ಕಾಳಗವಾಯಿತು. ಅದರಲ್ಲಿ **ಷೇರ್ ಖಾನ**ನು **ಹುಮಾಯೂನ**ನನ್ನು ಸೋಲಿಸಿ ಓಡಿಸಿ ಬಿಟ್ಟನು. ತಂದೆ ಗಳಿಸಿದ ದೊಡ್ಡ ರಾಜ್ಯವನ್ನು ಕಳೆದುಕೊಂಡು, **ಹುಮಾಯೂನ**ನು **ಸಿಂಧುದೇಶಕ್ಕೆ** ಓಡಿ ಹೋಗಿ, ಅಲ್ಲೊಂದು ರಾಜ್ಯವನ್ನು ಸ್ಥಾಪಿಸುವ ಆಲೋಚನೆಯಿಂದ ತನ್ನ ತಮ್ಮನಾದ **ಹಿಂಡಾಲ**ನನ್ನು **ಸೆಹವಾನ್** (೨) ಪ್ರಾಂತವನ್ನು ಹಿಡಿದುಕೊಳ್ಳಲಿಕ್ಕೆ ಕಳುಹಿ, ತಾನು **ಬಕ್ಕರ**ಕ್ಕೆ (೩) ಮುತ್ತಿಗೆ ಹಾಕಿದನು (೧೫೪೧). ಅಷ್ಟರಲ್ಲಿ ಯಾವದೋ ಕಾರಣದಿಂದ ಅವನಿಗೆ ತನ್ನ ತಮ್ಮನ ಮೇಲೆ ಸಂಶಯವು ಬಂತು. ಆದುದರಿಂದ ಹುಮಾಯೂನನು ತನ್ನ ತಮ್ಮನಿದ್ದ **ಪಾಟೂರ**(೪)ಕ್ಕೆ ಹೋಗಿ, ಅಲ್ಲಿ ಅವನಿಂದ ಅದರ ಸತ್ಕಾರವನ್ನು ಹೊಂದಿದನು. **ಹುಮಾಯೂನ**ನು ಒಂದು ದಿನ ಊಟದ ಸಮಾರಂಭವು ನಡೆದಾಗ ಅಲ್ಲಿಗೆ ಊಟಕ್ಕೆ ಬಂದವರಲ್ಲಿ ಒಬ್ಬ ಸರದಾರನ ಮಗಳಾದ **ಹಾಮೀ**

ದಾಯೆಂಬವಳ ಮೇಲೆ ಕಣ್ಣಿಟ್ಟು, ಅವಳ ಚೆಲುವಿಕೆಯನ್ನೂ ಅಂದಚಂದ ಗಳನ್ನೂ ಒನಪೊಯ್ಯಾರವನ್ನೂ ನೋಡಿ ಮೆಚ್ಚಿ ಮರುಳಾಗಿ ಮನಸೋತನು. ಹಾಮಿದಳನ್ನು ಮತ್ತೊಬ್ಬ ಗೃಹಸ್ಥನಿಗೆ ಕೊಡಬೇಕೆಂದು ಗೊತ್ತಾಗಿದ್ದರೂ, ಹುಮಾಯೂನನು ಪಟ್ಟು (ಹಟ) ಹಿಡಿದು ಅವಳನ್ನು ಕೂಡಲೆ ಮದುವೆ ಮಾಡಿಕೊಂಡನು. ಆಗತಾನೆ ಹಾಮಿದೆಗೆ ೧೪ನೆಯ ವರ್ಷ ತುಂಬಿತ್ತು. ಮದುವೆಯಾದ ಕೆಲವು ದಿವಸಗಳಲ್ಲಿಯೇ ಗಂಡಹೆಂಡಿರು ಬಕ್ಕರದಲ್ಲಿದ್ದ ತಮ್ಮ ಪಾಳೆಯಕ್ಕೆ ತೆರಳಿದರು.



ಹಾಮಿದಾ ಬಾನು ಬೇಗಮ್

ಈ ಕಾಲದಲ್ಲಿ ಹುಮಾಯೂನನ ಮನಸ್ಸು ಅಸ್ವಸ್ಥವಾಗಿತ್ತು. ಏಕೆಂದರೆ ಯಾವ ಕೆಲಸದಲ್ಲಿಯಾದರೂ ಅವನಿಗೆ ಜಯವಾಗುವಂತೆ ಕಾಣ

ಲಿಲ್ಲ. **ಬಕ್ಕರ**ವು ಅವನ ಕಯ್ಸೇರಲಿಲ್ಲ; ಇಷ್ಟೇ ಅಲ್ಲ, ಶತ್ರುಗಳು ಅವನನ್ನು ಅಲ್ಲಿಂದೋಡಿಸಿ ಬಿಟ್ಟರು. ಆಗ ಅವನು **ಮಾರವಾಡ**ದ ಗುಡ್ಡಗಾಡಿಗೆ ಹೋಗಿ (೧೫೪೨), ಆಲ್ಲಿಂದ **ಜಸಲ್ಮೀರ**ಕ್ಕೆ ತೆರಳಿದನು. ಅಲ್ಲಿಯ ಅರಸನು ಅವನಿಗೆ ಆಶ್ರಯ ಕೊಡದಿದ್ದುದರಿಂದ ಅವನು **ಜೋಧಪುರ**ದರಸನಾದ **ಮಾಲದೇವ**ನಿಗೆ ಮರೆಹೋದನು. ಇವನು **ಹುಮಾಯೂನ**ನನ್ನು **ಷೇರಷಹ**ನಿಗೆ ಹಿಡಿದುಕೊಡುವ ಆಲೋಚನೆಯನ್ನು ಮಾಡಿದ್ದರಿಂದ ನಿರ್ಭಾಗ್ಯನಾದ **ಹುಮಾಯೂನ**ನು ಅಲ್ಲಿಂದ ಹೊರಟು ಉಸುಬಿನ ಬಯ ಲಲ್ಲಿ ತೊಳಲಿ ಬಳಲಿ ಬೇಸತ್ತು ಬಸವಳಿದು ಕಟ್ಟಕಡೆಗೆ ಆಗಷ್ಟ್ ೨೨ನೆಯ ದಿವಸ **ಉಮರ**ಕೋಟೆಗೆ (೫) ಹೋಗಿ ಮುಟ್ಟಿದನು. ಅಲ್ಲಿಯ **ರಾಣ**ನು ಅವನಿಗೆ ಆತಿಥ್ಯವನ್ನು ಚೆನ್ನಾಗಿ ಮಾಡಿದನು. ಅಲ್ಲಿರುವಾಗ **ಹಾಮಿದಾ ಬಾನು ಬೇಗಮ್ಮ**ಳು ನವಂಬರ ೨೩ನೆಯ ಗುರವಾರದ ದಿವಸ **ಅಕ್ಬರ**ನನ್ನು ಹಡೆದಳು. ಇದಕ್ಕೂ ನಾಲ್ಕು ದಿವಸ ಮೊದಲು **ಹುಮಾಯೂನನು ಜನ್ನ** ಪ್ರಾಂತವನ್ನು ಹಿಡಿದುಕೊಳ್ಳಲಿಕ್ಕೆ ಹೋಗಿದ್ದನು. ಅವನು **ಅಕ್ಬರ**ನ ಜನನದ ಸುದ್ದಿಯನ್ನು ಕೇಳಿದ ಕೂಡಲೆ ದೇವರ ಉಪಕಾರವನ್ನು ಸ್ಮರಿಸಿ ಸರದಾರರ ಆನಂದದರ್ಶಕವಾದ ಮಾತುಗಳನ್ನು ಕೇಳಿ, ತನ್ನ ಬಂಡಾರದವ ನಾದ **ಜೂಹರ**ನನ್ನು ಕರೆದು ಬಂಡಾರದಲ್ಲಿಯೇನುಂಟು ಎಂದು ಕೇಳಿದು ದಕ್ಕೆ **ಜೂಹರ**ನು—೨೦೦ ಕುರಾಸಾನದ ನಾಣ್ಯಗಳೂ ಒಂದು ಬೆಳ್ಳಿಯ ಬಳೆಯೂ ಒಂದು ಕಸ್ತೂರಿಯ ಚೀಲವೂ ಇರುತ್ತವೆ. ಆದರೆ ಇವುಗಳೊ ಳಗೆ ಮೊದಲಿನೆರಡು ವಸ್ತುಗಳನ್ನು ಅದರದರ ಒಡೆಯರಿಗೆ ತಿರುಗಿ ಕೊಟ್ಟು ದರಿಂದ ಈಗ ಕಸ್ತೂರಿಯ ಚೀಲವು ಮಾತ್ರ ಉಳಿದಿರುತ್ತದೆಂದು ಹೇಳಿದನು. ಆಗ **ಹುಮಾಯೂನನು** ಆ ಚೀಲವನ್ನು ತರಿಸಿ ಅದರಲ್ಲಿದ್ದ ಕಸ್ತೂರಿಯನ್ನು ತನ್ನ ಪರಿವಾರದವರಿಗೆ ಹಂಚಿಕೊಟ್ಟನು. ಇದರಿಂದ ಕಸ್ತೂರಿಯ ಸುವಾ ಸನೆಯು ಹಬ್ಬಿದಂತೆ **ಅಕ್ಬರ**ನ ಕೀರ್ತಿಯು ಜಗತ್ತಿನಲ್ಲಿ ಹಬ್ಬಿತೆಂದು **ಜೂಹರ**ನು ಬರೆದಿರುತ್ತಾನೆ.



ಬಾಲಕನಾದ ಅಕ್ಬರನು

ಅಕ್ಬರನು ಹುಟ್ಟಿದ ೩೫ನೆಯ ದಿವಸ ಹಾಮಿದಾ ಬಾನು ಬೇಗಮ್ಮಳು ಉಮರಕೋಟವನ್ನು ಹುಮಾಯೂನನಿದ್ದೆಡೆಗೆ ಸುರಕ್ಷಿತವಾಗಿ ಬಂದು ಮುಟ್ಟಿದಳು (೨೮ ದಿಶಂಬರ). ಮಗನನ್ನು ನೋಡಿ ಅವನಿಗೆ ಅತ್ಯಾನಂದವಾಯಿತು. ಆದರೆ ಅಕ್ಬರನ ಹುಟ್ಟಿನಿಂದ **ಹುಮಾಯೂನ**ನ ಅದೃಷ್ಟದಲ್ಲೇನೂ ಹೆಚ್ಚುಕಡಿಮೆಯಾಗಲಿಲ್ಲ. ೧೫೪೩ನೆಯ ಜುಲೈಯಲ್ಲಿ ಅವನು ಸಿಂಧು ದೇಶವನ್ನು ಬಿಡಬೇಕಾಯಿತು. ಆದುದರಿಂದ ಅವನು,

ಮಗ ಹೆಂಡತಿಯರೊಡನೆ **ಕಂದಹಾರ**ದ ಹಾದಿಯನ್ನು ಹಿಡಿದನು; **ಶಾಲಿ**(೬)ಗೆ ಬಂದ ಕೂಡಲೇ ತನ್ನ ತಮ್ಮನಾದ **ಅಸ್ಕಾರಿ**ಯು ದೊಡ್ಡ ದಂಡಿನೊಡನೆ ಬೆನ್ನಟ್ಟಿ ಬರುತ್ತಾನೆಂಬ ಸುದ್ದಿ ಅವನಿಗೆ ತಿಳಿಯಿತು. ಆಗ **ಹುಮಾಯೂನ**ನು ಚಿಂತೆಯಲ್ಲಿ ಮುಳುಗಿದನು. ಓಡಿಹೋಗಬೇಕೆಂದರೆ ಹತ್ತು ತಿಂಗಳ ಒಂದು ಕೂಸು ಸಂಗಡವಿತ್ತು. ಅಲ್ಲೇ ಉಳಿದರೆ ಎಲ್ಲರೂ ಕಯ್ಸೆರೆ ಸಿಕ್ಕಿಹೋಗುವ ಸಂಭವವಿತ್ತು. ಅವನ ಸ್ಥಿತಿಯು 'ಒಂದು ಕಡೆಗೆ ಬಾವಿ ಮತ್ತೊಂದು ಕಡೆಗೆ ಕೆರೆ' ಯೆಂಬ ಗಾದೆಯಂತೆ ಇತ್ತು. ಹವಾವು ಒಳ್ಳೆಯದಾಗಿದ್ದರೆ ಹೇಗಾದರೂ ಮಾಡಿ ಕೂಸನ್ನು ಕುದುರೆಯ ಮೇಲೆ ಹಾಕಿಕೊಂಡು ಹೋಗಬಹುದಾಗಿತ್ತು; ಆದರೆ ದುರ್ದೈವದಿಂದ ಅದೂ ಅನುಕೂಲವಾಗಿರಲಿಲ್ಲ. ಮೋಡಗಳ ಕಗ್ಗತ್ತಲೆಯೂ, ಮಳೆಯ ಸರವೂ, ಮಿಂಚಿನ ಥಳಥಳ ಹೊಳಪೂ, ಗುಡುಗಿನಬ್ಬರವೂ, ಸಿಡಿಲಿನ ಭಯಂಕರವಾದ ನಿನಾದವೂ, ಭದ್ರವಾದ ಮನೆಯಲ್ಲಿ ಕುಳಿತಿರುವ ಮನುಷ್ಯನನ್ನಾದರೂ ಎದೆಯೊಡಿಸಬಲ್ಲವು. ಇಂತಹ ಸಂಕಟ ಸಮಯದಲ್ಲಿ ಆ ದಂಪತಿಗಳ ಮನಸ್ಸಿನ ಯೋಚನೆಗಳನ್ನು ವರ್ಣಿಸುವುದು ಅಶಕ್ಯವೇ ಸರಿ. ವಾಚಕರೇ ಅವುಗಳನ್ನು ಊಹಿಸಬಹುದು. ಚಿಕ್ಕ ಕಂದನನ್ನು ಅಲ್ಲೇ ಬಿಟ್ಟು ಮಳೆ ಗಾಳಿ ಚಳಿಸಿಡಿಲುಗಳಿಗೆ ಗುರಿಯಾಗಿ ಮಾಡಿ ಬಿಡಬೇಕೇ? ಅದನ್ನು ನಾಯಿನರಿಗಳಿಗೆ ಬಲಿಯಾಗುವಂತೆ ಕಾಡಿನಲ್ಲಿ ಬಿಸಾಡಬೇಕೇ? ಇಲ್ಲವೆ ಕಕ್ಕುಲತೆಗೊಳಗಾಗಿ ಎಲ್ಲರೂ ಸೆರೆಸಿಕ್ಕಿ ಸಾಯಬೇಕೇ? ಹೀಗೆ ವಿಚಾರ ಮಾಡಲಿಕ್ಕೆ ಹೊತ್ತೂ ಇರಲಿಲ್ಲ. ಆಗ ಅವರು ಕಟ್ಟಕಡೆಗೆ **ಅಕ್ಬರ**ನನ್ನು ಅಲ್ಲೇ ಬಿಟ್ಟು ತಾವು ಓಡಿಹೋಗಬೇಕೆಂದು ನಿಶ್ಚಯಿಸಿ ಮಾರ್ಗಕ್ರಮಣ ಮಾಡಿ ಸುರಕ್ಷಿತವಾಗಿ **ಇರಾಣಿ**ನ ಗಡಿಯನ್ನು ಮುಟ್ಟಿದರು. ಅಲ್ಲಿ ಕೆಲ ಹೊತ್ತು ಹಕ್ಕಿಗಳೇ ಆ ಕಂದನನ್ನು ಆರಯ್ಕೆ ಮಾಡಿ*ದುವು.

---

* ಗಱಿಗೆದರಿ ಕೊಡೆವಿಡಿದು ನಿಂದುವು ಬಿಸಿಲ್ಗೆ ನವಿ।
ಲೆಱಕೆಯಂ ಬೀಸಿ ಬಿಜ್ಜಣವಿಕ್ಕಿತಂಚೆ ತುಂ।
ತುರನುದರ್ಚಿತು ಸಾರಸಂ ಸಲಿಲದೊಳ್ನೆನೆದ ಪಕ್ಕಂಗಳಂ ಬಿದಿರ್ಚಿ॥
ಮಱುಗಿ ಮೆಲ್ನುಡಿಯುಲು ಪಚರಿಸಿದವು ಗಿಳಿಗಳ।
ಕ್ಕಱೊಳಳಿಗಳರ್ಭಕನ ರೋದನದ ಕೂಡಳುವ।
ತೆಱದೊಳ್ಮೊಱೆದವಲ್ಲಿ ಕುಱುಬರಿದ್ದಾಗಿರ್ದಂತ ಕಾಡೊಳ್ಪಿತೆನಿಸುವಂತೆ॥
ಜೈಮಿನಿ ಭಾರತ ಸಂ ೨೮ ಶ್ಲೋ ೩೬.

ಇತ್ತಲಾ **ಅಸ್ಕಾರಿಯು** ಅತ್ತಿಗೆ ಅಣ್ಣಂದಿರೋಡಿಹೋದುದನ್ನು ನೋಡಿ ಮನದಲ್ಲಿ ನೊಂದುಕೊಂಡು ಅವರು ಬಿಟ್ಟುಹೋದ ಚಿಕ್ಕ ಮಗುವನ್ನು ಮುದ್ದಾಡಿ **ಕಂದಹಾರಿನ**ಲ್ಲಿದ್ದ ತನ್ನ ರಾಣಿಯ ವಶದಲ್ಲಿಟ್ಟನು. ಮಗುವಾಗಿದ್ದ **ಅಕ್ಬರ**ನಿಗೆ ೧೫೪೪ನೆಯ ವರ್ಷವು ಸುರಕ್ಷಿತವಾಗಿ ಕಳೆದು ಹೋಯಿತು. ಮರುವರುಷ **ಹುಮಾಯೂನನು ಇರಾಣಿ**ನ ಷಹನಾದ **ತಹಮಾಸ್ಪ**ನ* ನೆರವಿನಿಂದ **ಕಂದಹಾರಿ**ನ (೭) ಮೇಲೆ ದಂಡೆತ್ತಿ ಬಂದನು. **ಅಕ್ಬರ**ನು ತನ್ನ ತಂದೆಯ ಕಯ್ಸೇರ ಬಹುದೆಂಬ ಹೆದರಿಕೆಯಿಂದ, **ಕಾಬೂಲಿ**ನೊಡೆಯನಾದ **ಕಾಮರಾನ**ನು ಆ ಮಗುವನ್ನು ತನ್ನೆಡೆಗೆ ಕಳುಹಬೇಕೆಂದು ತನ್ನ ತಮ್ಮನಾದ **ಅಸ್ಕಾರಿ**ಗೆ ಕಠಿಣವಾದ ಹುಕುಮನ್ನು ಬರೆದನು. ಆಗ **ಅಸ್ಕಾರಿ**ಯು ತನ್ನ ಮಂತ್ರಿಗಳೊಡನೆ ಆಲೋಚಿಸಿ ಕಡೆಗೆ **ಅಕ್ಬರ**ನನ್ನೂ ಅವನ ತಂಗಿಯಾದ **ಬಕ್ಷಿಬಾನು ಬೇಗಮ್ಮ**ಳನ್ನೂ **ಕಾಬೂಲಿ**ಗೆ ಕಳುಹಿಬಿಟ್ಟನು. ಹಾದಿಯಲ್ಲಿ ಹೋಗುವಾಗ **ಹುಮಾಯೂನ**ನ ಜನರು ಅವರನ್ನು ಹಿಡಿದುಕೊಳ್ಳಲಿಕ್ಕೆ ಮಾಡಿದ ಯತ್ನವು ವ್ಯರ್ಥವಾಯಿತು. ಆ ಮಕ್ಕಳನ್ನು **ಕಾಮರಾನನು ಬಾಬರನ** ತಂಗಿಯಾದ **ಖಾನಜಾಡಾ ಬೇಗಮ್ಮ**ಳ ಕಯ್ಯಲ್ಲಿಕೊಟ್ಟನು.

ಅಷ್ಟರಲ್ಲಿ **ಹುಮಾಯೂನನು ಕಂದಹಾರ**ನ್ನು ತೆಗೆದುಕೊಂಡು (ಸೆಪಟಂಬರ್ ೧೫೪೫), **ಕಾಬೂಲಿ**ನ ಮೇಲೆ ದಂಡೆತ್ತಿ ಬಂದನು. ಆಗ **ಕಾಮರಾನ**ನು ಹೆದರಿ **ಗಜನಿ**ಗೆ (೮) ಓಡಿಹೋದುದರಿಂದ ನವಂಬರ್ ೧೫ನೆಯ ದಿವಸ **ಕಾಬೂಲು ಹುಮಾಯೂನ**ನ ಕಯ್ಸೇರಿತು. ತನ್ನ ಮಗನನ್ನು ನೋಡಿ **ಹುಮಾಯೂನ**ನಿಗೆ ಆದ ಸಂತೋಷವನ್ನು ಹಿಡಿಯಲಾಗಲಿಲ್ಲ. **ಹಾಮಿದಾ ಬಾನು ಬೇಗಮ್ಮ**ಳೂ ಮುಂದೆ ೩-೪ ತಿಂಗಳುಗಳ ಬಳಿಕ ಅಲ್ಲಿಗೆ ಬಂದಳು. ಆಗ ಕುಟುಂಬದವರೆಲ್ಲ ಒಟ್ಟುಗೂಡಿದ್ದರಿಂದ ಹುಮಾಯೂನನು ಬಹಳ ಉತ್ಸವದಿಂದ ಮಗನ ಸುಂತಿಯನ್ನು (ಮುಂಜಿಯನ್ನು) ಮಾಡಿದನು (ಮಾರ್ಚ್ ೧೫೪೬).

---

* ತಹಮಾಸ್ಪನು ಸಿಯಾ ಪಂಥದವನಾದ್ದರಿಂದ ಹುಮಾಯೂನನನ್ನು ಒತ್ತಾಯದಿಂದ ತನ್ನ ಪಂಥಕ್ಕೆ ಸೇರಿಸಿಕೊಂಡು ಅವನಿಗೆ ನೆರವಾಗಲಿಕ್ಕೆ ೧೪೦೦೦ ದಂಡನ್ನು ಕೊಟ್ಟನೆಂದು ವ್ಹಿನ್ಸೆಂಟ ಸ್ಮಿಥ ಸಾಹೇಬರು ಬರೆಯುತ್ತಾರೆ.

ಅಕ್ಬರನು ಹಿಂದೆ ಹೇಳಿದಂತೆ ಶಾಬಾನ ತಿಂಗಳದ ಹುಣ್ಣಿವೆ ಗುರವಾರ (ನವಂಬರ ೨೩) ದಿವಸ ಹುಟ್ಟಿದ್ದರಿಂದ ಅವನಿಗೆ ಬದರುದ್ದೀನ (ಬದರ್=ಹುಣ್ಣಿವೆ, ದೀನ=ಧರ್ಮ, ಧರ್ಮದ ಪೂರ್ಣ ಚಂದ್ರ) ಮುಹಮ್ಮದ ಅಕ್ಬರ ಎಂಬ ಹೆಸರನ್ನು ಇಟ್ಟಿದ್ದರು. ಅವನು ಹುಟ್ಟಿದಂದಿನಿಂದ ಹಲವು ವಿಪತ್ತುಗಳಿಗೆ ಗುರಿಯಾದ್ದರಿಂದ ಹಗೆಗಳಿಗೆ ಅವನ ಜನ್ಮ ದಿವಸವು ತಿಳಿಯು ಬಾರದೆಂಬ ಉದ್ದೇಶದಿಂದ ಅವನ ಜನ್ಮ ದಿವಸವು ರಜಬ್ ತಿಂಗಳ ೫ (೧೫ ಅಕ್ಟೋಬರ ರವಿವಾರ) ಎಂದು ಅವನ ಸುಂತಿಯ ಕಾಲದಲ್ಲಿ ಗೊತ್ತು ಮಾಡಿದರು. ಆ ದಿವಸ ಮುಹಮ್ಮದ ಪೈಗಂಬರನ ತಾಯಿಯು ಅವನ ಗರ್ಭಧಾರಣ ಮಾಡಿದ್ದರಿಂದ ಬದರುದ್ದೀನ ಎಂಬ ಹೆಸರನ್ನು ತೆಗೆದುಹಾಕಿ ಅದರ ಬದಲು ಜಲಾಲುದ್ದೀನ (ಜಲಾಲ್=ವೈಭವ, ಧರ್ಮದ ವೈಭವ) ಮುಹಮ್ಮದ ಅಕ್ಬರ ಎಂಬ ಹೆಸರನ್ನಿಟ್ಟರು.

ಆದರೆ ಈ ಸಂತೋಷವು ಬಹಳ ದಿವಸಗಳ ವರೆಗೆ ಉಳಿಯಲಿಲ್ಲ. **ಹುಮಾಯೂನನು ಬದಕ್ಷಾನ**ವನ್ನು ತೆಗೆದುಕೊಂಡು ಚಳಿಗಾಲದಲ್ಲಿ **ಬಿಲಜಾಫರ**ಕ್ಕೆ ಹೊರಟನು. ಅವನಿಗೆ ಹಾದಿಯಲ್ಲಿ ಕೆಟ್ಟ ಜ್ವರ ಹುಟ್ಟಿತು; ಆದುದರಿಂದ ಎಷ್ಟೋ ಮಂದಿ ಸರದಾರರು ಅವನು ಸಾಯುವನೆಂದೆಣಿಸಿ **ಕಾಮರಾನ**ನನ್ನು ಕೂಡಿದ್ದರು. ಮುಂದೆ ಎರಡು ತಿಂಗಳುಗಳ ಮೇಲೆ ಅವನಿಗೆ ಗುಣವಾಯಿತು. ಆದರೆ ಅಷ್ಟರೊಳಗೆ **ಕಾಮರಾನ**ನು ತನ್ನ ಮಾವನ ಸಹಾಯದಿಂದ ದಂಡು ಕೂಡಿಸಿಕೊಂಡು, **ಹುಮಾಯೂನ**ನನ್ನು ಬಿಟ್ಟು ಬಂದ ಸರದಾರರೊಡನೆ **ಕಾಬೂಲ**ನ್ನು ಮುತ್ತಿ ಹಿಡಿದುಕೊಂಡನು. **ಅಕ್ಬರ**ನು ಮತ್ತೆ ತನ್ನ ಚಿಕ್ಕಪ್ಪನ ಕೈಗೆ ಸಿಕ್ಕಿದನು.

ಬಳಿಕ **ಹುಮಾಯೂನ**ನು ಸುಮ್ಮನೆ ಕುಳಿತಿರಲಿಲ್ಲ. ಮೈಯ್ಯಲ್ಲಿ ಸ್ವಸ್ಥವಾದ ಕೂಡಲೆ ದಂಡೆತ್ತಿ ಹೋಗಿ **ಕಾಬೂಲ**ನ್ನು ಮುತ್ತಿ ತೋಫುಗಳನ್ನು ಹಾರಿಸ ತೊಡಗಿದನು. ಆಗ **ಕಾಮರಾನ**ನು ಅಂಜಿ, ಗುಂಡುಗಳು ತಾಕುವೆಡೆಯಲ್ಲಿ ಚಿಕ್ಕ ಮಗುವಾದ **ಅಕ್ಬರ**ನನ್ನು ನಿಲ್ಲಿಸುವೆನೆಂದು ಹೇಳಿ ಕಳುಹಿದುದರಿಂದ, ತೋಫುಗಳನ್ನು ಹಾರಿಸುವುದನ್ನು ಬಿಡಬೇಕಾಯಿತು. ಮುಂದೆ **ಕಾಬೂಲು ಹುಮಾಯೂನ**ನ ಕೈವಶವಾಯಿತು (೨೮ ಏಪ್ರೆಲ್ ೧೫೪೭).

ಆಗ **ಕಾಮುರಾನ**ನು **ಬದಕ್ಷಾ**ನಿಗೆ ಓಡಿಹೋದನು. ಆಗ ಮಳೆಗಾಲವಾಗಿದ್ದರೂ, ತನ್ನ ಕೆಲವು ಮಂದಿ ಸರದಾರರು **ಕಾಮುರಾನ**ನನ್ನು ಸೇರಿದ್ದರೂ, **ಹುಮಾಯೂನ**ನು ಧೈರ್ಯಗೆಡದೆ ಅವನನ್ನು ಬೆನ್ನಟ್ಟಿ ಹೋಗಿ, **ತಾಲಿಕಾನ್** ಎಂಬಲ್ಲಿ ಅವನನ್ನು ಶರಣು ಬರಮಾಡಿಕೊಂಡು, ತಿರುಗಿ **ಕಾಬೂಲಿ**ಗೆ ಬಂದನು (೧೫೪೮).

ಮರುವರುಷ **ಹುಮಾಯೂನ**ನು **ಬಾಲ್ಖಿ**ಗೆ ಮುತ್ತಿಗೆ ಹಾಕಿದನು. ಮೊದಲು ಗೊತ್ತಾದಂತೆ **ಕಾಮುರಾನ**ನು ಅವನಿಗೆ ಸಹಾಯ ಮಾಡಲಿಲ್ಲ; ಆದುದರಿಂದ ಅವನು ಅಪಜಯಪಟ್ಟು **ಕಾಬೂಲಿ**ಗೆ ತಿರುಗಿ ಬಂದನು (೧೫೫೦). ಬಳಿಕ ಅವನು ಎಂಟು ವರುಷದವನಾದ **ಅಕ್ಬರ**ನಿಗೆ ತನ್ನ ರಾಜ್ಯವನ್ನೊಪ್ಪಿಸಿ, ತನ್ನ ತಮ್ಮನಾದ **ಕಾಮುರಾನ**ನನ್ನು ಜಯಿಸಲಿಕ್ಕೆ ಹೊರಟು, ಎಚ್ಚರದಪ್ಪಿ ನಡೆದುದರಿಂದ, **ಕಾಮುರಾನ**ನು **ಕಿಪ್ಪಚಾಕ**ವೆಂಬಲ್ಲಿ ಅವನ ಮೇಲೆ ಕಾಣಿಸಿಕೊಂಡು, ಅವನನ್ನು ಓಡಿಸಿಬಿಟ್ಟನು. ಬಳಿಕ ಗೆಲವಿನಿಂದುಬ್ಬೇರಿದ **ಕಾಮುರಾನ**ನು ಮೂರನೆಯ ಸಾರಿ **ಕಾಬೂಲ**ನ್ನು ತೆಗೆದುಕೊಂಡು ಮತ್ತೆ **ಅಕ್ಬರ**ನನ್ನು ಸೆರೆಹಿಡಿದನು. ಆದರೂ ಎದೆಗುಂದದೆ **ಹುಮಾಯೂನ**ನು **ಸಿರ್‌ಥಾನ್‌ಪಾತ್** ಎಂಬ ಸ್ಥಳದಲ್ಲಿ ದಂಡನ್ನು ಕೂಡಿಸಿ **ಕಾಬೂಲಿ**ಗೆ ಹೋಗಿ, **ಕಾಮುರಾನ**ನ ದಂಡನ್ನು ಸೋಲಿಸಿ, ಜಯಭೇರಿಗಳನ್ನು ಹೊಡಿಸುತ್ತ ಆ ಪಟ್ಟಣವನ್ನು ಹೊಕ್ಕನು.

ಈ ಕಾಲಕ್ಕೆ **ಹುಮಾಯೂನ**ನ ಜಯವು ಪೂರ್ಣವಾದಂತೆ ಆಯಿತು. **ಹಿಂಡಾಲಮಿರ್ಜ**ನು ಒಂದು ಸಣ್ಣ ಕದನದಲ್ಲಿ ಮಡಿದುದರಿಂದ **ಹುಮಾಯೂನ**ನು ಅವನ ಪರಗಣೆಯಾದ **ಗಜನಿ**ಯನ್ನು **ಅಕ್ಬರ**ನಿಗೆ ಉಂಬಳಿ ಹಾಕಿಕೊಟ್ಟು ಅವನ ಮಗಳಾದ **ರುಕಯ್ಯಾ ಬೇಗಮ್ಮ**ಳನ್ನು **ಅಕ್ಬರ**ನಿಗೆ ಮದುವೆ ಮಾಡಿದನು (೧೫೫೧). ಆಕೆಯು ಬಂಜೆಯಾಗಿ ಗಂಡನ ತರುವಾಯ ಸತ್ತಳು. ಕಟ್ಟಕಡೆಗೆ ಹೆಂಗಸಿನ ಸೋಗು ಹಾಕಿಕೊಂಡು ಅಡಗಿದ್ದ **ಕಾಮುರಾನ**ನು **ಹುಮಾಯೂನ**ನ ಕಯ್ಸೇರಿದನು (ಆಗಸ್ಟ್ ೧೫೫೩). ಇದಕ್ಕೂ ೨ ವರುಷ ಮೊದಲೇ **ಅಸ್ಕಾರಿಮಿರ್ಜ**ನು **ಮಕ್ಕಾ**ಕ್ಕೆ ಹೋಗಿದ್ದನು. ಕೃತಘ್ನರಾದ ಅಣ್ಣತಮ್ಮಂದಿರ ಕಾಟ ತಪ್ಪಿದ್ದರಿಂದ **ಹುಮಾಯೂನ**ನು ಈಗ ಮಾತ್ರ ನಿಶ್ಚಿಂತನಾದನು.

ಆ ಕಾಲದಲ್ಲಿ **ಕಾಶ್ಮೀರ**ವನ್ನು ತೆಗೆದುಕೊಳ್ಳಬೇಕೆಂಬ ವಿಚಾರವು **ಹುಮಾಯೂ**ನನ ಮನಸ್ಸಿನಲ್ಲಿ ಹುಟ್ಟಿತು. ಆದರೆ ಅವನ ಸರದಾರರು ಅದಕ್ಕೆ ಒಪ್ಪಲಿಲ್ಲ. ಆದುದರಿಂದ ಅವನು **ಸಿಂಧು ಹೊಳೆ**ಯನ್ನು ದಾಟ, ಅದಕ್ಕೂ **ಜೀಲಮ್** ನದಿಗೂ ನಡುವಿರುವ ಕೋಟೆಗಳನ್ನು ಹಿಡಿದು ಕೊಂಡು, ಅವುಗಳಲ್ಲಿ ಕಾವಲುಗಾರರನ್ನಿರಿಸಿ ಮಳೆಗಾಲದಲ್ಲಿ ತಿರುಗಿ **ಕಾಬೂಲಿ**ಗೆ ಬಂದನು (೧೫೫೪).



ಶೇರ್ ಷಹಾ

ಅಷ್ಟರಲ್ಲಿ ಹಿಂದೂಸ್ಥಾನದಲ್ಲಿ ಅನೇಕ ಮಹತ್ವದ ಸಂಗತಿಗಳು ನಡೆ ದಿದ್ದವು. ಹುಮಾಯೂನನನ್ನು ಕನೋಜಿನಲ್ಲಿ ಸೋಲಿಸಿದ್ದ **ಷೇರ ಖಾನ** ಸೂರನು ಕಲಿಂಜರದ ಮುತ್ತಿಗೆಯಲ್ಲಿ ಗುಂಡು ತಗುಲಿ ಸತ್ತನು (೧೫೪೫). ಅವನ ಎರಡನೆಯ ಮಗನಾದ **ಸುಲ್ತಾನ ಇಸ್ಲಾ**ಮನು ಏಳು

ವರ್ಷ ರಾಜ್ಯವಾಳಿ ಮಡಿದನು (೧೫೫೨). ಅವನ ಆಳಿಕೆಯಲ್ಲಿಯೇ ಸರದಾರರೊಳಗೆ ಒಡಕು ಹುಟ್ಟಿತು. ಅವನು ಸತ್ತ ಬಳಿಕ ಚಿಕ್ಕ ವಯಸ್ಸಿನವನಾದ ಅವನ ಮಗನು ಪಟ್ಟವೇರಿದನು. ಅವನ ಸೋದರಮಾವನಾದ **ಮಹಮ್ಮದಷಹಾ ಆಡೀಲನು** ಆ ಹುಡುಗನನ್ನು ಕೊಲ್ಲಿಸಿ ತಾನೇ ಪಟ್ಟವೇರಿದನು. ಇವನು ತಿಳಿಗೇಡಿಯೂ, ದುಷ್ಟನೂ, ದುರಾಚಾರಿಯೂ ಆಗಿದ್ದನು. **ಕಲುಷನು ಸಂಭಾಜಿಗೆ** ಆಪ್ತನಾಗಿದ್ದಂತೆ **ರೇವಾರಿಯ** (ಮೇವಾಡದ) ವ್ಯಾಪಾರಿಯಾಗಿದ್ದ **ಹೇಮುವೆಂಬುವನೊಬ್ಬ** ಹಿಂದೂ ಗೃಹಸ್ಥನು ಇವನಿಗೆ ಪರಮ ವಿಶ್ವಾಸಿಯಾದ ಮಂತ್ರಿಯಾಗಿದ್ದನು. **ಹೇಮುವಿನ** ಚಾತುರ್ಯವೂ ದಕ್ಷತೆಯೂ ರಾಜ್ಯದಲ್ಲಿ ಹುಟ್ಟದ ಒಡಕನ್ನು ನಿಲ್ಲಿಸಲಿಲ್ಲ. ಇಬ್ರಾಹಿಮನೆಂಬುವನೊಬ್ಬ ಸರದಾರನು **ಆಗ್ರಾ ಡಿಲ್ಲಿಗಳನ್ನು** ಹಿಡಿದುಕೊಂಡನು. **ಅಹಮ್ಮದ್‌ಖಾನನೆಂಬ** ಮತ್ತೊಬ್ಬ ಸರದಾರನು **ಪಂಜಾಬನ್ನು** ಹಿಡಿದುಕೊಂಡು **ಸಿಕಂದರಷಹನೆಂಬ** ಹೆಸರಿನಿಂದ ಸ್ವತಂತ್ರನಾಗಿ ಆಳತೊಡಗಿದನು. **ಸುಜಾಖಾನನೆಂಬ** ಮತ್ತೊಬ್ಬ ಸರದಾರನು, **ಮಾಳವಕ್ಕೆ** ಒಡೆಯನಾದನು. ಮುಂದೆ **ಸಿಕಂದರನಿಗೂ ಇಬ್ರಾಹಿಮನಿಗೂ** ಜಗಳವು ಹುಟ್ಟಿ **ಸಿಕಂದರಷಹನು ಇಬ್ರಾಹಿಮಖಾನನನ್ನು ಫಾರಾ** (೯) ಯೆಂಬಲ್ಲಿ ಸೋಲಿಸಿ **ಡಿಲ್ಲಿಯನ್ನು** ಹಿಡಿದುಕೊಂಡನು.

ಅಷ್ಟರಲ್ಲಿ **ಹುಮಾಯೂನನು** ಈ ದೇಶಕ್ಕೆ ದಂಡೆತ್ತಿ ಬರುತ್ತಾನೆಂಬ ಸುದ್ದಿ ಎಲ್ಲಾ ಕಡೆಯಲ್ಲಿಯೂ ಹಬ್ಬಿತು. ಅವನು ೧೫೫೪ನೆಯ ನವಂಬರಿನಲ್ಲಿ **ಅಕ್ಬರನೊಡನೆ ಕಾಬೂಲಿನಿಂದ** ಹೊರಟು **ಸಿಂಧು** ನದಿಯನ್ನು ದಾಟಿ **ರಾವಲ್‌ಪಿಂಡಿಯ** ಮಾರ್ಗದಿಂದ **ಕಾಳಾನೂರಿ**(೧೦)ಗೆ ಬಂದು, ಅಲ್ಲಿ ತನ್ನ ಮುಖ್ಯ ದಳವಾಯಿಯಾದ **ಬೈರಾಮ್‌ಖಾನನನ್ನು ಜಲಂಧರಕ್ಕೆ** ಕಳುಹಿ, ತಾನು **ಲಾಹೋರಿಗೆ** ಹೊರಟನು (ಜನವರಿ ೧೫೫೫).

**ಬೈರಾಮನು ಸಿಕಂದರಿನ** ದಂಡನ್ನು **ಮಚ್ಚಿವಾರ** (೧೧) ದಲ್ಲಿ ಸೋಲಿಸಿ **ಸರಹಿಂದಿಗೆ** (೧೨) ಬಂದನು. **ಸಿಕಂದರನು** ದೊಡ್ಡ ದಂಡಿನೊಡನೆ ಅಲ್ಲಿಗೆ ಬಂದ ಸುದ್ದಿಯನ್ನು ಕೇಳಿ, **ಹುಮಾಯೂನನು** ಅಲ್ಲಿಗೆ **ಅಕ್ಬರನೊಡನೆ** ಹೋದನು. **ಸರಹಿಂದಿನಲ್ಲಿ** ದೊಡ್ಡ ಕಾಳಗವಾಯಿತು. **ಸಿಕಂದರನು** ಸಂಪೂರ್ಣವಾಗಿ ಸೋತನು. ಬಳಿಕ **ಹುಮಾಯೂನನು**

ತನ್ನ ದಂಡಿನ ಒಂದು ಭಾಗವನ್ನು ತೆಗೆದುಕೊಂಡು ಹೋಗಿ **ರೋಹಿಲ ಖಂಡ** (೧೩) ವನ್ನು ಸುಲಿದು, **ಆಗ್ರಾ** ಪಟ್ಟಣವನ್ನು ಹಿಡಿದುಕೊಳ್ಳಲಿಕ್ಕೆ ಒಂದು ದಂಡನ್ನು ಕಳುಹಿ, ತಾನು **ಡಿಲ್ಲಿ**ಯು ಹಾದಿಯನ್ನು ಹಿಡಿದನು.

ಆದರೆ **ಹುಮಾಯೂನ**ನಿಗಿನ್ನೊಬ್ಬ ಶತ್ರುವಿದ್ದನು. **ಮಹಮ್ಮದ ಶಹಾ ಅಡೇಲ**ನ ಮುಖ್ಯ ಮಂತ್ರಿಯಾದ **ಹೇಮು**ವು **ಬಂಗಾಲ**ದಲ್ಲಿದ್ದ ನವಾಬನನ್ನು **ಕಾಲ್ಪಿ** (೧೪) ಯಲ್ಲಿ ಸೋಲಿಸಿ, **ಡಿಲ್ಲಿ**ಯು ಮೇಲೆ ಬರುತ್ತಿದ್ದನು. **ಸಿಕಂದರ**ನಾದರೋ **ಪಂಜಾಬಿ**ನಲ್ಲಿ ಬಂಡಾಯ*ವನ್ನು ಎಬ್ಬಿಸಿದನು. ಆದುದರಿಂದ **ಹುಮಾಯೂನ**ನು ತಾನು **ಡಿಲ್ಲಿ**ಯಲ್ಲೇ ನಿಂತು, **ಅಕ್ಬರ**ನನ್ನು **ಪಂಜಾಬಿ**ನ ಸೂಚಿದಾರನಾಗಿ ನಿಯಮಿಸಿ, ಅವನನ್ನೂ ಅವನ ಅಟಾಲಿಕ್ಕ (ಉಪದೇಶಕನಾದ) **ಬೈರಾಮ**ನನ್ನೂ **ಪಂಜಾಬಿ**ಗೆ ಕಳುಹಿದನು.

ಅತ್ತ **ಅಕ್ಬರ**ನು **ಸರಹಿಂದಿ**ಗೆ ಹೋದನು (ಜನವರಿ ೧೫೫೬). ಅಲ್ಲಿ ಕೆಲವು ಸರದಾರರನ್ನು ತನ್ನ ಕಡೆಗೆ ಸೇರಿಸಿಕೊಂಡು **ಫಿಲ್ಲೂರ**ಲ್ಲಿ **ಸತಲಜ್** ಹೊಳೆಯನ್ನು ದಾಟ **ಸುಲ್ತಾನಪುರ**ದ ಮಾರ್ಗದಿಂದ **ಹರಿಯಾಣ**ಕ್ಕೆ ಹೋದನು. ಅಲ್ಲಿ ಹೋದ-ದಿನದ ಬೆಳಗಿನಲ್ಲೇ **ಹುಮಾಯೂನ**ನಿಗಾದ ಅಪಘಾತದ ಸುದ್ದಿಯು ತಿಳಿಯಿತು. ಆದುದರಿಂದ **ಅಕ್ಬರ**ನು **ಸಿಕಂದರ**ನ ಗೊಡವೆಯನ್ನು ಬಿಟ್ಟು, **ಕಾಳಾನೂರಿ**ಗೆ ಹೋದಕೂಡಲೆ **ಹುಮಾಯೂನ**ನು ಸತ್ತ ಸುದ್ದಿಯು ಬಂತು. ಆಗ ಚಿಕ್ಕವನಾದ **ಅಕ್ಬರ**ನಿಗೆ ೧೩ ವರ್ಷ ತುಂಬಿ ೪ ತಿಂಗಳುಗಳಾಗಿದ್ದುವು. **ಸಿಕಂದರ**ನು ಇನ್ನೂ ಶರಣು ಬಂದಿರಲಿಲ್ಲ. **ಬಂಗಾಲ**ದಲ್ಲಿ ಜಯ ಹೊಂದಿದ **ಹೇಮು**ವು ೫೦,೦೦೦ ದಂಡಿನೊಡನೆ **ಆಗ್ರಾ** ಪಟ್ಟಣಕ್ಕೆ ದಂಡೆತ್ತಿ ಬರುತ್ತಿದ್ದನು. ಸಾಯುವಾಗ **ಹುಮಾಯೂನ**ನ ಅಂಕೆಯಲ್ಲಿ **ಡಿಲ್ಲಿ-ಆಗ್ರಾ-ಸರಹಿಂದು**ಗಳು ಮಾತ್ರ ಇದ್ದುವು. ಇದಲ್ಲದೆ ಅವನ **ಕಾಬೂಲಿ**ನ ಪ್ರತಿನಿಧಿಯು ತಿರುಗಿಬಿದ್ದ ಸುದ್ದಿಯು ಇದಕ್ಕೂ ಕೆಲವು ದಿವಸ ಮೊದಲೇ ಬಂದಿತ್ತು.

**ಅಕ್ಬರ**ನ ಬಾಲ್ಯದ ಬಗ್ಗೆ ನಮಗೆ ಗೊತ್ತಾದ ಕೆಲವು ಮುಖ್ಯ ಸಂಗತಿಗಳನ್ನು ಬರೆದು ಈ ಅಧ್ಯಾಯವನ್ನು ಮುಗಿಸುವೆವು.

---

* ದಂಗೆ.

**ಅಕ್ಬರನ** ದಾಯಿಗಳಲ್ಲಿ **ಜೀಜಿಅನಗ, ಮಾಹಮ್‌ಅನಗ** ಎಂಬ ಇಬ್ಬರು ದಾಯಿಗಳು (ಮೊಲೆ ಕುಡಿಸುವವರು) ಮುಖ್ಯರಾಗಿದ್ದರು. ಮೊದಲನೆಯವಳ ಗಂಡನಾದ **ಶಮುಸುದ್ಧೀನ ಮುಹಮ್ಮದನೇ**ಂಬವನು **ಕನೋಜ** ಕಾಳಗದಲ್ಲಿ **ಹುಮಾಯೂನನ** ಜೀವವುಳಿಸಿದನು. ಆದ್ದರಿಂದ ತಿರುಗಿ **ದಿಲ್ಲಿ** ಸಿಂಹಾಸನ ದೊರೆದ ಬಳಿಕ **ಹುಮಾಯೂನನು** ಅವನಿಗೆ ಅಟಕ್ (ಸಾಕತಂದೆ) ಎಂಬ ಬಹುಮಾನದ ಬಿರುದನ್ನು ಕೊಟ್ಟನು. ೨ನೆಯ ದಾಯಿಯ ಮಗನಾದ **ಆದಮ್‌ಖಾನನು ಅಕ್ಬರನ** ಆಳಿಕೆಯಲ್ಲಿ ದೊಡ್ಡಿಸ್ತನವನ್ನು ಹೊಂದಿ ಕೆಲರಾಜ್ಯಕಾರ್ಯಗಳನ್ನು ಮಾಡಿ ರಾಜದ್ರೋಹಿಯಾದ್ದರಿಂದ ಶಿಕ್ಷಿಸಲ್ಪಟ್ಟನು.

ಹೆಸರುವಾಸಿಯಾದ ಗೃಹಸ್ಥರ ಬಾಲ್ಯದ ಅದ್ಭುತಕಥೆಗಳನ್ನು ಹೇಳುವುದು ವಾಡಿಕೆಯಾದ ಮಾತೇ ಸರಿ. ಅದರಂತೆ **ಅಕ್ಬರನು** ೭ ತಿಂಗಳದ ಕೂಸಿರುವಾಗ ತನಗೆ ಹಿರಿಯರಂತೆ ಸಮಾಧಾನ ಹೇಳಿದನೆಂತಲೂ, ತನ್ನ ದೇವತಾಂಶವನ್ನು ಹೊರಗೆಡವಬಾರದೆಂದು ಕಟ್ಟು ಮಾಡಿದನೆಂತಲೂ **ಜೀಜಿ ಅನಗಳು ಅಬುಲ್‌ಫಾಜಲ್ಲನಿಗೆ** ತಿಳಿಸಿದಳು. ಅವನು ಈ ಮಾತಿನಲ್ಲಿ ವಿಶ್ವಾಸವಿಟ್ಟಂತೆ ತೋರುವುದಿಲ್ಲ. ಆದರೆ **ಅಕ್ಬರನು** ತನ್ನ ಬಾಲ್ಯದ ಬಗ್ಗೆ ಸ್ವತಃ **ಅಬುಲ್‌ಫಾಜಲ್ಲನಿಗೆ** ಹೇಳಿದ ಒಂದು ಸಂಗತಿಯು ವಿಶ್ವಸನೀಯವಾಗಿರುತ್ತದೆ. ಅದು ಏನಂದರೆ:— **ಅಕ್ಬರನು** ೧೬ ತಿಂಗಳಿನವನಿದ್ದಾಗ ತಪ್ಪುಹೆಜ್ಜೆ ಇಡಲಾರಂಭಿಸಿದನು. ಆಗ **ಮಾಹಮ್ ಅನಗಳ** ಹೇಳಿಕೆಯಂತೆ ಅವನ ಕಕ್ಕನಾದ **ಅಸ್ಕಾರಿಯು** ತನ್ನ ರುಮಾಲನ್ನು ತೆಗೆದು ತಪ್ಪು ಹೆಜ್ಜೆಯಿಡುವ **ಅಕ್ಬರನ** ಮೇಲೆ ಒಗೆದು ಅವನನ್ನು ಕೆಡವಿದನು. ಹೀಗೆ ಕೆಡವುದರಿಂದ ಕೂಸುಗಳಿಗೆ ಜನರ ಕಣ್ಣು ಹತ್ತುವದಿಲ್ಲೆಂಬ ತಿಳಿವಳಿಕೆಯು ಆಗಿನ ಕಾಲದ ತುರ್ಕರಲ್ಲಿ ಹಬ್ಬಿತ್ತು.

**ಅಕ್ಬರನು** ೫ ವರ್ಷದವನಾದ ಕೂಡಲೆ ಅವನಿಗೆ ಕಲಿಸಲಿಕ್ಕೆ ಒಬ್ಬ ಶಿಕ್ಷಕನು ನೇಮಿಸಲ್ಪಟ್ಟನು. ಅವನು **ಅಕ್ಬರನಿಗೆ** ಓದು ಬರಹ ಕಲಿಸದೆ ಪಾರಿವಾಳ ಆಡಲಿಕ್ಕೆ ಕಲಿಸಿದನು. ಆದ್ದರಿಂದ ಅವನನ್ನು ತೆಗೆದು ಇಬ್ಬರು ಮೂರು ಮಂದಿ ಚೆಲೊ ಶಿಕ್ಷಕರನ್ನು ನೇಮಿಸಿದರು. ಅವರು ಎಷ್ಟು ಪ್ರಯತ್ನ ಮಾಡಿದರೂ ಅವನಿಗೆ ಓದು ಬರಹ ಬರಲಿಲ್ಲ. ತಂದೆಯಾದ **ಹುಮಾಯೂನನು** ಪರಿಪರಿಯಿಂದ ಹೇಳಿ ನೋಡಿದನು. ಅದೆಲ್ಲ ವ್ಯರ್ಥ

ನಾಯಿತು. ಕತ್ತಿಯನ್ನು ತಿರುವುವುದರಲ್ಲಿಯೂ, ಕುದುರೆಯನ್ನು ಓಡಿಸುವುದರಲ್ಲಿಯೂ ಅವನು ನಿಪುಣನಾಗಿದ್ದನು. ಒಂಟೆ, ಕುದುರೆ, ನಾಯಿ, ಪಾರಿವಾಳಗಳು ಅವನ ಜೀವಪ್ರಾಣ. ಕಡೆತನಕ ಅವನಿಗೆ ಓದು ಬರಹ ಬಾರದಿದ್ದರೂ ಎರಡನೆಯವರು ಓದಿದ್ದನ್ನು ಬಹು ಪ್ರೀತಿಯಿಂದ ಕೇಳುತ್ತಿದ್ದನು. ಅವನ ನೆನಪಿನ ಶಕ್ತಿಯು ಬಹಳವಾದ್ದರಿಂದ ಎಷ್ಟೋ ಕವಿತೆಗಳು ಅವನಿಗೆ ಬಾಯಿಪಾಠಾಗಿದ್ದವು.

---

# ೩ನೆಯ ಅಧ್ಯಾಯ

## ರಾಜ್ಯ ಪಾಲಕನಾದ ಬೈರಾಮ್ ಖಾನನ ಆಡಳಿತ

(೧೫೫೬—೧೫೬೦)



ಬೈರಾಮ್ ಖಾನ್

**ಹುಮಾಯೂನನು** ಒಮ್ಮಿಂದೊಮ್ಮೆಲೆ (ಅಕಸ್ಮತ್ತಾಗಿ) ಸತ್ತನು. **ಡಿಲ್ಲಿ**ಯಲ್ಲಿ ಅರಮನೆಯ ಉಪ್ಪರಿಗೆಯಲ್ಲಿದ್ದ ಪುಸ್ತಕಾಲಯಕ್ಕೆ ಹೋಗುವಾಗ, ತುದಿಪಾವಟಗೆಯಿಂದ ಕಾಲು ಜಾರಿ ಬಿದ್ದದ್ದೇ ಅವನ ಸಾವಿಗೆ ಕಾರಣವಾಯಿತು. ಅವನು ಮುಂದೆ ೪ ದಿವಸಗಳ ತನಕ ಎಚ್ಚರವಿಲ್ಲದೆ ಮಲಗಿಕೊಂಡು, ಜನವರಿ ೨೪ನೆಯ ತಾರೀಖಿನ ದಿವಸ ತನ್ನ ೪೮ನೆಯ ವಯಸ್ಸಿನಲ್ಲಿ ಸತ್ತನು. ಆಗ **ಟಾರ್ಡಿಬೆಗ್ ಖಾನ**ನೆಂಬೊಬ್ಬ ಮುಖ್ಯ ಸರದಾರನು ವಿಶೇಷ ರಾಜಭಕ್ತಿಯನ್ನು ತೋರಿಸಿದನು. *ಅದು ಹೇಗೆಂದರೆ:—ಅವನು ಕೂಡಲೇ **ಅಕ್ಬರ**ನಿಗೆ **ಹುಮಾಯೂನ**ನ ಮರಣದ ಸುದ್ದಿಯನ್ನು ತಿಳಿಸಿ, ಅದನ್ನು ೧೭ ದಿವಸಗಳ ವರೆಗೆ ರಾಜಧಾನಿಯಲ್ಲಿ ಹೊರಗೆಡವದೆ ಆ ಕಾಲದಲ್ಲಿ **ಅಕ್ಬರ**ನಿಗೆ ಅನುಕೂಲವಾದ ಎಲ್ಲಾ ಏರ್ಪಾಡುಗಳನ್ನು ಮಾಡಿ, ಫೆಬ್ರುವರಿ ೧೧ನೆಯ ದಿವಸ ಮಸೀದಿಯಲ್ಲಿ **ಅಕ್ಬರ**ನ ಹೆಸರಿನಿಂದ ಪ್ರಾರ್ಥನೆಯನ್ನು ಮಾಡಿಸಿದನು. ಬಳಿಕ ಅವನು **ಅಕ್ಬರ**ನ ಬಳಿಗೆ ಎಲ್ಲಾ ರಾಜಚಿಹ್ನಗಳನ್ನೂ, ಕಾವಲುಗಾರರನ್ನೂ, **ಕಾಮರಾನ**ನ ಮಗನನ್ನೂ ಕಳುಹಿ, ತಾನು ದಂಡೆತ್ತಿ ಬರುವ **ಹೇಮು**ವಿನೊಡನೆ ಹೋರಾಡಲಿಕ್ಕನುವಾದನು.

ಕಾಲಬಂದರೆ ತಿಪ್ಪೆಹೋಗಿ ಉಪ್ಪರಿಗೆಯಾಗುವುದೆಂಬ ನಾಣ್ಣುಡಿಯು ಸಟಿಯಲ್ಲ. **ಟಾರ್ಡಿಬೇಗಖಾನ**ನು ಕಳುಹಿದ ರಾಜಚಿಹ್ನಗಳು ತಲುಪಿದಾಗ **ಅಕ್ಬರ**ನು **ಬೈರಾಮ್ ಖಾನ**ನೊಡನೆ **ಕಾಳಾನೂರಿ**ನಲ್ಲಿದ್ದನು. ಅಲ್ಲಿ ಒಂದು ತೋಟದೊಳಗೆ ೧೮ ಅಡಿ ಉದ್ದ ೩ ಅಡಿ ಎತ್ತರವಾದ ಒಂದು ಕಟ್ಟೆಯ ಮೇಲೆ **ಅಕ್ಬರ**ನ ರಾಜ್ಯಾಭಿಷೇಕವಾಯಿತು; ದಂಡಿನವರೆಲ್ಲ ಅವನು **ಡಿಲ್ಲಿ**ಯ **ಬಾದಶಹ**ನೆಂದು ಜಯಘೋಷ ಮಾಡಿದರು (೧೪ ಫೆಬ್ರುವರಿ ೧೫೫೬). ಈ ಹೆಂಟೆಗಳಿಂದ ಕಟ್ಟಿ ಕಲ್ಲುಹಾಸಿಗೆ ಮಾಡಿದ ಕಟ್ಟೆಯನ್ನು ಈಗಲೂ ನೋಡಬಹುದು. ಮುಂದೆ ಅದರ ಸುತ್ತಲು **ಅಕ್ಬರ ಬಾದಶಹ**ನು ಮಾಡಿಸಿದ ರಮ್ಯವಾದ ಹೂದೋಟವೂ, ಅದರ ನೆರೆಯಲ್ಲಿ ಕಟ್ಟಿಸಿದ ಸಣ್ಣದೊಡ್ಡ ಕಟ್ಟಡಗಳೂ ಈಗ ಹಾಳಾಗಿ ಹೋಗಿರುತ್ತವೆ. ಇತ್ತಲಾಗಿ (ಈಚೆಗೆ) ಕಟ್ಟೆಯು ಬಿದ್ದು ಹೋಗಬಾರದೆಂದು ಅದರ ಸುತ್ತಲು ಕಂಬಗಳನ್ನು ನೆಡಿಸಿ ಸರಪಳಿಯನ್ನು ಬಿಗಿದು ಒಂದು ಲೇಖದ ಕಲ್ಲನ್ನು ಹುಗಿದಿರುತ್ತಾರೆ (ಹೂತಿರುತ್ತಾರೆ).

* ಅಡಿಯ ಮುಂದಿಡೆ ಸ್ವರ್ಗ। ಅಡಿಯ ಹಿಂದಿಡೆ ನರಕ॥ ಅಡಿಗಳೈದೇ ಫಲ।
ಸ್ವಾಮಿಕಾರ್ಯಕ್ಕೆ ಮಡಿಯಲೇ ಬೇಕು ಸರ್ವಜ್ಞ॥

**ಅಕ್ಬರ**ನು ಬಾದಶಹನಾದಾಗ **ಪಂಜಾಬಿ**ನ ಕೆಲ ಜಿಲ್ಹೆಗಳು ಮಾತ್ರ ಅವನ ವಶದಲ್ಲಿದ್ದವು. ಅನಾವೃಷ್ಟಿಯಿಂದ ಉತ್ತರ ಭಾಗದಲ್ಲೆಲ್ಲ ಬರಆಗಿತ್ತು. **ಸಿಕಂದರ ಶಹ**ನು ಇನ್ನೂ ಹತವೀರ್ಯನಾಗಿದ್ದಿಲ್ಲ. **ಹೇಮು**ವು ದೊಡ್ಡ ದಂಡಿನೊಡನೆ **ಡಿಲ್ಲಿ**ಯ ಮೇಲೆ ಸಾಗಿ ಬರುತ್ತಿದ್ದನು. ಆದ್ದರಿಂದ **ಅಕಬರ**ನು ಸೋಮಾರಿತನದಲ್ಲಿ ಹೊತ್ತು ಕಳೆಯದೆ, **ಸಿಕಂದರ ಶಹ**ನು ಅಡಗಿಕೊಂಡಿದ್ದ **ಮಾಣಕೋಟ** (೧೪) ದ ಕೋಟೆಯನ್ನು ಮುತ್ತಲಿಕ್ಕೆ ಒಂದು ದಂಡನ್ನಿಟ್ಟು ತಾನು **ಬೈರಾಮ್ ಖಾನ**ನೊಡನೆ **ಜಲಂಧರ**(೧೫)ಕ್ಕೆ ಹೊರಟು ಹೋದನು.

ದುಃಖಗಳು ಒಮ್ಮೆಯೇ ಬರುತ್ತವೆಂಬ ಗಾದೆಯ ಮಾತು ಸುಳ್ಳಲ್ಲ. **ಅಕ್ಬರ**ನಿಗೆ ಕೆಟ್ಟ ಸುದ್ದಿಗಳು ಒಂದರ-ಹಿಂದೊಂದು ಈ ಕಾಲದಲ್ಲಿ ಬರ ದೊಡಗಿದವು. ಮೊದಲನೆಯ ದಿವಸ **ಹೇಮುವು ಆಗ್ರಾಪಟ್ಟಣ**ವನ್ನು ಸುಲಭವಾಗಿ ಹಿಡಿದುಕೊಂಡನೆಂತಲೂ, ಮರುದಿವಸ ಅವನು ಮೊಗಲರ ದಂಡನ್ನು ಸೋಲಿಸಿ **ಡಿಲ್ಲಿ**ಯನ್ನು ತೆಗೆದುಕೊಂಡುದರಿಂದ, **ಟಾರ್ಡಿಬೇಗ**ನು ತನ್ನ ದಂಡಿನೊಡನೆ **ಸರಹಿಂದಿ**ನ ಹಾದಿಯನ್ನು ಹಿಡಿದನೆಂತಲೂ, ಸುದ್ದಿಗಳು ಬಂದುವು. ಇಂತಹ ಪ್ರಸಂಗ*ದಲ್ಲಿ ಎಂತಹ ದೊಡ್ಡ ಶೂರ ನಾದರೂ ಎದೆಗುಂದಬಹುದು. **ಅಕ್ಬರ**ನಾದರೋ ಚಿಕ್ಕ ಬಾಲಕನು. ಆದರೂ ದೈವಯೋಗದಿಂದ ಅವನು ಇಂತಹ ಸಂಕಟಗಳಲ್ಲಿಯೇ ಬೆಳೆ ದಿದ್ದನು. ಆದುದರಿಂದ ಅವನು ಆ ಸಂದರ್ಭದಲ್ಲಿ ಮಾಡತಕ್ಕ ಕಾರ್ಯ ವನ್ನು ಕುರಿತು ತನ್ನ ಸರದಾರರನ್ನು ಕೇಳಲು, **ಬೈರಾಮ**ನ ಹೊರತು ಎಲ್ಲರೂ **ಹಿಂದೂಸ್ಥಾನ**ದಲ್ಲಿ ರಾಜ್ಯಸ್ಥಾಪಿಸುವ ಆಶೆಯನ್ನು ತೊರೆದು **ಕಾಬೂಲಿ**ಗೆ ಹೋಗಬೇಕೆಂದು ಅಭಿಪ್ರಾಯವನ್ನು ಕೊಟ್ಟರು. **ಬೈರಾಮ**ನು ಮಾತ್ರ **ಶತದ್ರು**ವನ್ನು ದಾಟ, **ಟಾರ್ಡಿಬೇಗ**ನನ್ನು **ಸರಹಿಂದಿ**ಸಲ್ಲಿ ಕೂಡಿ **ಡಿಲ್ಲಿ**ಯನ್ನು ತಿರಿಗಿ ತೆಗೆದುಕೊಳ್ಳಲಿಕ್ಕೆ ವಿಶ್ವ ಪ್ರಯತ್ನವನ್ನು ಮಾಡಬೇಕೆಂತಲೂ, **ಡಿಲ್ಲಿ**ಯು ವಶವಾದ ಬಳಿಕ **ಕಾಬೂಲ**ನ್ನು ಗೆಲ್ಲು ವುದು ಶ್ರಮದ ಕೆಲಸವಲ್ಲವೆಂತಲೂ, ಖಂಡಿತವಾಗಿ ಹೇಳಿದನು. ಧೀರೋ ದಾತ್ತನಾದ **ಅಕ್ಬರ**ನಿಗೂ ಈ ವಿಚಾರವು ಸರಿದೋರಿತು.†

---

* ಸಂದರ್ಭ.

† ಅಣುವಸೆ ಸೋರ್ದಣಂ ಮಲಿನವಾಗಿ ನಿರಾಮಿಷವಾದ ಗೋಷ್ಠಿಯಂ। ಪ್ರಣಯದೆ ಪೊರ್ದಿ ನಲ್ಮೆವಡೆಗುಂ ಶುನಕಂ ಪಸಿವಿಂಗದಿರ್ದೊಡಂ॥ ಗಣಿಸದೆ ಸಾರ್ದ ಜಂಬುಕವನಾನೆಯ ಕೊಲ್ವಡೆ ಪೋಪುದಲ್ತೆ ವಾ। ರಣರಿಪು ಕಷ್ಟದೊಳ್ಖಿಲರುಂ ನಿಜಶಕ್ತ್ಯನು ರೂಪಕಾಂಕ್ಷಿಗಳ್ ॥

ಆದುದರಿಂದ **ಅಕ್ಬರನು ಬೈರಾಮ**ನೊಡನೆ **ಸರಹಿಂದಿ**ಗೆ ಬಂದು **ಟಾರ್ಡಿಬೇಗ**ನನ್ನು ಕೂಡಿದನು. ಆದರೆ ಈ **ಟಾರ್ಡಿ**ಯು ತುರುಕರವ ನಾಗಿದ್ದನು. **ಬೈರಾಮ**ನಿಗೂ ಇವನಿಗೂ ಮತ ಸಂಬಂಧವಾದ ದ್ವೇಷ ವಿತ್ತು. ಇದಲ್ಲದೆ ಇವನು **ಬೈರಾಮ**ನ ಪ್ರತಿಸ್ಪರ್ಧಿಯಾಗಿದ್ದನು. **ಹುಮಾಯೂನ್ ಕಾಮರಾನ**ರಿಗೆ ಜಗಳ ನಡೆದಾಗ ಈ **ಟಾರ್ಡಿಬೇಗ**ನು ಒಮ್ಮೆ ಈ ಪಕ್ಷವನ್ನೂ ಮತ್ತೊಮ್ಮೆ ಆ ಪಕ್ಷವನ್ನೂ ಹಿಡಿದು ಕಟ್ಟಕಡೆಗೆ **ಹುಮಾಯೂನ**ನ ಪಕ್ಷವನ್ನು ದೃಢವಾಗಿ ಸೇರಿಕೊಂಡನು. **ಹುಮಾಯೂನ**ನು ಸತ್ತಾಗ ಇವನು ತೋರಿಸಿದ ರಾಜನಿಷ್ಠೆಯನ್ನು ಮೇಲೆ ವಿವರಿಸಿಯೇ ಇರುತ್ತೇವೆ. ಆದರೂ **ಬೈರಾಮ**ನು ಅವನನ್ನು ತನ್ನ ಡೇರೆಗೆ ಕರಿಸಿ, **ಡಿಲ್ಲಿ**ಯಿಂದೋಡಿ ಬಂದ ತಪ್ಪನ್ನು ಅವನ ಮೇಲೆ ಹೊರಿಸಿ, **ಅಕ್ಬರ**ನಿಗೆ ಈ ವಿಷಯವಾಗಿ ಏನೂ ತಿಳಿಸದೆ, ಅವನನ್ನು ಕೊಲ್ಲಿಸಿ ಬಿಟ್ಟನು. ಈಯನ್ಯಾಯದ ಕೃತ್ಯವನ್ನು ನೋಡಿ **ಅಕ್ಬರ**ನು ಬಹಳವಾಗಿ ನೊಂದುಕೊಂಡನು; ಅಂದಿನಿಂದ ಅವನ ಮನಸ್ಸು **ಬೈರಾಮ**ನಿಗೆ ವಿರುದ್ಧವಾಗಿ ತಿರುಗಿತು. ಆದರೂ ಅವನು ಧೂರ್ತನಾದ್ದರಿಂದ ತನ್ನ ವಿರುದ್ಧಭಾವವನ್ನು **ಬೈರಾಮ**ನಿಗೆ ತಿಳಿಯಗೊಡಲಿಲ್ಲ.

ಇತ್ತ **ಹೇಮುವು ವಿಕ್ರಮಾದಿತ್ಯ** ರಾಜನೆಂಬ ಬಿರುದನ್ನು ಧರಿಸಿ, **ಡಿಲ್ಲಿ**ಯ ಬಡಗಣಿಗೆ ೫೩ ಮೈಲು ದೂರದಲ್ಲಿರುವ **ಪಾಣಿಪತ**ಕ್ಕೆ, ಮುಂಚಿತವಾಗಿಯೇ ತೋಫುಗಳನ್ನು ಕಳುಹಿ, ಹಿಂದಿನಿಂದ ತಾನೂ ದಂಡಿನೊಡನೆ ಹೊರಟನು. **ಅಕ್ಬರ**ನೂ, **ಅಲ್ಲಿಕುಲಿಖಾನಈಸೈಬಿನಿ**ಯೆಂಬ ಒಬ್ಬ ತನ್ನ ಶೂರನಾದ ಸರದಾರನನ್ನು ಮುಂದೆ ಕಳುಹಿ, ತಾನು **ಬೈರಾಮ**ನೊಡನೆ **ಸರಹಿಂದಿ**ನಿಂದ ಹೊರಟನು. ಇವನು **ಪಾಣಿಪತ** (೧೭) ಕ್ಕೆ ಬರುವುದಕ್ಕಿಂತ ಮೊದಲು **ಅಲ್ಲಿ**ಯು **ಹೇಮು**ವಿನ ತೋಫುಗಳನ್ನು ಹಿಡಿದುಕೊಂಡಿದ್ದನು. ಈ ಶೌರ್ಯದ ಕೃತ್ಯವನ್ನು ನೋಡಿ **ಅಕ್ಬರ**ನು ಅವನಿಗೆ **ಜಾಮುಖಾನ**ನೆಂಬ ಬಿರುದನ್ನು ಕೊಟ್ಟನು. ಈ ತೋಫುಗಳು ತುರ್ಕಸ್ಥಾನದವಾದದರಿಂದ ಅವು ಮೊಗಲರ ಕಯ್ಸೇರಿದುದನ್ನು ಕೇಳಿ **ಹೇಮು**ವಿನ ಮನಸ್ಸಿಗೆ ಅತಿವಿಷಾದವಾಯಿತು. ಆದರೆ ಏನು ತಾನೇ ಮಾಡಿಯಾನು? ಮುಂದೆ ೧೫೫೬ನೆಯ ಇಸವಿ ನವೆಂಬರ್ ೫ನೆಯ ದಿವಸ ಎರಡು ದಂಡು

ಗಳಿಗೂ **ಪಾಣಿಪತ**ದಲ್ಲಿ ಕಡುಗಾಳಗವಾಯಿತು. **ಹೇಮು**ವು ತನ್ನ ದಂಡಿನಲ್ಲಿ ಮೂರು ಭಾಗಗಳನ್ನು ಮಾಡಿದನು. ಅವನ ೫೦೦ ಆನೆಗಳು ಚೂಣಿಯಲ್ಲಿದ್ದುವು; ಅವುಗಳನ್ನು ನಡಿಸಿಕೊಂಡು ಬಂದು, **ಹೇಮು**ವು **ಅಕ್ಬರ**ನ ದಂಡಿನ ಎಡಭಾಗದ ಮೇಲೆ ಬಿದ್ದು, ಅವರನ್ನು ಕಂಗೆಡಿಸಿದನು. ಅಷ್ಟರಲ್ಲಿ **ಹೇಮು**ವಿನ ಉಳಿದ ದಂಡಿನವರು ಅವನ ಸಹಾಯಕ್ಕೆ ಬಾರದುದರಿಂದ, **ಹೇಮು**ವು **ಬೈರಾಮ**ನಿದ್ದ ದಂಡಿನ ಮಧ್ಯ ಭಾಗದ ಮೇಲೆ ಬಿದ್ದನು. ಎರಡು ದಂಡಿನವರೂ ಹುರುಪಿನಿಂದ ಕಾದುತ್ತಿರುವಾಗ ಹಗೆಗಳ ಒಂದು ಬಾಣವು **ಹೇಮು**ವಿನ ಕಣ್ಣಿನಲ್ಲಿ ನಟ್ಟಿತು. ಕೂಡಲೆ ಅವನು ಮೆಯ್ಮರೆದನು; ಅವನ ದಂಡಿನವರು ಕಂಗೆಟ್ಟೋಡ-ತೊಡಗಿದರು; ಎಲ್ಲಿ ನೋಡಿದರೂ ಹಾಹಾಕಾರವಾಯಿತು. **ಹೇಮು**ವಿನ ಆನೆಯು ಬೆದರಿ ಗುಡ್ಡದ ಕಡೆಗೆ ಓಡಿತು. **ಅಕ್ಬರ**ನ ಒಬ್ಬ ಸರದಾರನು ಅದನ್ನು ಬೆನ್ನಟ್ಟಿ ಮೆಯ್ಮರೆತ **ಹೇಮು**ವನ್ನು ತಂದು, ಬಾದಶಹನ ಮುಂದಿಟ್ಟನು. ಹೀಗೆ ತಂದಿರಿಸಿದ **ಹೇಮು**ವಿನ ದೇಹವನ್ನು ತೋರಿಸುತ್ತಾ **ಬೈರಾಮ**ನು ಬಾದಶಹನಿಗಂದುದೇನಂದರೆ:—"ಇವನು ಹಿಂದೂ ಧರ್ಮದವನು; ಇವನನ್ನು ತಾವೇ ತಮ್ಮ ಕಯ್ಯಿಂದ ಕೊಂದರೆ ಬಹಳ ಪುಣ್ಯ ಬರುವುದು" ಅದನ್ನು ಕೇಳಿ **ಅಕ್ಬರ**ನು ತನ್ನ ಆಟಾಲಿಕ್ಕನ ಮಾತನ್ನು ಮೀರಲಾರದೆ, ಕತ್ತಿಯನ್ನು ಒರೆಯಿಂದ ಹಿರಿದು, ಅದನ್ನು ಮೆತ್ತಗೆ **ಹೇಮು**ವಿನ ಕುತ್ತಿಗೆಗೆ ಸೋಕಿಸಿ, ಶೋಕೋದ್ರೇಕದಿಂದ ಕಣ್ಣೀರನ್ನು ಸುರಿಸಿ,* ಖಡ್ಗವನ್ನು ಕೆಳಗೆ ಎಸೆದು ಬಿಟ್ಟನು. **ಅಕ್ಬರ**ನು ಮೆಯ್ಮರೆತ ದೇಹವನ್ನು ಕಡಿಯಲಿಕ್ಕೊಪ್ಪದುದರಿಂದ **ಬೈರಾಮ**ನು ತನ್ನ ಕಯ್ಯಿಂದಲೆ ಅವನ ತಲೆಯನ್ನು ಕಡಿದು ಹಾಕಿದನು.

ಬಳಿಕ **ಅಕ್ಬರ**ನಿಗೆ ದೊಡ್ಡ ಹಗೆಗಳಾರೂ ಉಳಿಯಲಿಲ್ಲ. ಆಗ ಅವನು ಹೊತ್ತುಗಳೆಯದೆ ದಂಡಿನೊಡನೆ **ಡಿಲ್ಲಿ**ಗೆ ಹೋಗಿ, **ಹೇಮು**ವಿನ ಉಳಿದ ದಂಡನ್ನು ಬೆನ್ನಟ್ಟಿ ಅವರ ವಶದಲ್ಲಿದ್ದ ಬಂಡಾರವನ್ನು ತರಲಿಕ್ಕೆ **ಪೀರಮುಹಮ್ಮದಖಾನ**ನೆಂಬ ದಳವಾಯಿಯನ್ನು ಕಳುಹಿ, ತಾನೊಂದು

* ಈ ಕನಿಕರವು ಹಿಂದುಗಡೆ ಹುಟ್ಟಿಸಿದ ಕಾಲ್ಪನಿಕ ಕಥೆಯೆಂತಲೂ, ಬೈರಾಮನು ಹೇಳಿದಂತೆ ಅಕ್ಬರನು ಹೇಮುವಿನ ಕುತ್ತಿಗೆಯನ್ನು ಕಡಿದನೆಂತಲೂ ವ್ಹಿನ್ಸೆಂಟ ಸ್ಮಿಥ್ ಸಾಹೇಬರು ಬರೆಯುತ್ತಾರೆ.

ತಿಂಗಳ ವರೆಗೆ **ಡಿಲ್ಲಿ**ಯಲ್ಲೇ ನಿಂತನು. **ಪೀರಮುಹಮ್ಮದಖಾನ**ನು ಬಾದಶಹನ ಅಪ್ಪಣೆಯಂತೆ ಬಂಡಾರವನ್ನು ತೆಗೆದುಕೊಂಡು ಬಂದುದರಿಂದ ಅವನಿಗೆ ಬಹಳ ಸಂತೋಷವಾಯಿತು. ಬಳಿಕ ಅವನು **ಆಗ್ರಾದ** ಮೇಲೆ ದಂಡೆತ್ತಿ ಹೋಗಿ ಅದನ್ನು ಹಿಡಿದುಕೊಂಡನು.

ಅತ್ತಲಾಗಿ **ಮಾಣಕೋಟ**(೧೫) ದ ಭದ್ರವಾದ ಕೋಟೆಯಲ್ಲಿದ್ದ **ಸಿಕಂದರಸೂರ**ನು, ೧೫೫೭ರಲ್ಲಿ ಮೊಗಲರ ದಂಡನ್ನು ಸೋಲಿಸಿ **ಪಂಜಾಬಿ**ನಲ್ಲಿ ಹಾವಳಿಯನ್ನು ಮಾಡತೊಡಗಿದನು. ಮುಂದೆ ಮಾರ್ಚ್ ತಿಂಗಳಲ್ಲಿ ಈ ಸುದ್ದಿಯು ಬಂದುದರಿಂದ, **ಅಕ್ಬರ**ನು **ಲಾಹೋರಿ**ನ ಮೇಲಿಂದ **ಜಲಂಧರ**(೧೬) ಕ್ಕೆ ಹೋದನು. ಆ ಸುದ್ದಿಯನ್ನು ಕೇಳಿ **ಸಿಕಂದರ**ನು **ಮಾಣಕೋಟ**ಕ್ಕೆ ಹೋದುದರಿಂದ **ಅಕ್ಬರ**ನು ಅದಕ್ಕೆ ಮುತ್ತಿಗೆ ಹಾಕಿದನು. ಈ ಮುತ್ತಿಗೆಯು ಆರು ತಿಂಗಳುಗಳ ವರೆಗೆ ನಡೆದ ಬಳಿಕ, **ಸಿಕಂದರ**ನು ಹಣ್ಣಿಗೆ ಬಂದು, ಒಪ್ಪಂದದ ಸೂಚನೆಗಳನ್ನು ಮಾಡತೊಡಗಿದನು.* ತಾನು ಮುಂದೆ ಜಗಳ ತೆಗೆಯಲಿಕ್ಕಿಲ್ಲವೆಂಬುದಕ್ಕೆ ಓಲಾಗಿ ತನ್ನ ಮಗನನ್ನು **ಅಕ್ಬರ**ನಿಗೊಪ್ಪಿಸಿ, **ಸಿಕಂದರ**ನು ಬಂಗಾಲಕ್ಕೆ ಹೋಗಲಿಕ್ಕೆ ಒಡಂಬಟ್ಟನು. ಬಳಿಕ **ಅಕ್ಬರ**ನು **ಮಾಣಕೋಟ**ನ್ನು ಸ್ವಾಧೀನ ಮಾಡಿಕೊಂಡು **ಲಾಹೋರಿ**ಗೆ ಹೋಗಿ ಅಲ್ಲಿ ೪ ತಿಂಗಳು ೧೪ ದಿವಸ ನಿಂತು **ಪಂಜಾಬು** ಪ್ರಾಂತದಲ್ಲಿ ಮಾಡಬೇಕಾಗಿದ್ದ ಏರ್ಪಾಡುಗಳನ್ನು ಮಾಡಿ, **ಡಿಲ್ಲಿ**ಗೆ ಮರಳಿ ಬಂದು, ತನ್ನ ಅಟಾಲಿಕ್ಕನಾದ **ಬೈರಾಮ**ನ ಅಂಕೆಯಲ್ಲಿ ನಿಂತನು (೧೫ ಮಾರ್ಚ್, ೧೫೫೮). **ಇರಾಣ**ದಿಂದ ಓಡಿ ಬಂದ **ಅಬ್ದುಲ್ ಲತೀಫ**ನೆಂಬ ವಿದ್ವಾಂಸನನ್ನು **ಬೈರಾಮ**ನು ಈ ಕಾಲಕ್ಕೆ **ಅಕ್ಬರ**ನಿಗೆ ಕಲಿಸಲಿಕ್ಕೆ ನೇಮಿಸಿದನು.

ಮುಂದಿನ ಎರಡು ವರ್ಷಗಳು ಬಹಳ ಮುಖ್ಯವಾದುವು. ಈ ಕಾಲದಲ್ಲಿ **ಬೈರಾಮ**ನ ದುಷ್ಟತನವೂ, ಸ್ವಮತ ಪಕ್ಷಪಾತವೂ, ಕೊಬ್ಬು, ಅನ್ಯಾಯವೂ, ಕ್ರೂರತನವೂ **ಅಕ್ಬರ**ನ ಮನಸ್ಸನ್ನು ತಿರುಗಿಸಿದವು. ಪೂಜ್ಯಬುದ್ಧಿಯು ಹೋಗಿ ತಿರಸ್ಕಾರ ಬುದ್ಧಿಯು ತಲೆದೋರಿತು. **ಬೈರಾಮ**ನು

---

* ಅಕ್ಬರನು ಮಾಣಕೋಟದಲ್ಲಿದ್ದಾಗ ಅವನ ಕುಟುಂಬದವರೆಲ್ಲರು ಕಾಬೂಲಿನಿಂದ ಅಲ್ಲಿಗೆ ಬಂದರು. ಅಕ್ಬರನ ಸೋದರತ್ತೆಯ ಮಗಳಾದ ಸಾಲಿಮಾ ಬೇಗಮೆಂಬವಳನ್ನು ಬೈರಾಮನು ಮದುವೆಯಾದನು. ಅವನ ತರುವಾಯ ಅಕ್ಬರನು ತಾನೇ ಆಕೆಯನ್ನು ಮದುವೆ ಮಾಡಿಕೊಂಡನು.

**ಅಕ್ಬರ**ನನ್ನು ಲೆಕ್ಕಿಸದೆ, ನೀತಿಯ ಮಾರ್ಗವನ್ನು ಬಿಟ್ಟು ಮನಬಂದ ಹಾಗೆ ನಡೆದುದರಿಂದ, ಈಪಾಡಾಯಿತೆನ್ನಲಿಕ್ಕೆ ಅಡ್ಡಿಯಿಲ್ಲ.

ಈ ವೈಮನಸ್ಸಿನ ಕಾರಣಗಳನ್ನೆಲ್ಲ ಕೆಳಗೆ ಕೊಡುತ್ತೇವೆ:—

(ಅ) ಹಿಂದೆ ವಿವರಿಸಿದಂತೆ **ಬೈರಾಮ**ನು ಸುನ್ನಿ ಮತದವನಾದ **ಟಾರ್ಡಿ ಬೇಗ**ನೆಂಬ ಸರದಾರನನ್ನು ಅನ್ಯಾಯವಾಗಿ ಕೊಲ್ಲಿಸಿದನು. ಆದ್ದರಿಂದ ಸುನ್ನಿ ಮತದ ಎಲ್ಲ ಸರದಾರರು ಅವನ ಮೇಲೆ ಹಲ್ಲು ಕಟಯುತ್ತಿದ್ದರು.

(ಆ) ೧೫೫೮ರಲ್ಲಿ **ಬೈರಾಮ**ನು **ಸೇಖ ಗಡಾಯಿ** ಎಂಬ ಸಿಯಾ ಮತದ ಗೃಹಸ್ಥನನ್ನು **ಸದರ-ಇ-ಸಾಹೂರ** ಎಂಬ ದೊಡ್ಡ ಅಧಿಕಾರ ಸ್ಥಾನಕ್ಕೆ ನಿಯಮಿಸಿದನು. ಇದು ದರಬಾರಿನಲ್ಲಿ ಳನೆಯ ಉಚ್ಚಸ್ಥಾನವಾದ್ದರಿಂದ ಉಳಿದ ಸರದಾರರು **ಬೈರಾಮ**ನ ಮೇಲೆ ವಿಷಕಾರ ತೊಡಗಿದರು.

(ಇ) ರಾಣಿವಾಸದ ಜನರೂ, ಅವರ ಆಪ್ತರೂ **ಬೈರಾಮ**ನ ವಿರೋಧಿಗಳಾಗಿದ್ದರು. **ಅಕ್ಬರ**ನ ತಾಯಿಯಾದ **ಹಾಮಿದಾ ಬಾನು ಬೇಗಮ್ಮ**ಳೂ, ಅವನ ದಾಯಿಯಾದ **ಮಾಹಮ್ ಅನ**ಗಳೂ, ಅವಳ ಮಗನಾದ **ಅದಮ್ ಖಾನ**ನೂ, ಅವಳ ಆಪ್ತನೂ **ಡಿಲ್ಲಿ**ಯ ಸುಬೇದಾರನೂ ಆದ **ಸಹಾಬುದ್ದೀನ**ನೂ **ಬೈರಾಮ**ನ ಮೇಲೆ ಬೆಂಕಿ ಕಾರುತ್ತಿದ್ದರು.

(ಈ) **ಬೈರಾಮ**ನು ಅಧಿಕಾರಮತ್ತನೂ, ಅವಿಚಾರಿಯೂ, ಗರ್ವಿಷ್ಟನೂ ಆದ್ದರಿಂದ ಎಷ್ಟೋ ಜನರು ಅವನನ್ನು ಸೇರುತ್ತಿದ್ದಿಲ್ಲ.

(ಉ) **ಬೈರಾಮ**ನು **ಅಕ್ಬರ**ನ ಗೃಹಕೃತ್ಯದ ಖರ್ಚಿಗೆ ಸಾಕಷ್ಟು ಹಣ ಕೊಡುತ್ತಿದ್ದಿಲ್ಲ. ಇಷ್ಟೇ ಅಲ್ಲ. ಆದರೆ ಅವನು ತನ್ನ ಆಳುಗಳಿಗೆ ಕೊಟ್ಟಷ್ಟು ಸಂಬಳವನ್ನಾದರೂ **ಅಕ್ಬರ**ನ ಆಳುಗಳಿಗೆ ಕೊಡುತ್ತಿದ್ದಿಲ್ಲ.

ಈ ಕಾರಣಗಳ ಮೂಲಕವಾಗಿ ಎಷ್ಟೋ ಜನರು **ಬೈರಾಮ**ನ ವಿರುದ್ಧವಾಗಿ ಹುರಿಯಾದರು. ಆದರೆ ಮಾಡುತ್ತಾರೇನು? ಹೊಟ್ಟೆಯೊಳಗಿನ ಸಿಟ್ಟು ರಟ್ಟೆಯೊಳಗಿದ್ದಿಲ್ಲ. ಆದ್ದರಿಂದ ಅವನು **ಅಕ್ಬರ**ನ ಕಿವಿಯೂದಲಾರಂಭಿಸಿದರು. **ಅಕ್ಬರ**ನಾದರೊ ೧೮ ವರ್ಷ ಪ್ರಾಯದ ಯುವಕನು. ರಾಜ್ಯಾಧಿಕಾರ **ಬೈರಾಮ**ನ ಕಯ್ಯಲ್ಲಿ; ದಂಡು **ಬೈರಾಮ**ನ ಕಯ್ಯಲ್ಲಿ; ರಾಜ್ಯದ ಭಾಂಡಾರವಾದರೂ **ಬೈರಾಮ**ನ ಕಯ್ಯಲ್ಲೇ ಇತ್ತು.

ದೇವರ ಒಲ್ಮೆಯೊಂದಿರಲು ಕಡ್ಡಿಯೇ ಗುಡ್ಡವಾಗುವುದೆಂಬ ಮಾತಿನ ನಿದರ್ಶನವು ಈ ಕಾಲಕ್ಕೆ **ಅಕ್ಬರ**ನಿಗೆ ಬಂತು. ತನ್ನ ವಿರುದ್ಧವಾಗಿ ನಡೆದ ಒಳಸಂಚಿನ ಸುದ್ದಿಯು **ಬೈರಾಮು**ನ ಕಿವಿಗೆ ಬಿದ್ದಿತ್ತು. ಅವನ ಹಸ್ತಕನಾದ **ಶೇಖ ಗಡಾಯಿ**ಯು **ಅಕ್ಬರ**ನನ್ನು ಹಿಡಿಸಿ ಸೆರೆಯಲ್ಲಿಟ್ಟು ತಾನೇ ಸ್ವತಂತ್ರನಾಗಿ ರಾಜ್ಯವಾಳಬೇಕೆಂದು ಸೂಚಿಸಿದನು. ಆದರೆ ಈ ರಾಜದ್ರೋಹದ ವಿಚಾರವು **ಬೈರಾಮು**ನಿಗೆ ಸೇರಲಿಲ್ಲ. ಇಷ್ಟು ವರ್ಷ ರಾಜಭಕ್ತಿಯಿಂದಲೂ, ಏಕನಿಷ್ಠೆಯಿಂದಲೂ ಸೇರಿಸಿ, ಈಗ ರಾಜದ್ರೋಹಿಯಾಗಲಿಕ್ಕೆ ಅವನ ಮನಸ್ಸು ಒಡಂಬಡಲಿಲ್ಲ. **ಬೈರಾಮು**ನ ಈ ಸೌಜನ್ಯವೇ **ಅಕ್ಬರ**ನನ್ನು ಬಹಳ ಮಟ್ಟಿಗೆ ಉಳಿಸಿತೆನ್ನಬಹುದು. ದೇವರು **ಅಕ್ಬರ**ನನ್ನು ಅನುಗ್ರಹಿಸಿದ್ದರಿಂದ **ಬೈರಾಮು**ನಲ್ಲಿ ದ್ರೋಹದ ವಿಚಾರವು ನೆಲೆಗೊಳ್ಳಲಿಲ್ಲ ಎನ್ನಲಿಕ್ಕೆ ಅಡ್ಡಿಯಿಲ್ಲ.

ಈ ಕಾಲಕ್ಕೆ **ಬೈರಾಮು**ನು **ಆಗ್ರಾ**ದಲ್ಲಿದ್ದನು ಮತ್ತು **ಅಕ್ಬರ**ನು ಬೇಟೆಯಾಡಲಿಕ್ಕೆ ಹೋಗಿದ್ದನು. **ಬೈರಾಮು**ನ ವಿರುದ್ಧವಾದ ಒಳಸಂಚಿನಲ್ಲಿ **ಮಾಹಮ್** ಅನಗಳು ಮುಖ್ಯಸ್ಥಳಾಗಿದ್ದಳು. **ಬೈರಾಮು**ನು ರಾಜದ್ರೋಹಿಯಾಗಬಹುದೆಂದೆಣಿಸಿ **ಡಿಲ್ಲಿ**ಯ ಕೋಟೆಯನ್ನು ಭದ್ರಪಡಿಸಿ ಮುಖ್ಯ ಮುಖ್ಯ ಸರದಾರರನ್ನೊಡಕೊಂಡು **ಕಾಬೂಲು-ಲಾಹೋರ**ಗಳು **ಬೈರಾಮು**ನ ಕಯ್ಸೇರದಂತೆ ವ್ಯವಸ್ಥೆಮಾಡಿ, ಎಲ್ಲ ಸಿದ್ಧತೆಯಾದ ಬಳಿಕ **ಹಾಮಿದಾ ಬಾನು ಬೇಗಮ್ಮ**ಳು ಬಹಳ ಅಸ್ವಸ್ಥಳಾಗಿದ್ದುದರಿಂದ ಕೂಡಲೆ ಹೊರಟು ಬರಬೇಕೆಂದು **ಅಕ್ಬರ**ನಿಗೆ ಹೇಳಿ ಕಳುಹಿದಳು. ಆ ಕ್ಷಣವೇ **ಅಕ್ಬರ**ನು ಬೇಟೆಯನ್ನು ಬಿಟ್ಟು **ಡಿಲ್ಲಿ**ಗೆ ಬಂದು, ತನ್ನ ಶಿಕ್ಷಕನಾದ **ಅಬ್ದುಲ್ ಲತೀಫ**ನ ಕಯ್ಯಲ್ಲಿ ಒಂದು ಪತ್ರ ಕೊಟ್ಟು ಅವನನ್ನು **ಬೈರಾಮು**ನಿದ್ದೆಡೆಗೆ ಕಳುಹಿದನು. ಆ ಪತ್ರದ ಸಾರಾಂಶವೇನಂದರೆ:—

"ತಾವು ಪ್ರಮಾಣಿಕರೂ ರಾಜನಿಷ್ಠರೂ ಆದ್ದರಿಂದ ಈಹೊತ್ತಿನವರೆಗೆ ರಾಜ್ಯಭಾರವನ್ನು ತಮಗೆ ಒಪ್ಪಿಸಿ ನಾನು ಆಟನೋಟಗಳಲ್ಲಿ ಕಾಲ ಕಳೆಯುತ್ತಿದ್ದೆನು. ಇನ್ನು ಮುಂದೆ ರಾಜ್ಯದಾಡಳಿತವನ್ನು ನಾನೇ ಕಯ್ಕೊಳ್ಳುವೆನು. ಆದ್ದರಿಂದ ತಾವು ಬಹಳ ದಿವಸ ಇಚ್ಛಿಸುತ್ತಿರುವ **ಮಕ್ಕಾ** ಯಾತ್ರೆಗೆ ಹೋಗಬಹುದು. ಕೆಲವು ಗ್ರಾಮಗಳನ್ನು ತಮಗೆ ಜಹಗೀರಾಗಿ

ಹಾಕಿ ಕೊಡುವೆನು. ಅವುಗಳ ಉತ್ಪನ್ನವನ್ನು ತಾವು ಇದ್ದಲ್ಲಿಗೆ ತರಿಸಿ ಕೊಳ್ಳಬಹುದು."

ಮೇಲೆ ಕೊಟ್ಟ ಪತ್ರವನ್ನು **ಬೈರಾಮ**ನಿಗೆ ಕಳುಹಿದ ಬಳಿಕ **ಅಕ್ಬರ** ಬಾದಶಹನು (ಈಗ ಅವನು ನಿಜವಾಗಿ ಬಾದಶಹನಾದನು) ತನ್ನ ಅಪ್ಪಣೆಯ ಹೊರತು ಉಳಿದವರ ಅಪ್ಪಣೆಯನ್ನು ಇನ್ನು ಮುಂದೆ ಮನ್ನಿಸ ಕೂಡದೆಂದು ಒಂದು ಒಟ್ಟುಹುಕುಮನ್ನು ಹೊರಡಿಸಿ ಅದನ್ನು ಎಲ್ಲ ಸುಬೇದಾರರಿಗೂ ಸರದಾರರಿಗೂ ದಂಡಿನ ನಾಯಿಕರಿಗೂ ಕಳುಹಿಕೊಟ್ಟನು.

ಈ ಕಾಲದಲ್ಲಿ **ಬೈರಾಮ**ನು **ಆಗ್ರಾ**ದಲ್ಲಿದ್ದನು. ಅವನಿಗೆ ಈ ಸುದ್ದಿಯು ಮೊದಲೇ ತಿಳಿದಿತ್ತು. ಆದ್ದರಿಂದ ಅವನು ಕನಲ್ದು ಕೆಂಡವಾಗಿ ಮುಂದೆ ಮಾಡತಕ್ಕುದನ್ನು ತಿಳಿಯದೆ, **ಆಗ್ರಾ**ವನ್ನು ಬಿಟ್ಟು **ಬಿಯಾನ** (೧೮) ಕ್ಕೆ ಬಂದು, ಅಲ್ಲಿ **ಅಕ್ಬರ**ನ ವಿರೋಧಿಗಳಾದ ಸರದಾರರನ್ನು ಸೆರೆಯಿಂದ ಬಿಡಿಸಿ, ಅವರೊಡನೆ **ನಾಗೂರಿ**ಗೆ (೧೯) ಬಂದನು. ಅಲ್ಲಿ ಇದ್ದಾಗ ಅವನಿಗೆ **ಅಕ್ಬರ**ನ ಅಪ್ಪಣೆಯು ಸೇರಿತು. ಆಗ ಅವನು ತಾನು ಬಾದಶಹನಪ್ಪಣೆಯನ್ನು ಪಾಲಿಸುವವನೆಂದು ತೋರಿಸುವುದಕ್ಕೆ ಸರದಾರರ ಚಿಹ್ನಗಳಾದ ನಿಶಾನೆಗಳನ್ನೂ ವಾದ್ಯಗಳನ್ನೂ **ಅಕ್ಬರ**ನಿಗೆ ಕಳುಹಿ, **ಬಿಕಾನೀರಿ**ನಲ್ಲಿದ್ದ ತನ್ನ ದತ್ತುಮಗನಿಗೆ ಹೆಂಡರು ಮಕ್ಕಳನ್ನೊಪ್ಪಿಸಿ, **ಜಲಂಧರ ದುವಾಬಿ**ನಲ್ಲಿ ದಂಗೆ ಎಬ್ಬಿಸಿದನು. ಮುಂದೆ ಅವನನ್ನು **ಪಂಜಾಬಿ**ನ ಸುಬೇದಾರನು ಸೋಲಿಸಿದುದರಿಂದ ಅವನು **ತಿಲ್ವಾರ** (೨೦) ಕ್ಕೆ ಓಡಿ ಹೋದನು.

ಇತ್ತ **ಅಕ್ಬರ**ನಿಗೆ **ಬೈರಾಮ**ನು **ಪಂಜಾಬಿಗೆ** ಹೋಗಿ ದಂಗೆ ಮಾಡುವನೆಂಬ ಸುದ್ದಿಯು ಮೊದಲೇ ತಿಳಿದಿತ್ತು. ಆದುದರಿಂದ ಅವನು **ಬೈರಾಮ**ನಿಂದ ಬಂದ ಸರದಾರರ ಚಿಹ್ನಗಳನ್ನು ಅವನ ವಿರೋಧಿಯಾದ **ಪೀರ ಮುಹಮ್ಮದ**ನೆಂಬ ಒಬ್ಬ ಸರದಾರನಿಗೆ* ಕೊಟ್ಟು, **ಬೈರಾಮ**ನನ್ನು ಬೆನ್ನಟ್ಟಲಿಕ್ಕೆ ಅವನನ್ನು ಕಳುಹಿ, ತಾನೂ ಅದೇ ದಾರಿಯನ್ನೇ ಹಿಡಿದನು.

* ಪೀರ ಮುಹಮ್ಮದನು ಮೊದಲು ಬೈರಾಮನ ವಿಶ್ವಾಸದ ಸೇವಕನಾಗಿದ್ದು ಮುಂದೆ ಸೊಕ್ಕಿನಿಂದ ನಡೆದುದರಿಂದ ಕೆಲಸದಿಂದ ದೂರ ಮಾಡಲ್ಪಟ್ಟಿದ್ದನು. ಅಂತಹನನ್ನು ತನ್ನನ್ನು ಹಿಂಬಾಲಿಸಲಿಕ್ಕೆ ಕಳುಹಿದ್ದರಿಂದ ಬೈರಾಮನು ಸಿಟ್ಟಿಗೆದ್ದು ತಿರುಗಿ ಬಿದ್ದು ರಾಜದ್ರೋಹ ಬಗೆದನೆಂದು ವ್ಹಿನ್ಸೆಂಟ ಸ್ಮಿಥ ಸಾಹೇಬರು ಬರೆಯುತ್ತಾರೆ.

ಅಷ್ಟರಲ್ಲಿ ತನ್ನ ದತ್ತುಮಗನು ತನಗೆ ಮೋಸಮಾಡಿದ್ದರಿಂದಲೂ, ಜನರು ಅನುಕೂಲರಾಗದುದರಿಂದಲೂ, **ಬೈರಾಮನು** ಪಶ್ಚಾತ್ತಾಪ ಪಟ್ಟು, ಬಾದಶಹನ ಮರೆಹೋಗಬೇಕೆಂದು ನಿಶ್ಚಯಿಸಿ, ಅವನಿದ್ದೆಡೆಗೆ ಬಂದು ಕಣ್ಣೀರನ್ನು ಸುರಿಸುತ್ತ ಅವನಡಿಗೆರಗಿದನು. ಆಗ **ಅಕ್ಬರನ** ಹೃದಯವು ಕರಗಿತು; ಅವನಲ್ಲಿ ಕನಿಕರ ಹುಟ್ಟಿತು; ಮೊದಲು **ಬೈರಾಮನು** ಮಾಡಿದ್ದ ಸಾಹಸ ಕಾರ್ಯಗಳೆಲ್ಲ ಅವನ ನೆನಪಿಗೆ ಬಂದುವು; ಅವನು ಬಗೆದಿದ್ದ ದ್ರೋಹಗಳೆಲ್ಲ ಮರೆತು ಹೋದುವು. ಆದುದರಿಂದ ಬಾದಷಹನು ತನ್ನ ಪೀಠದಿಂದೆದ್ದು **ಬೈರಾಮನನ್ನು** ಕೈಹಿಡಿದೆಬ್ಬಿಸಿ ತನ್ನ ಹತ್ತಿರದಲ್ಲಿದ್ದ ಎಲ್ಲಾ ಸರದಾರರಿಗೂ ಮೇಲಾದ ಸ್ಥಳದಲ್ಲಿ ಕುಳ್ಳಿರಿಸಿ, ಅವನಿಗೆ ಅಂದುದೇನಂದರೆ:—"ತಾವು ಹೀಗೆ ನನಗೆ ಎರಗುವುದು ಉಚಿತವಲ್ಲ; ಎಷ್ಟಾದರೂ ನಾನು ತಮ್ಮ ಶಿಷ್ಯನು; ತಾವು ನನ್ನ ತಂದೆಯವರಿಗೂ ನನಗೂ ಮಾಡಿದ ಉಪಕಾರವನ್ನು ಎಷ್ಟು ಕೊಂಡಾಡಿದರೂ ತೀರದು; ಆ ಉಪಕಾರವನ್ನು ತೀರಿಸುವುದಂತೂ ಅಸಂಭವವೇ ಸರಿ. ಈಚೆಗೆ ತಮ್ಮ ಮನಸ್ಸಿನಲ್ಲಿ ಕೆಲವು ದ್ರೋಹದ ಯೋಚನೆಗಳು ಹುಟ್ಟಿದವು; ಆದರೆ ಅವು ನನ್ನ ದುರ್ದೈವದ ಫಲವೆಂದು ನಾನು ಎಣಿಸುತ್ತೇನೆ. ಅವುಗಳ ವಿಷಯವಾಗಿ ತಾವು ಎಳ್ಳಷ್ಟಾದರೂ ಪಶ್ಚಾತ್ತಾಪ ಪಡಕೂಡದು. ದೈವಸಂಕಲ್ಪಕ್ಕುಪಾಯವಿಲ್ಲ. ನಾನು ಅವುಗಳನ್ನೆಲ್ಲ ಮರೆತು ಬಿಟ್ಟಿದ್ದೇನೆ. ಈಗ ತಮ್ಮಿಚ್ಛೆಗೆ ಬಂದಂತೆ ನಾನು ನಡೆದುಕೊಳ್ಳಲಿಕ್ಕೆ ಸಿದ್ಧನಾಗಿದ್ದೇನೆ. ತಮ್ಮ ಈ ಶಿಷ್ಯನ ಮೇಲೆ ದಯವಿಟ್ಟು ಅಪ್ಪಣೆಯನ್ನು ದಯಪಾಲಿಸಬೇಕು. ತಮಗೆ ರಾಜಕಾರ್ಯದಲ್ಲಿರುವ ಅಭಿಲಾಷೆಯಿದ್ದರೆ ತಾವು ಇಚ್ಛಿಸುವ ಸುಬೆಗೆ ತಮ್ಮನ್ನು ನಿಯಮಿಸುವೆನು. ತಮಗೆ ರಾಜಸೇವೆಯು ಬೇಸರವಾಗಿದ್ದರೆ, ನನ್ನ ರಾಜ್ಯದೊಳಗೆ ತಮಗೆ ಬೇಕಾದ ಊರಲ್ಲಿ ಸ್ವಸ್ಥವಾಗಿರಬಹುದು. ಅಥವಾ **ಮಕ್ಕಾ** ಯಾತ್ರೆಗೆ ಹೋಗುವ ಲವಲವಿಕೆಯಿದ್ದರೆ ತಮಗೆ ಬೇಕಾಗುವಷ್ಟು ಹಣವನ್ನೂ ತಮ್ಮ ಯೋಗ್ಯತೆಗೆ ತಕ್ಕಷ್ಟು ಕಾವಲುಗಾರರನ್ನೂ ಕೊಡಲಿಕ್ಕೆ ಸಿದ್ಧನಾಗಿದ್ದೇನೆ. ಏತಕ್ಕೂ ತಾವು ಚಿಂತೆ ಮಾಡಕೂಡದು. ತಮ್ಮ ಮನಸ್ಸನ್ನು ನೋಯಿಸಿದರೆ ನನಗೆ ಜಯವಾಗಲಿಕ್ಕಿಲ್ಲ. ಆದ ಕಾರಣ ತಾವು ಸಂಕೋಚಪಡದೆ ತಮ್ಮಿಚ್ಛೆಯನ್ನು ದಯಮಾಡಿ ತಿಳಿಸಬೇಕು."

ಈ ಮಿದುನುಡಿಗಳನ್ನು ಕೇಳಿ **ಬೈರಾಮು**ನ ಕಲ್ಲಿನಂತಹ ಮನಸ್ಸು ಕರಗಿಹೋಯಿತು. **ಅಕ್ಬರ**ನ ಘನವಾದ ಮನಸ್ಸನ್ನೂ, ಕ್ಷಮಾಗುಣವನ್ನೂ ಪ್ರೇಮಪೂರ್ವಕವಾದ ಪೂಜ್ಯಬುದ್ಧಿಯನ್ನೂ ನೋಡಿ **ಬೈರಾಮು**ನು ಬೆರಗಾದನು; ಅವನ ಕುತ್ತಿಗೆಯ ಶಿರಗಳು ಉಬ್ಬಿದುವು; ಕಣ್ಣಿಂದ ಆನಂದ ಬಾಷ್ಪಗಳು ಸುರಿದುವು; ಅವನ ಪ್ರಪಂಚದ ವಿಚಾರಗಳು ಮರೆತು ಹೋದವು; ಕೆಲವು ಹೊತ್ತಿನ ತನಕ ಅವನ ಬಾಯಿಂದ ಶಬ್ದಗಳೇ ಹೊರಡಲಿಲ್ಲ. ಬಳಿಕ ಅವನಲ್ಲಿ ನಿಜವಾದ ವೈರಾಗ್ಯವು ಹುಟ್ಟಿದುದರಿಂದ ಬಾದಷಹನಿಗೆ ಇಂತೆಂದನು—"ತಮ್ಮ ಮೃದುಮಧುತರವಚನಗಳನ್ನು ಕೇಳಿ ನಾನು ಧನ್ಯನಾದೆನು. ನಾನು ಹಿಂದೆ ಮಾಡಿದ ಸಾಹಸಗಳೆಲ್ಲ ಸ್ವಾರ್ಥಪರವಾಗಿದ್ದುದರಿಂದ ತಮಗೂ ತಮ್ಮ ಹಿರಿಯರಿಗೂ ಉಪಕಾರ ಮಾಡಿದೆನೆಂದು ನಾನು ತಿಳಿಯಲಾರೆ. ತಾವು ಉದಾರ ಬುದ್ಧಿಯುವರಾದುದರಿಂದಲೇ ಅವುಗಳನ್ನು ಉಪಕಾರಗಳೆಂದೆಣಿಸುತ್ತೀರಿ. ಈಚೆಗೆ ನಾನು ಬಗೆದ ದ್ರೋಹಗಳು ನನ್ನನ್ನು ಬಹಳವಾಗಿ ನೋಯಿಸುತ್ತಿವೆ. ನಾನು ಪಾಪಿಯು, ಕೃತಘ್ನನು, ಚಂಡಾಲನು. ತಾವು ಈ ದ್ರೋಹಕ್ಕೋಸ್ಕರ ನನ್ನನ್ನು ಕೊಲ್ಲಿಸಿದ್ದರೆ ನನಗೆ ತಕ್ಕ ಶಿಕ್ಷೆಯಾದಂತಾಗುತ್ತಿತ್ತು. ಆದರೆ ತಾವು ಹಾಗೆ ಮಾಡದೆ ಕ್ಷಮಿಸಿರುತ್ತೀರಿ. ಈಗ ನನ್ನಲ್ಲಿ ಹುಟ್ಟಿದ ಪಶ್ಚಾತ್ತಾಪವು ನಾನು ಮಾಡಿದ ಅಪರಾಧಕ್ಕೆ ಸರಿಯಾದ ದಂಡನೆಯಾಗಲಾರದು. ಅನರ್ಹನಾದ ನನಗೆ ತಾವು ಮಾಡಿರುವ ಉಪಕಾರವನ್ನು ನಾನು ತೀರಿಸುವ ಬಗೆ ಯಾವುದು? ಸಾಯುವವರೆಗೆ ಏಕನಿಷ್ಠೆಯಿಂದ ತಮ್ಮ ಸೇವೆಯನ್ನು ಮಾಡಿದರೂ ತಮ್ಮ ಉಪಕಾರವು ತೀರಲಾರದು. ಆ ಉಪಕಾರವನ್ನು ಕೆಲವು ಮಟ್ಟಿಗಾದರೂ ತೀರಿಸುವ ಬಗೆಯೊಂದೇ ಇರುತ್ತದೆಂದು ನನಗೆ ತೋರುತ್ತದೆ. ನಾನು **ಮಕ್ಕಾ**ಕ್ಕೆ ಹೋಗಿ, ಅಲ್ಲಿ ದೇವರನ್ನು ಪರಿಪರಿಯಿಂದ ಸೇವಿಸಿ, ಆತನ ಒಲುಮೆಯನ್ನು ಪಡೆದು, ತಮಗೆ ದೀರ್ಘಾಯುಷ್ಯವನ್ನೂ ಸಂತತಿಸಂಪತ್ತುಗಳನ್ನೂ, ಹಿಡಿದ ಕೆಲಸದಲ್ಲಿ ಜಯವನ್ನೂ ದಯಪಾಲಿಸಬೇಕೆಂದು ಬೇಡಿಕೊಂಡರೆ ಕೃತಾರ್ಥನಾಗುವೆನು. ಆದುದರಿಂದ ಅಪರಾಧಿಯಾದ ನನ್ನ ಮೇಲೆ ದಯವಿಟ್ಟು, ಆ ಪುಣ್ಯಕ್ಷೇತ್ರಕ್ಕೆ ಹೋಗಲಿಕ್ಕೆ ಅಪ್ಪಣೆಯನ್ನು ಕೊಡಬೇಕು."

**ಬೈರಾಮನ** ಈ ಮಾತನ್ನು ಕೇಳಿ **ಬಾದಷಹನಿಗೆ** ಪರಮಸಂತೋಷವಾಯಿತು. ಅವನು **ಬೈರಾಮನು** ಬೇಡಿದಷ್ಟು ದ್ರವ್ಯವನ್ನೂ ಬೆನ್ನುಗಾವಲುಗಾರರನ್ನೂ ಕೊಟ್ಟು ಅವನನ್ನು **ಮಕ್ಕಾ** ಯಾತ್ರೆಗೆ ಕಳುಹಿದನು. ಅವನು ಸುರಕ್ಷಿತವಾಗಿ **ಬಡೋದೆ** ಸಂಸ್ಥಾನದಲ್ಲಿದ್ದ **ಪಾಟಣ** ಎಂಬ ಊರಿಗೆ ಬಂದು ಮುಂದೆ **ಮಕ್ಕಾಕ್ಕೆ** ಹೊರಡುವುದಕ್ಕೋಸ್ಕರ ಸಿದ್ಧಮಾಡಿಕೊಳ್ಳುತ್ತಿರುವಾಗ, ಮಚ್ಚಿವಾರದ ಕಾಳಗದಲ್ಲಿ ತನ್ನ ತಂದೆಯನ್ನು ಕೊಂದುದಕ್ಕಾಗಿ ಮತ್ಸರವನ್ನು ಸಾಧಿಸುತ್ತಿದ್ದ **ಮುಬಾರಕ ಖಾನನೆಂಬ** ಒಬ್ಬ ಲೋಹಾಣಿ ಜಾತಿಯ ಅಫಗಾನನು ಅವನನ್ನು ಕಠಾರಿಯಿಂದಿರಿದು ಕೊಂದು ಬಿಟ್ಟನು.

ಅತ್ತ ಬಾದಷಹನು **ಬೈರಾಮನನ್ನು ಗುಜರಾತಿಗೆ** ಕಳುಹಿ ತಾನು **ಡಿಲ್ಲಿಗೆ** ಮರಳಿ ಬಂದನು (ನವಂಬರ್ ೯, ೧೫೬೦). **ಬೈರಾಮನು** ಸತ್ತ ಸುದ್ದಿಯನ್ನು ಕೇಳಿ ಅವನು ಬಹು ನೊಂದುಕೊಂಡು, ಆ ದುರುಳಕೊಲೆಗಡಕನನ್ನು ಕೊಲ್ಲಿಸಿದುದಲ್ಲದೆ, **ಬೈರಾಮನ** ಹೆಂಡತಿಯನ್ನು ತಾನೇ ಮದುವೆ ಮಾಡಿಕೊಂಡು ಅವನ ಮಗನಾದ **ಅಬ್ದುರ ರಹಿಮ್** ಎಂಬ ೪ ವರ್ಷದ ಹುಡುಗನನ್ನು ತನ್ನ ಅರಮನೆಯಲ್ಲಿಟ್ಟುಕೊಂಡು ಜೋಕೆಮಾಡಿದನು. ಇವನೇ ಮುಂದೆ **ಖಾನಖಾನಾನ** ಎಂಬ ಗೌರವದ ಬಿರುದನ್ನು ಧರಿಸಿ ಪ್ರಸಿದ್ಧಿಗೆ ಬಂದನು (ಪುಟ ೨೭ ಅಡಿ ಟಿಪ್ಪಣಿ ನೋಡು).

---

# ೪ನೆಯ ಅಧ್ಯಾಯ

## ಅಕ್ಬರನ ಆಳಿಕೆ

**ಹುಮಾಯೂನನು** ಸತ್ತಂದಿನಿಂದ ತನ್ನ ಹೊರತು ಉಳಿದವರ ಅಪ್ಪಣೆಯನ್ನು ಮನ್ನಿಸಕೂಡದೆಂದು ಪ್ರಕಟನೆಯನ್ನು ಹೊರಡಿಸುವ ವರೆಗೆ, **ಅಕ್ಬರನು ಬೈರಾಮಖಾನನ** ಅಂಕೆಯಲ್ಲಿದ್ದನು. ಈ ಕಾಲದಲ್ಲಿ ದೊರೆತ ಗೆಲವಿಗೂ ಮಾಡಿದ ಏರ್ಪಾಡುಗಳಿಗೂ **ಬೈರಾಮಖಾನನೇ** ಮುಖ್ಯವಾಗಿ ಕಾರಣನಾಗಿರುತ್ತಾನೆ. ಅವುಗಳಲ್ಲಿ **ಅಕ್ಬರನು** ಸೇರಿದ್ದರೂ, ಎಲ್ಲಾ ದೊಡ್ಡ ಕೆಲಸಗಳು **ಬೈರಾಮಖಾನನ** ಒಪ್ಪಿಗೆಯಿಂದಲೇ ಆಗುತ್ತಿದ್ದುವು.

**ಅಕ್ಬರ**ನು **ರಾಜ್ಯಸೂತ್ರ**ವನ್ನು ತನ್ನ ಕಯ್ಯಲ್ಲಿ ತೆಗೆದುಕೊಂಡಾಗ ಅವನ ರಾಜ್ಯದ ವಿಸ್ತಾರವು ಬಹಳವಿರಲಿಲ್ಲ. **ಪಂಜಾಬ್, ವಾಯುವ್ಯ ಪ್ರಾಂತ, ಅಜಮೀರ**(೨೧), **ಗ್ವಾಲಿಯರ್**(೨೨), **ಲಕ್‌ನೊ**(೨೩), **ಅಯೋಧ್ಯಾಪ್ರಾಂತ** ಇವು ಮಾತ್ರ ಅವನ ಆಳಿಕೆಗೆ ಒಳಗಾಗಿದ್ದುವು. **ಕಾಶಿ**(೨೪), **ಚೂಣಾರ್**(೨೫), **ಬಂಗಾಲ, ಬಿಹಾರ** ಇವು ಸೂರ ಮನೆತನದ ಸರದಾರರ ಕಯ್ಯಲ್ಲಿದ್ದುವು. ದಕ್ಷಿಣ ಹಿಂದೂಸ್ಥಾನದಲ್ಲಿಯೂ ಸಿಂಧು ಪ್ರಾಂತದಲ್ಲಿಯೂ ಮೊಗಲರು ಇನ್ನೂ ಕಾಲುಹಾಕಿರಲಿಲ್ಲ.

ಮೊಗಲರ ಮನೆತನವು ಮೊದಮೊದಲು ತೀರ ನಿರ್ಬಲವಾಗಿತ್ತು. ಅದಕ್ಕೆ ಬೆಂಬಲವೇ ಇರಲಿಲ್ಲ; ಇಲ್ಲಿ **ಗಜನಿ, ಘೋರಿ** ವಂಶದವರು ಆಳುತ್ತಿದ್ದಾಗ ಅವರ ರಾಜ್ಯಗಳು ಈ ದೇಶದ ನೆರೆಯಲ್ಲಿದ್ದುವು. ಆದುದರಿಂದ ಹೊತ್ತು ಬಂದಾಗ ಅವರು ತಮ್ಮ ದೇಶದಿಂದ ದಂಡಾಳುಗಳನ್ನೂ ಹಣವನ್ನೂ ತರಿಸಿಕೊಳ್ಳುತ್ತಿದ್ದರು. **ಗುಲಾಮ** ವಂಶದ ದೊರೆಗಳು ಆಳುತ್ತಿದ್ದಾಗ ಆಗಾಗ ಅವರ ಜನ್ಮ ಭೂಮಿಯಿಂದ ದಂಡಾಳುಗಳು ಬರುತ್ತಾ ಇದ್ದರು. ಮೊಗಲರಿಗೆ ಈ ತರದ ಯಾವ ಆನುಕೂಲ್ಯತೆಯೂ ಇರಲಿಲ್ಲ. **ಕಾಮರಾನ**ನೂ ಅವನ ಮಕ್ಕಳೂ **ಕಾಬೂಲ**ನ್ನು ಹಿಡಿದುಕೊಂಡಿದ್ದ ಕಾರಣ ಆ ಬದಿಯಿಂದ* ಯಾವ ಸಹಾಯವೂ ದೊರೆಯುವಂತೆ ಇರಲಿಲ್ಲ. ಈ ದೇಶದಲ್ಲಿ ಅಂತೂ **ಸೂರ್** ಮನೆತನದವರೂ ಬೇರೆ ಕೆಲವು **ಆಫಗಾನ್** ಸರದಾರರೂ ಮೊಗಲರ ಹಗೆಗಳಾಗಿದ್ದರು. ಆದುದರಿಂದ ಮೊಗಲರ ರಾಜ್ಯವು ನೆಲೆಗೊಳ್ಳಲಿಕ್ಕೆ ಹಿಂದೂ ಜನರ ಸಹಾಯವು ಅವಶ್ಯಕವಾಗಿತ್ತು. ಈ ವಿಷಯವು ಮೊಗಲರ ರಾಜ್ಯಸ್ಥಾಪಕನಾದ **ಬಾಬರ**ನಿಗೆ ಹೊಳೆದಿರಲಿಲ್ಲ. **ಹುಮಾಯೂನ**ನಂತೂ ದೇಶಭ್ರಷ್ಟನಾಗಿ ಓಡಿಹೋದನು. ರಾಜ್ಯಲಕ್ಷ್ಮಿಯ ಅಸ್ಥಿರತ್ವದ ಅನುಭೋಗವು **ಅಕ್ಬರ**ನಿಗೆ ಚಿಕ್ಕಂದಿನಲ್ಲಿಯೇ ಬಂದಿತ್ತು. ಅವನು ಯಾವಾಗಲೂ ರಾಜ್ಯವನ್ನು ಸ್ಥಿರಪಡಿಸಲಿಕ್ಕೆ ಹವಣಿಸುತ್ತಿದ್ದುದರಿಂದ ಈ ವಿಚಾರವು ಅವನಿಗೆ ತೋರಿತು. ಅವನು ಈ ವಿಚಾರಕ್ಕೆ ಸರಿಯಾಗಿ ನಡೆದುದರಿಂದ ಮೊಗಲರ ವಂಶವು ನೆಲೆಗೊಂಡಿತೆನ್ನಲು ಅಡ್ಡಿಯಿಲ್ಲ. ಮುಂದೆ **ಔರಂಗಜೇಬ** ಮುಂತಾದವರು ಅದನ್ನು

---

* ಪಕ್ಕ.

ಮರೆತು ಮನಸ್ಸಿಗೆ ಬಂದಂತೆ ವರ್ತಿಸಿದುದರಿಂದ ಮೊಗಲರ ವಂಶವು ಲಯ ಹೊಂದಿತು.

"ದೂರದ ಬೆಟ್ಟವು ಕಣ್ಣಿಗೆ ನುಣ್ಣಗೆ" ಎಂಬ ಗಾದೆಯ ಮಾತು ವಾಚಕರಿಗೆ ಗೊತ್ತಿರಬಹುದು. "ಪರದುಃಖಶೀತಲತೆ" ಎಂಬ ಮಾತೂ ಈ ಗಾದೆಯ ಕೆಲವು ಅಂಶವನ್ನೇ ಹೇಳುತ್ತದೆ. ಪ್ರತಿಯೊಬ್ಬ ಮನುಷ್ಯನೂ ಎರಡನೆಯವರ ದುಃಖವನ್ನೆಣಿಕೆಗೆ ತಾರದೆ, ಅವರ ಸುಖವನ್ನು ಮಾತ್ರ ಮನದೊಳಾಲೋಚಿಸಿ, ಅವರ ಸ್ಥಿತಿಯನ್ನು ಬಯಸುತ್ತಿರುತ್ತಾನೆ. ಪ್ರತಿಯೊಬ್ಬ ಪ್ರಜೆಯೂ ತನ್ನ ಅರಸನು ಬಹು ಸುಖಿಯೆಂತಲೂ ಪ್ರತಿಯೊಬ್ಬ ಸೇವಕನು ತನ್ನೊಡೆಯನು ಸುಖಿಯೆಂತಲೂ ಎಣಿಸುತ್ತಾನೆ. ಆದರೆ ಇಂತಹ ವಿಚಾರಗಳು ಪ್ರಾಯಶಃ ತಪ್ಪಾಗಿರುತ್ತವೆ. ಹಡೆಯುವ ಹೆಂಗಸು ಪಡುವ ಬೇನೆಯು ಬಂಜೆಗೆ ತಿಳಿಯದಂತೆಯೇ, ದೊಡ್ಡವರ ಕಷ್ಟಗಳು ಉಳಿದವರಿಗೆ ತಿಳಿಯಲಾರವು. ತಾವು ದೊಡ್ಡವರಾದ ಬಳಿಕ ಹೆಚ್ಚು ಸುಖಿಗಳಾಗುವೆವೆಂದು ಸಣ್ಣ ಹುಡುಗರು ತಿಳಿಯುವಂತೆಯೇ ಪ್ರತಿಯೊಬ್ಬ ಮನುಷ್ಯನೂ ತಾನು ದೊಡ್ಡ ಉದ್ಯೋಗಸ್ಥನು ಅಥವಾ ದೊರೆ ಆದರೆ, ಹೆಚ್ಚು ಸುಖಿಯಾಗುವೆನೆಂದು ತಿಳಿಯುತ್ತಾನೆ.

ರಾಜ್ಯಸೂತ್ರವನ್ನು ಕಯ್ಕೊಂಡ ಬಳಿಕ **ಅಕ್ಬರ**ನಿಗೆ ಮನಸ್ಸಿನ ಸ್ವಾಸ್ಥ್ಯವು ದೊರೆಯಲಿಲ್ಲ.* ಏಕೆಂದರೆ **ಅಕ್ಬರ**ನಿಗೆ ವಿರೋಧವಾಗಿ **ಬೈರಾಮಖಾನ**ನಿಗೆ ಸಹಾಯ ಮಾಡುತ್ತಿದ್ದ ರಾಣಿವಾಸದವರ ಪ್ರಾಬಲ್ಯವು ಈಗ ವಿಶೇಷವಾಗಿತ್ತು. ಅವನ ಮುಖ್ಯ ದಾದಿಯಾದ **ಮಾಹಮ್ ಅನ**ಗಳೂ ಅವಳ ಎರಡನೆಯ ಮಗನಾದ **ಆದಮ್‌ಖಾನ**ನೂ ಅವನ ಕೆಟ್ಟ ಗೆಳೆಯರೂ ಮುಂದೆ ನಾಲ್ಕು ವರುಷಗಳ ಕಾಲ ಬಹಳ ತೊಂದರೆ ಕೊಟ್ಟರು. ಆದುದರಿಂದ ಬೇರೆ ಅರಸರನ್ನು ಗೆಲ್ಲುವುದಕ್ಕಿಂತ ತನ್ನ ಸರದಾರರ ರಾಜದ್ರೋಹವನ್ನು ದಂಡಿಸುವ ಕೆಲಸದಲ್ಲೇ ಅವನ ಹೊತ್ತು ಕಳೆದು ಹೋಗುತ್ತಿತ್ತು. ಯುಕ್ತಿಯಿಂದಲೂ ಶೌರ್ಯದಿಂದಲೂ ಪರಚಕ್ರ

---

* ದೊರೆತನಮೆಯ್ತುರಲ್ ಬಯಕೆ ಹಿಂಗಿದುದೆಂಬುದೊಂದೆ ಸಂತಸಂ । ದೊರೆದುರು ರಾಜ್ಯಮಂ ಸಲಹಿಕೊಂಬುದು ಕಷ್ಟಮನುಂಟುಮಾಳ್ಪುದೀ ॥ ಪರಿಯೊಳತಿಶ್ರಮಾಪಹರಮುಂ ಶ್ರಮಕಾರಿಯುಮಲ್ಲವಿರ್ಪಕ । ಟ್ಟಿರಸುತನಂಸ್ವಹಸ್ತಧೃತದಂಡಮಹಾತಪವಾರಣೋಪಮಂ ॥

ಬ. ಶಾಕುಂತಲಾ.

ಗಳನ್ನು ಅಂಕಿತರಾಗಿ ಮಾಡಿಕೊಂಡು ಕಲಿತನದಿಂದಲೂ ಹಂಚಿಕೆ† ಯಿಂದಲೂ ತನ್ನ ಕಯ್ಕೆಳಗಿನವರ ದ್ರೋಹ ಬುದ್ಧಿಯನ್ನು ಹೋಗಲಾಡಿಸಿ ತನ್ನ ರಾಜ್ಯವನ್ನು ಹೆಚ್ಚಿಸಿದ ಬಗೆಯನ್ನು ಈ ಅಧ್ಯಾಯದಲ್ಲಿ ವಿವರಿಸುವೆವು.

ಹಿಂದೆ ಹೇಳಿದಂತೆ **ಬಂಗಾಲ, ಬಿಹಾರ** ಪ್ರಾಂತಗಳು ಸೂರಮನೆ ತನದರಸರ ವಶದಲ್ಲಿದ್ದುವು. ಆ ವಂಶದ ೨ನೆಯ **ಷೇರಷಹ**ನು **ಜೋನ್‌ಪುರ**ದ ಮೇಲೆ ದಂಡೆತ್ತಿ ಬಂದನು. **ಅಕ್ಬರ**ನ ಸರದಾರನಾದ **ಖಾನಜಮಾನ (ಅಲ್ಲಿಕುಲಿಖಾನ)**ನು ಅವನನ್ನು ಸಂಪೂರ್ಣವಾಗಿ ಸೋಲಿಸಿ ಬಿಟ್ಟನು. ಆದರೆ ಈ **ಖಾನ**ನು ಸ್ವತಂತ್ರನಾಗಲಿಕ್ಕೆ ಹವಣಿಸಿ ದುದರಿಂದ **ಅಕ್ಬರ**ನು ತಾನೇ ಹೋಗಿ ಅವನನ್ನು ದಾರಿಗೆ ತರಬೇಕಾ ಯಿತು. **ಖಾನಜಮಾನ**ನು **ಷೇರಷಹ**ನನ್ನು ಸೋಲಿಸಿದಾಗ ತನಗೆ ದೊರೆತ ಸುಲಿಗೆಯನ್ನು **ಬಾದಷಹ**ನಿಗೆ ಕಳುಹಲಿಲ್ಲ. ಆದುದುರಿಂದ **ಅಕ್ಬರ**ನು ಹೊತ್ತುಗಳೆಯದೆ ದಂಡಿನೊಡನೆ **ಖಾನ**ನಿದ್ದೆಡೆಗೆ ಹೋಗಲು, ಅವನು ಹೆದರಿ ತನ್ನ ತಪ್ಪನ್ನೊಪ್ಪಿಕೊಂಡು ತನಗೆ ಸಿಕ್ಕಿದ ಸುಲಿಗೆಯನ್ನು **ಬಾದಷಹ**ನ ಮುಂದೆ ತಂದಿರಿಸಿದನು. ಆಗ **ಬಾದಷಹ**ನು ಆ **ಖಾನ** ನನ್ನು ಕ್ಷಮಿಸಿ, ಅವನಿಗೆ ಆ ಸುಲಿಗೆಯ ಹೆಚ್ಚು ಭಾಗವನ್ನು ಕೊಟ್ಟನು.

ಇದಾದ ಮೇಲೆ ಮೊಗಲ ದಳವಾಯಿಗಳು **ವಿಜಯಗಡ**(೨೬) **ಬರ್ಹಾಣಪುರ**(೨೭)ಗಳನ್ನು ತೆಗೆದುಕೊಂಡರು. ಬಳಿಕ **ಅದಮ್‌ಖಾನ** ನೆಂಬೊಬ್ಬ ದಳವಾಯಿಯು **ಮಾಳವಾ** ಪ್ರಾಂತದ ಅರಸನಾದ **ಬಾಜಬಾ ಹದ್ದೂರ**ನನ್ನು ಸೋಲಿಸಿ ಅವನ ಅತಿಚೆಲುವೆಯರಾದ ಹೆಂಡಂದಿರನ್ನೂ ಅಮೌಲ್ಯವಾದ ಸುಲಿಗೆಯನ್ನೂ ತಾನೇ ಇಟ್ಟುಕೊಂಡು ಕೆಲವು ಆನೆಗಳನ್ನು ಮಾತ್ರ **ಬಾದಷಹ**ನಿಗೆ ಕಳುಹಿದನು. ಈ ಸುದ್ದಿಯನ್ನು ಕೇಳಿ, **ಅಕ್ಬರ**ನು ತಡಮಾಡದೆ ಅಲ್ಲಿಗೆ ಹೋಗಿ ಅವನನ್ನು ಕೆಲಸದಿಂದ ತೆಗೆದು, ಅವನ ಸ್ಥಳದಲ್ಲಿ **ಪೀರ ಮಹಮ್ಮದ**ನನ್ನು ನಿಯಮಿಸಿ ತಿರುಗಿ ಬಂದುದರಿಂದ, **ಅದಮ್‌ಖಾನ**ನು ಬಹಳ ಮುನಿದು **ಬಾಜಬಾಹದ್ದೂರ**ನನ್ನು ಕೂಡಿ ದನು. **ಮಾಳವ**ದ ಹೊಸ ಸುಬೇದಾರನು ಅವರ ಮೇಲೆ ದಂಡೆತ್ತಿ ಬರು ವಾಗ ನರ್ಮದೆಯಲ್ಲಿ ಮುಳುಗಿ ಸತ್ತನು. ಈ ವರ್ತಮಾನವು ಬಂದ

---

† ಉಪಾಯ.

ಕೂಡಲೆ **ಅಕ್ಬರ**ನು ಎರಡನೆಯ ದಂಡನ್ನು ಕಳುಹಿ **ಅದಮ್‌ಖಾನ**ನನ್ನು ಶರಣಾಗತನನ್ನಾಗಿ ಮಾಡಿ ಅವನನ್ನು ಕ್ಷಮಿಸಿ ಕೆಲವು ದಿವಸ ಹೋದ ಬಳಿಕ ಅವನಿಗೆ ದರಬಾರಿನಲ್ಲಿ ಒಂದು ದೊಡ್ಡ ಉದ್ಯೋಗವನ್ನು ಕೊಟ್ಟನು* (೧೫೬೧). ' **ಅದಮ್‌ಖಾನ**ನ ಸ್ಥಳದಲ್ಲಿ ನೇಮಿಸಿದ ಹೊಸ ಸುಬೇದಾರನು **ಬಾಜಬಾಹದ್ದೂರ**ನನ್ನು ಪೂರ್ಣವಾಗಿ ಸೋಲಿಸಿ **ಮಾಳವಾ** ಪ್ರಾಂತವನ್ನು ಶಾಂತಮಾಡಿದನು.

ಈ ಕಾಲಕ್ಕೆ **ಅಕ್ಬರ ಬಾದಷಹ**ನಿಗೊಂದು ದೊಡ್ಡ ಕುತ್ತು ಸಂಭವಿಸಿತು. ಅದರಿಂದ ಅವನು ತನ್ನ ನೈಸರ್ಗಿಕ ಧೈರ್ಯಸಾಮರ್ಥ್ಯ ಪ್ರಸಂಗಾವಧಾನಗಳಿಂದಲೇ ಪಾರಾದನೆಂದು ಹೇಳಬಹುದು. ಹಿಂದೆ ಹೇಳಿದ **ಶಮಸುದ್ದೀನ ಮಹಮ್ಮದ ಅಟಗಖಾನ**ನು **ಕಾಬೂಲಿಂ**ದ ಬಂದು **ಅಕ್ಬರ**ನ ಮುಖ್ಯ ಮಂತ್ರಿಯಾದನು (ನವಂಬರ ೧೫೬೧). ಇವನು ಮಂತ್ರಿಯಾದ್ದರಿಂದ ದರ್ಬಾರಿನಲ್ಲಿ ತನ್ನ ಮತ್ತು ತನ್ನ ಮಗನ ವರ್ಚಸ್ಸು ಕಡಮೆಯಾಗುವುದೆಂದೆಣಿಸಿ **ಮಾಹಮ್ ಅನ**ಗಳು ಅವನ ದ್ವೇಷ ಮಾಡತೊಡಗಿದಳು. ೧೫೬೨ ಮೇ ೧೬ನೆಯ ದಿವಸ **ಶಮಸುದ್ದೀನ**ನು **ಮುನೀಮ್‌ಖಾನ** ಮುಂತಾದ ಅಧಿಕಾರಿಗಳೊಡನೆ ಕೆಲಸ ಮಾಡುತ್ತ ಅರಮನೆಯ ದಿವಾನಖಾನೆಯೊಳಗೆ ಕುಳಿತಿರುವಾಗ **ಅದಮ್‌ಖಾನ**ನು ಕೆಲವು ಕೊಲೆಗಡಕರೊಡನೆ ದಿವಾನಖಾನೆಗೆ ಬಂದನು. ಆಗ **ಶಮಸುದ್ದೀನ**ನು ಸ್ವಾಗತ ಮಾಡಲಿಕ್ಕೆ ಎದ್ದು ನಿಲ್ಲಲು, **ಅದಮ್‌ಖಾನ**ನು ತನ್ನ ಕಠಾರಿಯನ್ನು ಹಿರಿದು ಆವನನ್ನು ಇರಿಯಲಿಕ್ಕೆ ಹೋದನು. ಅಷ್ಟರಲ್ಲಿ ಅವನ ಸಂಗಡಿಗರು **ಶಮಸುದ್ದೀನ**ನನ್ನು ತುಂಡರಿಸಿದರು. ಬಳಿಕ **ಅದಮ್‌ಖಾನ**ನು, **ಅಕ್ಬರ**ನು ಮಲಗಿದ ಕೋಣೆಯ ಕಡೆಗೆ ಹೊರಟನು. ಅವನ ಘೋರಸ್ವರೂಪವನ್ನು ನೋಡಿ ಕಾವಲುಗಾರನು ಬಾಗಿಲನ್ನು ಬಂದು ಮಾಡಿದನು. ಈ ಗದ್ದಲದಿಂದ ಎಚ್ಚತ್ತ **ಅಕ್ಬರ**ನು ನಡೆದ ಸಂಗತಿಯನ್ನು ಕೇಳಿಕೊಂಡು ತನ್ನ ಕತ್ತಿಯನ್ನು ಇಸ

* ದಯೆಯಂ ಸೇವಕರಲ್ಲಿ ಬಂಧುಜನದೊಳ್ ದಾಕ್ಷಿಣ್ಯವಂ ನಾಡೆ ದು । ರ್ನಯರೊಳ್ ಕ್ರೌರ್ಯವ ಪೂಜ್ಯರೊಳ್ ಕ್ಷಮೆಯುಸಾಧುವ್ರಾತದೊಳ್ಪ್ರೀತಿಯಂ ॥ ನಯವಂ ರಾಜರೊಳಾರ್ಯರೊಳ್ಳುಜುತೆಯಂ ಶೂರತ್ವಮಂ ಶತ್ರುಸಂ । ಚಯದೊಳ್ ಸ್ತ್ರೀಜನರಲ್ಲಿ ಧೃಷ್ಟತೆಯನಾಂ ತಿರ್ಪಾತನೇ ಬಲ್ಲವಂ ॥

ಬ. ನೀತಿಶತಕ.

ಕೊಂಡು, ಬೇರೆ ಬಾಗಿಲಿಂದ ಹೊರಗೆ ಬಂದು, **ಅದಮ್‌ಖಾನ**ನನ್ನು ನೋಡಿ, **ಅಟಗ**ನನ್ನು ಏಕೆ ಕೊಂದಿ ಎಂದು ಸಿಟ್ಟಿನಿಂದ ಕೇಳಲು, **ಅದಮ್ಮ**ನು ಉದ್ದುರುಟತನದಿಂದ ಉತ್ತರ ಕೊಟ್ಟು **ಅಕ್ಬರ**ನ ಕಯ್ಯನ್ನು ಹಿಡಿದನು. **ಅಕ್ಬರ**ನು ತನ್ನ ಕಯ್ಯನ್ನು ಕೊಸರಿಕೊಂಡು **ಅದಮ್ಮ**ನನ್ನು ನಿರಾಯುಧ ವಾಗಿ ಮಾಡಲಿಕ್ಕೆ ಯತ್ನಿಸಲು, **ಅದಮ್ಮ**ನು **ಅಕ್ಬರ**ನ ಕತ್ತಿಯನ್ನು ಸೆಳೆದನು. ಆಗ **ಅಕ್ಬರ**ನು ಸಿಟ್ಟು ಬೆಂಕಿಯಾಗಿ **ಅದಮ್ಮ**ನ ಮೋರೆಯ ಮೇಲೆ ಜೋರಿನಿಂದ ಗುದ್ದಿದನು. ಕೂಡಲೆ **ಅದಮ್ಮ**ನು ಮೆಯ್ಮರೆದು ನೆಲಕ್ಕೆ ಬಿದ್ದನು. ಬಳಿಕ **ಬಾದಹಷ**ನು **ಅದಮ್ಮ**ನನ್ನು ಹಗ್ಗದಿಂದ ಬಿಗಿದು, ಅರಮನೆಯ ಗೋಡೆಯಿಂದ ಕೆಳಗೆ ಒಗೆಯ ಬೇಕೆಂದು ಅಪ್ಪಣೆ ಕೊಟ್ಟನು. **ಮಾಹಮ್ ಅನ**ಗಳು ರೇಗಿಸಬಹುದೆಂದು ಹೆದರಿ ಆಳುಗಳು ಅವನನ್ನು ಮೆಲ್ಲಗೆ ಕೆಳಗೆ ಬಿಟ್ಟರು. ಅದನ್ನು ನೋಡಿ **ಅಕ್ಬರ**ನು ಸಿಟ್ಟಾಗಿ ಅವನನ್ನು ಮೇಲಕ್ಕೆ ತಂದು ಮತ್ತೆ ಜೋರಿನಿಂದ ಕೆಳಗೆ ಒಗೆಯ ಬೇಕೆಂದು ಕಟ್ಟಪ್ಪಣೆಯನ್ನಿತ್ತನು. ಅವರು ಹಾಗೇ ಮಾಡಲು, **ಅದಮ್ಮ**ನ ತಲೆಯು ಸೀಳಿ ಎರಡು ಹೋಳಾಯಿತು. ಇಲ್ಲಿಗೆ **ಅದಮ್ಮ**ನ ಹಾವಳಿಯು ಮುಗಿದಂತಾಯಿತು. ಕೂಡಲೆ **ಅಕ್ಬರ**ನು ಅಸ್ವಸ್ಥಳಾಗಿ ಮಲಗಿದ್ದ **ಮಾಹಮ್ ಅನ**ಗಳ ಕೋಣೆಗೆ ಹೋಗಿ ನಡೆದ ಸಂಗತಿಯನ್ನೆಲ್ಲ ತಿಳಿಸಿದನು. ಆ ಮುದುಕಿಯು "ಮಹಾರಾಜರು ಮಾಡಿದ್ದು ಸರಿಯಾಯಿತು" ಎಂದು ಬಾಯಿಂದ ನುಡಿದರೂ ಮಗನ ಮರಣದ ಅನಾಹುತವನ್ನು ಕೇಳಿ ಎದೆ ಒಡಕೊಂಡು ಅವನು ಸತ್ತ ೪೦ನೆಯ ದಿವಸ ಪ್ರಾಣಬಿಟ್ಟಳು. ಅವರಿಬ್ಬರ ಸುಂದರವಾದ ಗೋರಿಗಳನ್ನು **ಡಿಲ್ಲಿ**ಯಲ್ಲಿ **ಕುತುಬ್‌ಮಿನಾರ**ದ ಹತ್ತರ ಈಗಲೂ ನೋಡಬಹುದು.

ಬಳಿಕ **ಅಕ್ಬರ**ನು **ಅದಮ್‌ಖಾನ**ನ ಒಳಸಂಚಿನಲ್ಲಿ ಸೇರಿದ್ದರಿಂದ ಹೆದರಿ ಓಡಿ ಹೋಗಿದ್ದ **ಮುನಿಮ್‌ಖಾನ** ಮುಂತಾದವರನ್ನು ಹಿಡ ತರಿಸಿ ಅವರನ್ನು ಕ್ಷಮಿಸಿದನು. **ಮುನಿಮ್‌ಖಾನ**ನು ಮುಂದೆ **ಖಾನ ಖಾನಾನ**ನಾದನು. ಈ ಕಾಲದಿಂದ **ಅಕ್ಬರ**ನು ರಾಜ್ಯದಾಡಳಿತಕ್ಕೆ ಹೆಚ್ಚು ಮನಸ್ಸು ಕೊಟ್ಟು ಬಹುಶ್ರಮದಿಂದ ರಾಜ್ಯಪರಿಪಾಲನವನ್ನು ಮಾಡ ತೊಡಗಿದನೆಂದು **ಅಬುಲ್ಫಾಜಲ್ಲ**ನು ಬರೆಯುತ್ತಾನೆ.

ಈ ಸಂಗತಿಯನ್ನು ಕುರಿತು ನೀತಿನಿಪುಣರೂ ರಾಜತಂತ್ರವಿಶಾರದರೂ **ಅಕ್ಬರ**ನಲ್ಲಿ ದೋಷವನ್ನು ಕಂಡು ಹಿಡಿಯಲಾರರು. ಏಕೆಂದರೆ— ಹೆಚ್ಚು ಜನರಿಗೆ ಹೆಚ್ಚು ಒಳ್ಳೆಯದಾಗುವಂತಹ ಕೆಲಸವನ್ನು ಮಾಡುವುದೇ ನೀತಿಯ ಮೂಲತತ್ವವು. ಈ ತತ್ವಕ್ಕೆ ವಿರುದ್ಧವಾದ ಕೃತ್ಯಗಳೇ ಅನೀತಿ. ಕಳ್ಳರನ್ನೂ, ಕೊಲೆಗಡಕರನ್ನೂ, ಮೋಸಗಾರರನ್ನೂ ಅರಸರು ದಂಡಿಸದಿದ್ದರೆ, ಅವರಿಗೆ ಆ ಕಾಲಕ್ಕೆ ಒಳ್ಳೆಯದಾದರೂ ಸಾವಿರಾರು ಜನರಿಗೆ ದಿಟವಾಗಿ ಕೇಡು ಒದಗುವುದು. ಒಬ್ಬ ತಪ್ಪುಗಾರನಿಗೆ ಶಿಕ್ಷೆಯಾಗದಿದ್ದರೆ ಅವನೂ, ಅವನನ್ನು ಅನುಕರಿಸುವ ಬೇರೆ ಕೆಲಜನರೂ, ನಿರಪರಾಧಿಗಳಾದ ಎಷ್ಟೋ ಪ್ರಜೆಗಳನ್ನು ಹಿಂಸೆಪಡಿಸುವರು. ಈ ದುಷ್ಕೃತ್ಯಗಳಿಗೆಲ್ಲ ಅರಸನೇ ಗುರಿಯಾಗುವನು. ಒಬ್ಬ ಕೊಲೆಗಡಕನನ್ನು ಕೊಲ್ಲಿಸಿದರೆ, ನಾಲ್ಕಾರು ಜನ ನಿರಪರಾಧಿಗಳ ಕೊಲೆಯನ್ನು ತಪ್ಪಿಸಿದಂತಾಗುವದು. ಒಂದು ಹುಲಿಯನ್ನು ಕೊಂದರೆ, ಅದರ ನಖದ ಹೊಡೆತದಿಂದ ಸಾಯುವ ಒಬ್ಬಿಬ್ಬರ ಪ್ರಾಣದಾನವನ್ನು ಮಾಡಿದಂತಾಗುವದು. ಇಂಗ್ಲಂಡಿನ ಅರಸನಾದ **೨ನೆಯ ವಿಲಿಯಮ್ಮನು** ತನ್ನ ಮಗನನ್ನು ಸೆರೆಯಲ್ಲಿಡಲಿಲ್ಲವೇನು? **ಚಂಪಕಾಪುರ**ದರಸನಾದ **ಹಂಸಧ್ವಜ**ನು ತನ್ನ ಮಗನಾದ **ಕಲಿಸುಧನ್ವ**ನನ್ನು ಕಾದೆಣ್ಣೆಯ ಕಡಾಯಿಯಲ್ಲಿ ಹಾಕಿಸಲಿಲ್ಲವೇನು? **ಅಕ್ಬರ**ನಂತೂ **ಅದಮ್ಮ**ನನ್ನು ಎರಡು ಸಾರಿ ಕ್ಷಮಿಸಿ ಮೂರನೆಯ ಸಲ ಘೋರವಾದ ಅಪರಾಧಕ್ಕಾಗಿ ಕೊಲ್ಲಿಸಿದನು. ಇದರಲ್ಲಿ ಯಾವ ಬಗೆಯಿಂದಲೂ ಅವನು ದೋಷಕ್ಕೆ ಗುರಿಯಾಗಲಾರನು. **ಮುನೀಮ್‌ಖಾನ** ಮುಂತಾದ ಸಂಚುಗಾರರನ್ನು ಕ್ಷಮಿಸಿದ್ದರಿಂದ **ಅಕ್ಬರ**ನ ದೂರದರ್ಶಿಕತ್ವವೂ ಕ್ಷಮಾಗುಣವೂ ಬಯಲಿಗೆ ಬಂದವು.

ಅರಮನೆಯ ಒಳಸಂಚುಗಳೂ ತನ್ನ ಆಪ್ತರೆಂದು ತಿಳಿದವರ ದ್ರೋಹವೂ ಈ ಕಾಲಕ್ಕೆ **ಅಕ್ಬರ**ನ ಮನಸ್ಸಿನಲ್ಲಿ ವಿವೇಕವನ್ನು ಹುಟ್ಟಿಸಿದವು. ಇನ್ನು ಮುಂದೆ ಯಾರನ್ನೂ ಪೂರ್ಣವಾಗಿ ನಂಬಕೂಡದೆಂದು ಅವನು ದೃಢವಾಗಿ ನಿಶ್ಚಯಿಸಿದನು. ಆತ್ಮಬುದ್ಧಿಯೇ ಸುಖಕರವೆಂದು ಅವನು ಮನಗಂಡನು. ರಾಜಕಾರ್ಯದಲ್ಲಿ ತನ್ನ ಸಂಗಡಿಗರೊಡನೆ ಆಲೋಚಿಸುತ್ತಿದ್ದರೂ ತನ್ನ ಮನಸ್ಸಿಗೆ ಯೋಗ್ಯ ತೋರಿದುದನ್ನೇ ಅವನು ಮಾಡುತ್ತಿದ್ದ

ನೆಂದು ಒಬ್ಬ ಜೆಸುಯಿಟ ಪಾದರಿಯು ಬರೆಯುತ್ತಾನೆ. ತನ್ನ ತಾಯಿಯಲ್ಲಿ ಪೂರ್ಣವಾದ ಅಂತಃಕರಣ ಭಕ್ತಿಯುಳ್ಳವನಾದರೂ ರಾಜಕಾರ್ಯದಲ್ಲಿ ಆಕೆಯ ಮಾತನ್ನು ನಡೆಯಗೊಡುತ್ತಿದ್ದಿಲ್ಲ.

ಈ ಕಾಲದಲ್ಲಿ **ಅಕ್ಬರ**ನ ರಾಜ್ಯವು **ಪಂಜಾಬಿ**ನಲ್ಲಿ ನೆಲೆಗೊಂಡಿರಲಿಲ್ಲ. ಈಗಿನ **ರಾವಲಪಿಂಡಿ** (೨೮) ಜಿಲ್ಲೆಯ ಈಶಾನ್ಯ ಭಾಗದಲ್ಲಿದ್ದ **ಗಕ್ಕರು** ಎಂಬ ಜನರು **ಮೊಗಲ**ರೊಡೆತನಕ್ಕೆ ಒಪ್ಪಿಕೊಂಡಿರಲಿಲ್ಲ. **ಅಕ್ಬರ**ನು ಕಳುಹಿದ ಸುಭೇದಾರನನ್ನು ಅವರು ಮನ್ನಿಸಲಿಲ್ಲ; ಇಷ್ಟೇ ಅಲ್ಲ; ಅವರು ಒಟ್ಟುಗೂಡಿ ನೆರೆಹೊರೆಯ ಸೀಮೆಗಳನ್ನು ಸುಲಿಯತೊಡಗಿದರು. ಆದುದರಿಂದ **ಅಕ್ಬರ**ನು ತನ್ನ ದಂಡನ್ನು ಕಳುಹಿ ಅವರನ್ನು ಸೋಲಿಸಿ ಅವರ ಮುಖ್ಯಸ್ಥನನ್ನು ಸೆರೆಯಲ್ಲಿರಿಸಿದನು.

ಈ ಸಮಯದಲ್ಲಿ **ಕಾಬೂಲ**ಲ್ಲಿ ದಂಗೆ ಎದ್ದಿತು. **ಹುಮಾಯೂನ**ನು ಸಾಯುವಾಗ ಅವನ ಕಿರಿಯ ಮಗನಾದ **ಮಿರ್ಜಾ ಹಕೀಮ**ನು ಸಣ್ಣವನಾಗಿದ್ದುದರಿಂದ ಅವನ ತಾಯಿಯು ರಾಜ್ಯಭಾರ ನಡಿಸ ತೊಡಗಿದಳು. ಆ ಕಾಲದಲ್ಲಿ ದರಬಾರಿನಲ್ಲಿ ಎಷ್ಟೋ ಒಳಸಂಚುಗಳು ನಡೆಯುತ್ತಿದ್ದುವು. ಅವುಗಳನ್ನು ಅಡಗಿಸಿ, ಶಾಂತತೆಯನ್ನುಂಟುಮಾಡುವುದಕ್ಕೋಸ್ಕರ **ಅಕ್ಬರ**ನು **ಮುನೀಮ್ ಖಾನ**ನನ್ನು ಅಲ್ಲಿಗೆ ಕಳುಹಿದನು. ಆದರೆ ಅವನು ಸೋತು ತಿರುಗಿ **ಡಿಲ್ಲಿ**ಗೆ ಬಂದನು. ಅಷ್ಟರಲ್ಲೇ ಮೊದಲು **ಸರಹಿಂದಿ**ನಲ್ಲಿ ಸುಭೇದಾರನಾಗಿದ್ದಾಗ ಜನರಿಗೆ ಪ್ರಿಯನಾದ **ಅಬುಲ್ ಮಾಲಿ**ಯೆಂಬವನು ಅಲ್ಲಿಗೆ ಬಂದನು. ರಾಣಿಯು ಅವನಲ್ಲಿ ನಂಬಿಕೆಯನ್ನಿಟ್ಟು, ತನ್ನ ಮಗಳನ್ನು ಅವನಿಗೆ ಮದುವೆ ಮಾಡಿಕೊಟ್ಟು ಎಲ್ಲ ಅಧಿಕಾರವನ್ನು ಅವನಿಗೆ ಒಪ್ಪಿಸಿದಳು. ಮುಂದೆ ಈ ರಾಜದ್ರೋಹಿಯು ಕೆಲವು ಸರದಾರರೊಡನೆ ಒಳಸಂಚುಮಾಡಿ ರಾಣಿಯನ್ನು ಕೊಲ್ಲಿಸಿ, ತಾನೇ ಸ್ವತಂತ್ರನಾಗಿ ಆಳತೊಡಗಿದನು. ಈ ಸುದ್ದಿಯನ್ನು ಕೇಳಿ, **ಮಿರ್ಜಾಸುಲೇಮಾನ**ನು ದಂಡೆತ್ತಿ ಬಂದು **ಅಬುಲ್ ಮಾಲಿ**ಯನ್ನು ಸೋಲಿಸಿ ಅವನನ್ನು ಕೊಲ್ಲಿಸಿ ಬಿಟ್ಟನು. ಬಳಿಕ ಅವನು **ಮಿರ್ಜಾ ಹಕೀಮ**ನಿಗೆ ಬಹಳ ತೊಂದರೆ ಕೊಟ್ಟುದರಿಂದ ಅವನು **ಪಂಜಾಬಿ**ಗೆ ಓಡಿಬಂದು, ಅಲ್ಲಿ ಒಂದು ರಾಜ್ಯವನ್ನು ಸ್ಥಾಪಿಸಲು ಎತ್ತುಗಡೆ ಮಾಡತೊಡಗಿದನು.

೧೫೬೩ರಲ್ಲಿ **ಅಕ್ಬರನು** ಮಥುರೆಯಲ್ಲಿ ಬೇಟೆಯಾಡಿ ೫ ಹೆಬ್ಬುಲಿಗಳನ್ನು ಹೊಡೆದನು. ಅಲ್ಲಿರುವಾಗ ಶ್ರೀಕೃಷ್ಣನ ವೃಂದಾವನಕ್ಕೆ ಬರುತ್ತಿದ್ದ ಯಾತ್ರಿಕರು ಸರಕಾರಕ್ಕೆ ತೆರಿಗೆಯನ್ನು ಕೊಡಬೇಕಾಗುತ್ತದೆಂಬ ಸಂಗತಿಯೂ ಅವನಿಗೆ ತಿಳಿಯಿತು. ಪ್ರಜರು ತಂತಮ್ಮ ಧರ್ಮದಂತೆ ದೇವರನ್ನು ಭಜಿಸಲಿಕ್ಕೆ ಸ್ವತಂತ್ರರಾಗಿರತಕ್ಕದ್ದೆಂದೆಣಿಸಿ, **ಬಾದಷಹನು** ಆ ತೆರಿಗೆಯನ್ನು ತೆಗೆದು ಹಾಕಿದನು. ಇದರಿಂದ ಸರಕಾರದ ಆದಾಯವು ಲಕ್ಷಗಟ್ಟಲೆ ಕಡಿಮೆಯಾಯಿತು! ಬಳಿಕ **ಅಕ್ಬರನು** ಮಥುರೆಯಿಂದ ಆಗ್ರ್ರಾದ ವರೆಗೆ ೩೬ ಮೈಲು ಕಾಲಿಂದ ನಡೆಯುತ್ತ ಹೋದನು. ಅವನ ಸಂಗಡ ಎಷ್ಟೋ ಜನರಿದ್ದು, ಅವರೊಳಗೆ ೩ ಮಂದ ಮಾತ್ರ ಅಲ್ಲಿಯ ವರೆಗೆ ನಡೆದರು.

೧೫೬೪ರ ಆರಂಭದಲ್ಲಿ **ಅಕ್ಬರನಿಗೆ** ಮತ್ತೊಂದು ಕುತ್ತು ಸಂಭವಿಸಿತು. ಈ ಕಾಲಕ್ಕೆ ಅವನು ತನ್ನ ಸರದಾರರ ಹೆಂಡಂದಿರನ್ನು ಒತ್ತಾಯದಿಂದ ಮದುವೆ ಮಾಡಿಕೊಳ್ಳಲಿಕ್ಕೆ ಯತ್ನಿಸುತ್ತಿದ್ದನಂತೆ. ಒಂದು ದಿನ ಅವನು ಅರಮನೆಗೆ ತಿರುಗಿ ಬರುವಾಗ ದಾರಿಯಲ್ಲಿ ಹೊಂಚು ಹಾಕಿಕೊಂಡು ಕುಳಿತಿದ್ದ ಒಬ್ಬ ಗೃಹಸ್ಥನು ಅವನ ಮೇಲೆ ಬಾಣ ಎಸೆದನು. ಅದು ಅವನ ಭುಜದಲ್ಲಿ ನೆಟ್ಟಿತು. ತಾನು ಮಾಡಿದ ಅಪರಾಧಕ್ಕೆ ದೇವರು ತನ್ನನ್ನು ದಂಡಿಸಿದನೆಂದೆಣಿಸಿ, ಅಪರಾಧದ ವಿಚಾರಣೆಯನ್ನು ಮಾಡದೆ, ಮುಂದೆ ಇಂತಹ ಸ್ತ್ರೀಲಂಪಟದಲ್ಲಿ ಸೇರಬಾರದೆಂದು ನಿಶ್ಚಯಿಸಿದನಂತೆ. ಮುಂದೆ ತುಸು ದಿವಸದಲ್ಲೇ ಅವನು ಹಿಂದು ಜನರ ಮೇಲೆ ಕಟ್ಟಿದ **ಜೀಜಿಯಾ** ಎಂಬ ತಲೆಪಟ್ಟಿಯನ್ನು ತೆಗೆದುಹಾಕಿದನು. ಈ ಪಟ್ಟಿಯನ್ನು ಮುಸಲ್ಮಾನರು ೭೧೨ರೊಳಗೆ **ಸಿಂಧ** ಪ್ರಾಂತದಲ್ಲಿಯೂ ೧೪ನೆಯ ಶತಮಾನದೊಳಗೆ **ದಿಲ್ಲಿ** ಪ್ರಾಂತದಲ್ಲಿಯೂ ಎತ್ತಲಾರಂಭಿಸಿದ್ದರು. ಅನ್ಯಾಯದ ಪಟ್ಟಿಯೆಂದೆಣಿಸಿ **ಅಕ್ಬರನು** ಇದನ್ನು ಕಿತ್ತಿ ಹಾಕಿದನು. ಮುಂದೆ ಧರ್ಮಮೂಢನಾದ **ಔರಂಗಜೀಬನು** ಇದನ್ನು ಮತ್ತೆ ಕೂಡ್ರಿಸಿದನು (೧೬೭೯).

ಅದೇ ವರುಷ **ಅಕ್ಬರನ** ದಳವಾಯಿಯಾದ **ಅಸಫಖಾನನು ಆಡೆಲ್** ಮನೆತನದ ಅರಸನ ವಶದಲ್ಲಿದ್ದ **ಚಾನಾರ್** ಕೋಟೆಯನ್ನು ಹಿಡಿದುಕೊಂಡು, **ಚೌರಗಡದ** (೨೯) ರಾಣಿಯಾದ **ದುರ್ಗಾವತಿಯನ್ನು** ಸೋಲಿಸಿ, ನರ

**ಸಿಂಗಪುರ**ವನ್ನೂ, **ಹುಸೆಂಗಾಬಾದ್** (೩೦) ಜಿಲ್ಲೆಯನ್ನೂ **ಡಿಲ್ಲಿ**ಯ ಸಾಮ್ರಾಜ್ಯಕ್ಕೆ ಸೇರಿಸಿದನು. ಬಳಿಕ ಬೇಸಗೆಯಲ್ಲಿ **ಅಕ್ಬರ ಬಾದಷಹ**ನು ಆಗ ಹೆಸರಾಗಿದ್ದ **ನರವಾರ**ದ (೩೧) ನೆರೆಯಲ್ಲಿ ಬೇಟೆಯಾಡಿ* **ಮಾಂಡವ**ಕ್ಕೆ ಹೋದನು. ಅಲ್ಲಿಯ ಸುಬೇದಾರನು ದ್ರೋಹಬಗೆದು ಜಗಳಕ್ಕೆ ನಿಂತುದರಿಂದ ಅವನನ್ನು ಸೋಲಿಸಿ, ಅವನ ಸ್ಥಳದಲ್ಲಿ ಮತ್ತೊಬ್ಬ ಸುಬೇದಾರನನ್ನು ನಿಯಮಿಸಿದನು.

**ಅಕ್ಬರ**ನು **ಮಾಂಡವ**ದಲ್ಲಿದ್ದಾಗ **ಖಾನ್‌ದೇಶ**ದ ಮಹಮ್ಮದೀಯ ಅರಸನಾದ **ಮುಬಾರಕ್‌ಷಹ**ನು ತನ್ನ ರಾಯಭಾರಿಗಳನ್ನು ಅವನ ಬಳಿಗೆ ಕಳುಹಿದನು. ಆಗ **ಬಾದಷಹ**ನು ಅವರಿಗೆ ತಕ್ಕ ಆತಿಥ್ಯವನ್ನು ಮಾಡಿ, **ಖಾನ್‌ದೇಶ**ದ ಅರಸನ ಹೆಣ್ಣು ಮಕ್ಕಳಲ್ಲಿ ತನಗೆ ಸರಿಯಾದವಳೊಬ್ಬಳನ್ನು ತನ್ನೆಡೆಗೆ ಕಳುಹಿಕೊಡಬೇಕೆಂದು ಪತ್ರಬರೆದು ಅವರನ್ನು ಕಳುಹಿದನು. ಅದರಂತೆಯೇ ಅವನು ಊಳಿಗದವರೊಡನೆ ತನ್ನೊಬ್ಬ ಮಗಳನ್ನು ಸಂತೋಷದಿಂದ **ಅಕ್ಬರ**ನೆಡೆಗೆ ಕಳುಹಿದನು. ಬಳಿಕ ಅವನು ಆಕೆಯನ್ನು ಮದುವೆಯಾಗಿ ಹೊಸ ಹೆಂಡತಿಯೊಡನೆ **ಆಗ್ರಾ**ಕ್ಕೆ ಮರಳಿ ಬಂದನು.

ಮರಳು ಕಲ್ಲಿನಿಂದ ಕಟ್ಟಿದ **ಆಗ್ರಾ** ಪಟ್ಟಣದ ಸುಂದರವಾದ ಕೋಟೆಯನ್ನು ಎಷ್ಟೋ ಮಂದಿ ನೋಡಿರಬಹುದು. **ಅಕ್ಬರ**ನು ಪಟ್ಟವೇರಿದಾಗ ಅಲ್ಲಿ ಒಂದು ಮುರುಕು ಕೋಟೆ ಮಾತ್ರವಿತ್ತು. ೧೫೬೫ರಲ್ಲಿ **ಬಾದಷಹ**ನು **ಕಾಶಿಮ್‌ಖಾನ**ನೆಂಬ ಸರದಾರನಿಗೆ **ಆಗ್ರಾ** ಪಟ್ಟಣದ ಕೋಟೆಯನ್ನು ಕಟ್ಟಿಸಲಿಕ್ಕೆ ಅಪ್ಪಣೆಯನ್ನು ಮಾಡಿದನು. ಆ ಕೆಲಸವು ಎಂಟು ವರುಷಗಳ ತನಕ ನಡೆಯಿತು. ಅದಕ್ಕೆ ಒಟ್ಟು ೩೮,೦೦,೦೦೦ ರೂಪಾಯಿಗಳ ವೆಚ್ಚವು ತಗಲಿತು.

**ಮಾಂಡವ**ದ ಸುಬೇದಾರನನ್ನು **ಅಕ್ಬರ**ನು ದಂಡಿಸಿದನೆಂದು ಹಿಂದೆ ಹೇಳಿದ್ದೇವಷ್ಟೆ. ಮುಂದೆ ಕೆಲವು ದಿನಗಳ ತರುವಾಯ ಅವನು ಉಳಿದ

---

* ಚಲಮಾದ ಲಕ್ಷ್ಯದೊಳಗಂ |
ಫಲಿಪುದು ಧ್ವನಿಗಳ ಬಾಣಮಿಂ ಬೇಂಟೆಯುಮಂ |
ನೆಲದೊಳ್ ವ್ಯಸನಮೆನುತ್ತಂ |
ಪಳಿವುದು ಪುಸಿಯಿಂತು ಬಿನದಮೇತಜ್ಞನಕ್ಕುಂ ||

ಬ. ಶಾಕುಂತಲ.

ಕೆಲವು ದ್ರೋಹಿಗಳಾದ ಸರದಾರರನ್ನು ಕೂಡಿಕೊಂಡು **ಜಾನ್‌ಪುರದಲ್ಲಿ** (೩೨) ಬಂಡಾಯವೆಬ್ಬಿಸಿದನು. ಬಂಡುಗಾರರು ಒಟ್ಟುಗೂಡಿ **ಲಕ್‌ನೊ** ಪಟ್ಟಣದ ಹಾದಿಯನ್ನು ಹಿಡಿದರೆಂಬ ಸುದ್ದಿಯು ಬಂತು. ಕೂಡಲೆ **ಬಾದಷಹನು** ತನ್ನ ದಂಡಿನೊಡನೆ ಎಡೆಬಿಡದೆ ೨೪ ತಾಸು† ದಾರಿ ನಡೆದು ಆವೂರಿಗೆ ಬಂದುದನ್ನು ನೋಡಿ ಬಂಡುಗಾರರು ಹೆದರಿ **ಚಪ್ರಾಕ್ಕೆ** (೩೩) ಹೋಗಿ ಅಲ್ಲಿ ಪಾಳೆಯ ಹಾಕಿಕೊಂಡು ನಿಂತರು.

ಅಷ್ಟರಲ್ಲಿ **ಅಕ್ಬರನ** ವಿವೇಕಿಯಾದ ಒಬ್ಬ ದಳವಾಯಿಯು ಅಲ್ಲಿಗೆ ಬಂದು, ಬಂಡುಗಾರರೊಡನೆ ಸ್ನೇಹದ ಮಾತುಗಳನ್ನು ನಡಿಸಿ, ಒಡಂಬಡಿಕೆಯ ಷರತ್ತುಗಳನ್ನು ಗೊತ್ತುಮಾಡಿ, ಒಪ್ಪಿಗೆಯನ್ನು ಕುರಿತು **ಬಾದಷಹನಿಗೆ** ಬರೆದನು. ಉತ್ತರವು ಬರುವುದಕ್ಕಿಂತ ಮೊದಲು **ರಜಪೂತಸ್ಥಾನದಿಂದ** ಬಂದ ಮತ್ತೊಬ್ಬ ಉಲುಕೋಚಿ* ಯಾದ ದಳವಾಯಿಯು ಹಗೆಗಳನ್ನು ಕೆಣಕಿ ಅವರಿಂದ ಅಪಜಯಪಟ್ಟನು. ಈ ಸುದ್ದಿಯನ್ನು ಕೇಳಿ **ಅಕ್ಬರನು** ತನ್ನ ಅವಿಚಾರವನ್ನು ಕ್ಷಮಿಸಿ ಮೊದಲು ಗೊತ್ತಾದ ಮಾತುಗಳಿಗೆ ಒಪ್ಪಿಗೆಯನ್ನು ಕೊಟ್ಟನು. ಆದರೆ ಗೆಲವಿನಿಂದ ಕೊಬ್ಬೇರಿದ ಬಂಡುಗಾರರು ಜಗಳಕ್ಕೆ ನುಗ್ಗಿದುದರಿಂದ **ಅಕ್ಬರನು** ಯುಕ್ತಿಯಿಂದ ಅವರನ್ನು ಮಾರ್ಗಕ್ಕೆ ತಂದನು.§

೧೫೬೭ರಲ್ಲಿ **ಅಕ್ಬರ ಬಾದಷಹನು** ಆಟನೋಟಗಳಲ್ಲಿ ಕಾಲ ಕಳೆಯುತ್ತಿದ್ದಾಗ ಹಿಂದೆ ಹೇಳಿದಂತೆ **ಹಕೀಮನು ಪಂಜಾಬಿಗೆ** ದಂಡೆತ್ತಿ ಬಂದ ಸುದ್ದಿಯು ಬಂತು. ಕೂಡಲೆ ಅವನು **ಆಗ್ರಾ** ಪಟ್ಟಣವನ್ನು ಬಿಟ್ಟು ಅತಿವೇಗದಿಂದ **ಸರಹಿಂದಿಗೆ** ಹೋಗಿ, **ಹಕೀಮನನ್ನು** ಅದರ ನೆರೆಯಲ್ಲಿ ಸೋಲಿಸಿ, ಅವನನ್ನು ಬೆನ್ನಟ್ಟಲಿಕ್ಕೆ ತನ್ನ ದಳವಾಯಿಯನ್ನು ಕಳುಹಿ, ತಾನು **ಆಗ್ರಾಕ್ಕೆ** ಮರಳಿ ಬಂದನು.

---

† ಗಂಟೆ  * ಜಗಳ ಗಂಟಿಗ, ಕಿಡಿಗೇಡಿ

§ ಅರೆಯುಂ ಸೀಳುವಡಾನೆ ಮೆಟ್ಟಲಹುದೇ ಚಾಣಗಳಿಂದಲ್ಲದೆ ।
ಕಿರಿದಾಗಿರ್ದೊಡದೇ ಸುಪಾಯುಷರನೋರ್ವಂ ಕೋಟಿಗೀಡಕ್ಕು ಹೆ ॥
ವ್ಮರನಿರ್ದೆಸದಱಿಂದಲೆತ್ತಬಹುದೇ ಬಲ್ಭಾರವಂ ಸನ್ನೆ ಸಾ ।
ವಿರಕಾಲಾಳಿನ ಸತ್ವವೈ ಹರಹರಾ ಶ್ರೀಚೆನ್ನ ಸೋಮೇಶ್ವರ ॥

ಸೋಮೇಶ್ವರ ಶತಕ.

ಹಗೆಗಳಿಗಿಂತ ಸರದಾರರು **ಅಕ್ಬರ**ನಿಗೆ ಹೆಚ್ಚು ತೊಂದರೆ ಕೊಟ್ಟರೆಂದು ಹಿಂದೆ ಹೇಳಿರುತ್ತೇವಷ್ಟೆ. **ಅಕ್ಬರ**ನು **ಪಂಜಾಬಿ**ಗೆ ಹೋದ ಸಂಧಿಯನ್ನು ಸಾಧಿಸಿ ಅವನ ಸರದಾರರು **ಜಾನ್‌ಪುರ**ದಲ್ಲಿ ಬಂಡುವಾಡಿದರು. ಈ ಸುದ್ದಿಯನ್ನು ಕೇಳಿದಕೂಡಲೆ **ಬಾದಷಹ**ನು **ಲಾಹೋರಿ**(೩೪)ನಿಂದ ಹೊರಟು (೨೨ನೆಯ ಮಾರ್ಚ್), ಬಂಡುಗಾರರನ್ನು ಸೋಲಿಸಿ, ತಿರುಗಿ **ಆಗ್ರಾ**ಕ್ಕೆ ಬಂದನು. ಅಷ್ಟರಲ್ಲಿ **ಕನೋಜಿ**ನಲ್ಲಿ ದಂಗೆಯೆಬ್ಬಿಸಿದ ಸುದ್ದಿ ಬಂತು. ಅದನ್ನು ಕೇಳಿ **ಅಕ್ಬರ**ನ ಮನಸ್ಸಿನ ಸ್ಥಿತಿಯು ಹೇಗಾಗಿರಬಹುದು? ಎಲ್ಲ ಕಡೆಯಲ್ಲಿ ದ್ರೋಹದ ವಿಚಾರಗಳು ಹಬ್ಬಿದ್ದುವು. ಆದರೂ ಎದೆಗಾರನಾದ **ಅಕ್ಬರ**ನು ಕಾರ್ಯಗೌರವವನ್ನಾಲೋಚಿಸಿ ಬೇಸರಗೊಳ್ಳದೆಯೂ ತಡಮಾಡದೆಯೂ **ರಾಯಬರೇಲಿ**ಯ(೩೫)ಮಾರ್ಗದಿಂದ ಹೋಗಿ **ಮಾಣಿಕಪುರ**ದ(೩೬)ಹತ್ತಿರ ಗಂಗೆಯನ್ನು ದಾಟಿ, ರಾಜದ್ರೋಹಿಗಳನ್ನು ಪೂರ್ಣವಾಗಿ ಸೋಲಿಸಿ **ಪ್ರಯಾಗ,** (೩೭) **ಕಾಶಿ, ಜಾನ್‌ಪುರ**ಗಳ ಮಾರ್ಗದಿಂದ **ಆಗ್ರ**ಕ್ಕೆ ಮರಳಿ ಬಂದನು.

ಮೂಡಣ ನಾಡು ಶಾಂತವಾಯಿತೆಂದೆಣಿಸಿ **ಅಕ್ಬರ**ನು **ರಾಜಪುತಾನ**ವನ್ನು ಗೆಲ್ಲಲಿಕ್ಕೆ ಹವಣಿಸಿದನು.* ಈ ರಾಜಪುತ್ರರಲ್ಲಿ **ಮೇವಾಡ**ದ ಅರಸನಾದ **ಉದಯಸಿಂಗ**ನು ಹಿರಿಯ ಮನೆತನದವನಾಗಿದ್ದನು. ಇವನು ಅಳ್ಳೆದೆಯವನೂ ಹಟಗಾರನೂ ಆಗಿದ್ದನು. ಇವನ ಭದ್ರವಾದ ಕೋಟೆಯು **ಚಿತ್ತೂರು** (೩೮). ಇದು ೧೩೦೩ರಲ್ಲಿ **ಅಲ್ಲಾವುದ್ದೀನ್ ಖಿಲ್ಜಿ**ಯ ಕಯ್ಸೇರಿದ್ದರೂ ಭದ್ರವಾದುದೆಂದು ಹೆಸರಾಗಿತ್ತು. **ಅಕ್ಬರ**ನು ಈ ಕೋಟೆಯನ್ನು ಮುತ್ತಿದನು (೨೦ ಅಕ್ಟೋಬರ ೧೫೬೭). **ರಾಣ**ನು ಅಂಜಿ ಓಡಿ ಹೋದರೂ ಕೋಟೆಯಲ್ಲಿದ್ದ ರಜಪೂತರು ಎದೆಗುಂದಲಿಲ್ಲ. ಅವರ ಶೌರ್ಯವನ್ನೂ ಧೈರ್ಯವನ್ನೂ ನೋಡಿ **ಅಕ್ಬರ**ನು ಬೆರಗಾದನು. ಕಟ್ಟಕಡೆಗೆ ಗೋಡೆಯಲ್ಲಿ ಒಂದು ತೂತು ಬಿದ್ದುದರಿಂದ ಅದನ್ನು ಮುಚ್ಚುವುದಕ್ಕೆ ರಜಪೂತರು ಯತ್ನ ನಡೆಯಿಸಿದರು. ಅಷ್ಟರಲ್ಲಿ ಒಂದು ಚಮತ್ಕಾರವಾಯಿತು. ಅದೇನಂದರೆ:—ತಾನು ಸ್ವತಃ ತನ್ನ ದಂಡಾಳುಗಳನ್ನು ನಡೆಯಿಸುವುದಕ್ಕೋಸ್ಕರ **ಅಕ್ಬರ**ನು ಒಂದು ಎತ್ತರವಾದ ಸ್ಥಳವನ್ನು ಮಾಡಿಸಿ

* ಪ್ರಯತ್ನಿಸಿದನು.



ಉದಯಸಿಂಗ

ಅಲ್ಲಿ ನಿಂತುಕೊಂಡಿದ್ದನು. ಆ ತೂತು ಅವನ ಹತ್ತಿರದಲ್ಲೇ ಇತ್ತು. ರಜಪೂತರ ದಳವಾಯಿಯು ಆ ತೂತಿನ ಬಳಿಯಲ್ಲೇ ನಿಂತುದನ್ನು ನೋಡಿ, **ಅಕ್ಬರ**ನು ಗುಂಡು ಹಾರಿಸಿ ಅವನನ್ನು ಕೊಂದುಬಿಟ್ಟನು. ಇವನೇ ಹೆಸರುವಾಸಿಯಾದ **ಜಯಮಲ್ಲ**ನು. ಇದನ್ನು ಕಂಡು ರಜಪೂತರ ಎದೆ ಒಡೆಯಿತು. ಅದೇ ಸಮಯದಲ್ಲಿ **ಅಕ್ಬರ**ನ ದಂಡಿನವರು ಕೋಟೆಯೊಳಕ್ಕೆ ಹೊಕ್ಕರು (೧೫೬೮). ಆಗ ರಜಪೂತರು ಎಷ್ಟು ಹುರುಪಿನಿಂದ ಕಾದಿದರೂ ಸಾರ್ಥಕವಾಗಲಿಲ್ಲ. ಬೆಳಗಾಗುವುದರೊಳಗೆ ಆ ಕೋಟೆಯು **ಅಕ್ಬರ**ನ ಕಯ್ಸೇರಿತು. ಆದುದರಿಂದ ತಾನು ಕಟ್ಟಿಕೊಂಡಿದ್ದ ಹರಕೆಯನ್ನು ಮುಟ್ಟಿಸುವುದಕ್ಕೋಸ್ಕರ **ಅಕ್ಬರ**ನು **ಅಜಮೀರ**ದಲ್ಲಿದ್ದ **ಸಿಜಿಸ್ಥಾ**ನದ **ಮುಯುದ್ದೀನ**ನೆಂಬೊಬ್ಬ ಸಾಧುವಿನ ಗೋರಿಯ ದರ್ಶನವನ್ನು ತೆಗೆದುಕೊಂಡು ಮರಳಿ **ಆಗ್ರ**ಕ್ಕೆ ಬಂದನು. (ಮುಂದೆ ೫ನೆಯ ಅಧ್ಯಾಯದಲ್ಲಿ **ಮೇವಾಡ**ದ ವರ್ಣನೆಯನ್ನು ನೋಡಿರಿ).

ಮರುವರುಷ ಮಳೆಗಾಲವು ತೀರಿದ ಬಳಿಕ **ಬಾದಷಹ**ನು **ಬುಂದಿ**ಯ ಅರಸನ ವಶದಲ್ಲಿದ್ದ **ರಣತಂಭರ**ವೆಂಬ (೩೯) ಭದ್ರವಾದ ಕೋಟೆಯನ್ನು ತೆಗೆದುಕೊಳ್ಳಲಿಕ್ಕೆ ಸಿದ್ಧತೆಯನ್ನು ಮಾಡಿದನು. ಆದರೆ ಅಷ್ಟರಲ್ಲಿ **ಗುಜರಾಥಿ**ನಲ್ಲಿಯೂ **ಮಧ್ಯಹಿಂದುಸ್ತಾನ**ದಲ್ಲಿಯೂ ಗದ್ದಲ ವೆದ್ದುದರಿಂದ ಆ ವಿಚಾರವನ್ನು ಬಿಟ್ಟು ಆ ಗದ್ದಲಗಳನ್ನು ಶಾಂತಮಾಡಿ ಮುಂದೆ ೧೫೬೯ರಲ್ಲಿ **ರಣತಂಭರ**ವನ್ನು ಹಿಡಿದುಕೊಂಡನು. (ಮುಂದೆ ೫ನೆಯ ಅಧ್ಯಾಯದಲ್ಲಿ **ಬುಂದಿ**ಯ ವರ್ಣನೆಯನ್ನು ನೋಡಿರಿ).

ಆ ಕಾಲಕ್ಕೆ **ಚಿತ್ತೂರು, ರಣತಂಭರ, ಕಲಿಂಜರ** ಈ ಮೂರು ಕೋಟೆಗಳು ಭದ್ರತೆಯ ಬಗ್ಗೆ ಹೆಸರಾಗಿದ್ದವು. ಮೊದಲಿನ ೨ ಕೋಟೆಗಳು ಕಯ್ವಶವಾದ್ದರಿಂದ **ಕಲಿಂಜರ** ಕೋಟೆಯನ್ನು ಹಿಡಿದುಕೊಳ್ಳುವ ಇಚ್ಛೆಯು **ಅಕ್ಬರ**ನ ಮನಸ್ಸಿನಲ್ಲಿ ಹುಟ್ಟಿತು. ಈ ಕೋಟೆಯು ಬುಂದೇಲ ಖಂಡದಲ್ಲಿ **ರಾಮಚಂದ್ರ**ನೆಂಬ ಅರಸನ ವಶದಲ್ಲಿತ್ತು. **ಬಾದಷಹ**ನು ತನ್ನೊಬ್ಬ ದಳವಾಯಿಯನ್ನು ಅದನ್ನು ಮುತ್ತಲಿಕ್ಕೆ ಕಳುಹಿದನು. ಆ ದಳವಾಯಿಯು ಬಂದ ಕೂಡಲೆ **ರಾಮಚಂದ್ರ** ರಾಜನು ಆ ಕೋಟೆಯನ್ನು ಜಗಳ ವಿಲ್ಲದೆ ಒಪ್ಪಿಸಿದನು. ಆ ಸುದ್ದಿಯನ್ನು ಕೇಳಿ ಸಂತುಷ್ಟನಾಗಿ **ಬಾದ ಷಹ**ನು **ರಾಮಚಂದ್ರ** ರಾಜನಿಗೆ **ಅಲ್ಲಹಾಬಾದಿ**ನ ಹತ್ತರ ಒಂದು ಜಹ ಗೀರನ್ನು ಹಾಕಿ ಕೊಟ್ಟನು (ಅಗಸ್ಟ ೧೫೬೯).

**ಅಕ್ಬರ**ನು ಅದೇ ವರುಷ **ಫತ್ತೇಪುರ ಸಿಕ್ರಿ**(೪೦)ಯನ್ನು ಕಟ್ಟಿಸ ಲಾರಂಭಿಸಿದನು. ಈ ಹೊಸ ಪಟ್ಟಣವು ಆ ಕಾಲದಲ್ಲಿದ್ದ ಅವನ ಮೂಢ ಭಕ್ತಿಯನ್ನು ತಿಳಿಸುತ್ತದೆ. ಅದು ಹೇಗೆಂದರೆ, **ಅಕ್ಬರ**ನಿಗೆ ಮೊದಲೆರಡು ಅವಳಿಜವಳಿ ಮಕ್ಕಳು ಹುಟ್ಟಿ ಚಿಕ್ಕಂದಿನಲ್ಲೇ ಮಡಿದರು. ಬಳಿಕ ಅವನು **ಸಿಕ್ರಿ**ಯಲ್ಲಿದ್ದ **ಷೇಕ್‌ಸೇಲಿಮ** ಕಿಸ್ತಿಯೆಂಬ ಸಾಧುವಿನ ದರುಶನಕ್ಕೆ ಹೋಗಲು ಅವನು "ನಿನಗೆ ಆಯುಷ್ಯವುಳ್ಳ ೩ ಮಂದಿ ಗಂಡು ಮಕ್ಕಳು ಬೇಗನೆ ಹುಟ್ಟುವರು" ಎಂದು ಅವನನ್ನು ಹರಿಸಿ ಕಳುಹಿದನು. **ಬಾದ ಷಹ**ನಿಗೆ ಅವನಲ್ಲಿ ನಂಬಿಕೆ ಹುಟ್ಟಿತ್ತು. ಆದುದರಿಂದ **ರಣತಂಭರ**ದಿಂದ ತಿರುಗಿ ಬಂದ ಬಳಿಕ ಅವನು ಆಗಾಗ ಆ ಸಾಧುವಿನ ದರುಶನಕ್ಕೆ ಹೋಗು ತ್ತಿದ್ದನು. ತುಂಬ ಬಸುರಿದ್ದ **ಜೋದಬಾಯಿ**ಯನ್ನು ಹಡೆಯುಲಿಕ್ಕೆ

ಅಲ್ಲಿಗೆ ಕಳುಹಿದನು. ಆದಕಾರಣ ಅಲ್ಲಿ ಒಂದು ಅರಮನೆಯನ್ನು ಕಟ್ಟಿಸ ಬೇಕೆಂದು ಅವನಿಗೆ ಮನಸ್ಸಾಯಿತು. ಆದ್ದರಿಂದ ಅಲ್ಲಿ ಅವನು ಒಂದು ಅರಮನೆಯನ್ನೂ, ಮಸೀದಿಯನ್ನೂ ಕಟ್ಟಿಸಿದ ಬಳಿಕ, ಸರದಾರರೂ ಅಲ್ಲಿ



ಜೋಧಬಾಯಿ

ತಂತಮ್ಮ ಮನೆಗಳನ್ನು ಕಟ್ಟಿಸಿದರು. ಈ ಮೇರೆಗೆ ಅಲ್ಲಿಯೊಂದು ಹೊಸ ಪಟ್ಟಣವಾಯಿತು. ಬಳಿಕ ಕೆಲವು ದಿವಸದಲ್ಲೇ **ಗುಜರಾಥಿ**ಗೆ ಹೋದ **ಅಕ್ಬರ**ನ ಸರದಾರರಿಗೆ ಜಯದೊರೆತುದರಿಂದ ಅದಕ್ಕೆ **ಫತ್ತೇಪುರ**ವೆಂದು

ಹೆಸರಾಯಿತು. ಅಷ್ಟರೊಳಗೆ **ಬಾದಷಹ**ನ ರಜಪೂತರಾಣಿಯಾದ **ಜೋಧಬಾಯಿ**ಯು **ಷೇಕಸೇಲಿಮ ಕಿಸ್ತಿ**ಯ ಮನೆಯಲ್ಲಿ ಒಂದು ಗಂಡು ಮಗುವನ್ನು ಹೆತ್ತಳು (೩೦ ಅಗಸ್ಟ ೧೫೬೯). **ಬಾದಷಹ**ನು ಆ ಸಾಧುವಿನ ಹರಕೆಯಿಂದ ತನಗೆ ಈ ಮಗುವು ಹುಟ್ಟಿತೆಂದೆಣಿಸಿ ಅದಕ್ಕೆ **ಸೇಲಿಮ**ನೆಂಬ ಹೆಸರನ್ನಿಟ್ಟನು. ಇವನೇ ಮುಂದೆ ಪ್ರಸಿದ್ಧಿಗೆ ಬಂದ **ಜಹಂಗೀರ ಬಾದಷಹ**ನು. ಮರುವರುಷ **ಸಾಲಿಮಾ ಸುಲ್ತಾನ ಬೇಗಮ್ಮ**ಳು **ಮುರಾದ**ನನ್ನು ಹೆತ್ತಳು.*

ಮರುವರುಷ **ಬಾದಷಹ**ನು **ಜೋಧಪುರ**ಕ್ಕೆ ದಂಡೆತ್ತಿ ಹೋದನು. ಅಲ್ಲಿಯ ಅರಸನೂ **ಬಿಕಾನೀರಿ**ನ ಆರಸನೂ ಶರಣು ಬಂದುದರಿಂದ ಅವನು **ಬಿಕಾನೀರಿ**ನ ಅರಸು ಮಗಳನ್ನು ಮದುವೆ ಮಾಡಿಕೊಂಡು, ಕೆಲವು ದಿವಸ **ನಾಗೂರ**ಲ್ಲಿ ಕಾಡುಗತ್ತೆಗಳ ಬೇಟೆಯನ್ನಾಡಿ **ದೀಪಾಲಪುರ**ಕ್ಕೆ (೪೧) ಹೋದನು. ಅಲ್ಲಿಯೊಂದು ದೊಡ್ಡ ದರಬಾರನ್ನು ನೆರೆಯಿಸಿ **ಪಂಜಾಬಿ**ನ ಆಡಳಿತ ಸಂಬಂಧವಾದ ಕೆಲವು ಏರ್ಪಾಡುಗಳನ್ನು ಮಾಡಿ **ಫತ್ತೇಪುರ**ಕ್ಕೆ ತಿರುಗಿ ಬಂದನು (೧೫೭೨).

ಆ ಕಾಲದಲ್ಲಿ **ಗುಜರಾತ** ದೇಶವು ಒಬ್ಬರಸನ ಕಯ್ಕೆಳಗಿರಲಿಲ್ಲ. ಬೇರೆ ಬೇರೆ ಮುಸಲ್ಮಾನ ಸರದಾರರು ಅದರ ಬೇರೆ ಬೇರೆ ಭಾಗಗಳಲ್ಲಿ ಅಂದರೆ—ಸೂರತ್, ಭಡೋಚ್, ಕಾಯರಾ, ಅಹಮ್ಮದಾಬಾದ್, ಬಡೋದೆ, ಮಹಿಕಂಠಾ, ರೇವಾಕಂಠಾ, ಪಂಚಮಹಾಲ್, ಪಾಲನ್‌ಪುರ, ರಾಧನ್‌ಪುರ, ಬಲಿಷ್ಣಾ, ಖಂಬಾಯತ್, ಖಾನ್‌ದೇಶ, ಕಾಠೇವಾಡ, ಈ ಭಾಗಗಳಲ್ಲಿ ಸ್ವತಂತ್ರರಾಗಿ ಆಳುತ್ತಿದ್ದರು. ಇವರು ತಮ್ಮತಮ್ಮೊಳಗೆ ಯಾವಾಗಲೂ ಜಗಳವಾಡುತ್ತಿದ್ದುದರಿಂದ ಆ ನಾಡಿನಲ್ಲಿ ಶಾಂತಿಯೇ ಇರಲಿಲ್ಲ. ಈ ಬಗೆಯ ಪರಸ್ಪರ-ವಿರೋಧದಿಂದ ಜನರಿಗಾಗುವ ಕೇಡನ್ನು ದೂರ ಮಾಡಬೇಕೆಂಬ ಉದ್ದೇಶದಿಂದಲೂ ತನ್ನ ರಾಜ್ಯವನ್ನು ಬೆಳಿಸಬೇಕೆಂಬ ಬಯಕೆಯಿಂದಲೂ **ಬಾದಷಹ**ನು ಆ ನಾಡಿನೊಳಕ್ಕೆ ನುಗ್ಗಬೇಕೆಂದು ನಿಶ್ಚಯಿಸಿ, ತನ್ನ ದಂಡನ್ನು ಮುಂದೆ ಕಳುಹಿ ತಾನು ೫೦೦

* ೧೫೭೨ರಲ್ಲಿ ಅಕ್ಬರನ ಒಬ್ಬ ಸೂಳೆಯಿಂದ ಡೇನಿಯಲ್ಲನು ಹುಟ್ಟಿದನು. ಅಕ್ಬರನಿಗೆ ೩ ಮಂದಿ ಹೆಣ್ಣು ಮಕ್ಕಳಿದ್ದರು. ಅವರು ರಾಜಕಾರ್ಯದಲ್ಲಿ ಕಯ್ಹಾಕಲಿಲ್ಲ. ೧೫೬೯ರಿಂದ ೧೫೮೫ರ ವರೆಗೆ ಸಿಕ್ರಿಯೇ ಬಾದಷಹನ ರಾಜಧಾನಿಯಾಗಿತ್ತು.



ಷೇಕಸಲೀಮ ಕ್ರಿಷ್ಟಿ

ಮಂದಿ ರಜಪೂತರೊಡನೆ **ಫತ್ತೇಪುರ ಸಿಕ್ರಿ**ಯಿಂದ ಹೊರಟನು (ಜುಲೈ ೧೫೭೨). ಅವನು ಹಾದಿಯಲ್ಲಿ **ಅಜಮೀರ**ಕ್ಕೆ ಹೋಗಿ ಅಲ್ಲಿದ್ದ ಸಾಧುವಿನ ಗೋರಿಯ ದರುಶನವನ್ನು ಮಾಡಿಕೊಂಡು **ನಾಗೂರಿ**ಗೆ ಬಂದನು (ಸಪ್ಟಂಬರ ೧೫೭೨). ಅಲ್ಲಿರುವಾಗ ಅವನ ೩ನೆಯ ಮಗನಾದ **ಡ್ಯಾನಿಯಲ್ಲ**ನು ಹುಟ್ಟಿದನೆಂಬ ಸುದ್ದಿಯು ಬಂತು. ಅದನ್ನು ಕೇಳಿ ಅವನು ಸಂತಸಗಡಲಲ್ಲಿ ಮುಳುಗಿದನು. ಬಳಿಕ ಅಲ್ಲಿಂದ ಹೊರಟು **ಅಹಮ್ಮದಾಬಾದಿ**ಗೆ (೪೨) ಬರುವಾಗ ದಾರಿಯಲ್ಲಿ **ಗುಜರಾಥಿ**ನ ಅರಸನೆನಿಸಿಕೊಂಡಿದ್ದ ೩ನೆಯ **ಮುಜಾಫರಶಹ**ನು ಅವನ ಮರೆಹೊಕ್ಕನು. ಆಗ ಸಕ್ಕರೆಯ ಮೇಲೆ ಜೇನಿಕ್ಕಿದಂತಾಯಿತು. ಮೂರನೆಯ ಮಗನು ಹುಟ್ಟಿದನು, ಮತ್ತೊಂದು ದೊಡ್ಡ ರಾಜ್ಯವು ದೊರೆಯಿತು; ಹೀಗಿರಲು ಹರ್ಷವಾಗುವದೇನಾಶ್ಚರ್ಯವು? ಆದುದರಿಂದ ಅವನು **ಅಹಮ್ಮದಾಬಾದಿ**ಗೆ ಬಂದಕೂಡಲೆ **ಗುಜರಾಥಿ**ನ ಒಡೆಯನೆಂದು ಹೋಗಳಿಸಿಕೊಂಡನು (ನವಂಬರ ೧೫೭೨).

**ಅಹಮ್ಮದಾಬಾದಿ**ನ ಅರಸನು ಶರಣುಬಂದರೂ **ಗುಜರಾತು** ವಶವಾಗಲಿಲ್ಲ. ಏಕಂದರೆ **ಭಡೋಚ** (೪೩) **ಬಡೋದೆ** (೪೪) **ಸೂರತ್** (೪೫) ಈ ಪರಗಣೆಗಳ ನವಾಬರು **ಅಕ್ಬರ**ನ ಅಧಿಕಾರಕ್ಕೊಳಗಾಗಲಿಲ್ಲ. ಆದುದರಿಂದ ಅವರನ್ನು ಗೆಲ್ಲುವುದು ಅವಶ್ಯವಾಗಿತ್ತು. ಆದಕಾರಣ **ಬಾದಷಹ**ನು **ಖಂಬಾಯತ್ತಿ**ನಿಂದ (೪೬) ಹೊರಟು, **ಬಡೋದೆ**ಯನ್ನು ಹಿಡಿದುಕೊಂಡು, ಆ ನಾಡಿನ ವ್ಯವಸ್ಥೆಯನ್ನು ಮಾಡುವಾಗ **ಭಡೋಚಿ**ನ ನವಾಬನು ಮೊಗಲರ ಕಡೆಯೊಬ್ಬ ಸರದಾರನನ್ನು ಕೊಂದು, ತನ್ನ ದಂಡಿನೊಡನೆ **ಆಗ್ರಾ**ಕ್ಕೆ ಹೋದನೆಂಬ ಸುದ್ದಿಯು ಬಂತು. ಆಗ **ಅಕ್ಬರ**ನ ಹತ್ತಿರ ತೀರ ಸ್ವಲ್ಪ ದಂಡು ಇತ್ತು. ಆದರೂ ಅವನು ಆ ನವಾಬನನ್ನು ಬೆನ್ನಟ್ಟಬೇಕೆಂದು ನಿಶ್ಚಯಿಸಿದನು. **ಸರ್ನಾಳ**(೪೭)ವೆಂಬಲ್ಲಿ ಎರಡು ದಂಡುಗಳೂ ಎದುರಾದವು.

**ಅಕ್ಬರ**ನ ಹತ್ತಿರ ೨೦೦ ಮಂದಿ ಸವಾರರು ಮಾತ್ರ ಇದ್ದರು. ನವಾಬನ ದಂಡು ಅವನ ದಂಡಿನ ಹತ್ತುಮಡಿಯಾಗಿತ್ತು. ಮೇಲೆ ಸೂಚಿಸಿದಂತೆ **ಸರ್ನಾಳ**ದಲ್ಲಿ, ಒಂದು ಕಡುಗಾಳಗ ನಡೆಯಿತು. **ಅಕ್ಬರ, ಭಗವಾನ್‌ದಾಸ, ಮಾನಸಿಂಗ**—ಇವರು ಜೊಣಿಯಲ್ಲಿದ್ದರು. ಹಗೆಗಳು

ಇವರನ್ನು ಹಿಡಿಯಬೇಕೆಂದು ಬಹಳ ಹವಣಿಸಿದರು. ದೈವಯೋಗದಿಂದ ಅವರ ಮನೋರಥವು ಕಯ್ಗೂಡದಿದ್ದರೂ **ಭಗವಾನ್‌ದಾಸ**ನ ಒಡ ಹುಟ್ಟಿದವನಾದ ಭೂಪತನು ಕಾಳಗದಲ್ಲಿ ಮಡಿದನು. **ಅಕ್ಬರ**ನೂ ಅವನ ಸೈನಿಕರೂ ಜೀವದ ಹಂಗು ದೊರೆದು ಮುಂದೆ ಬಂದ ಹಗೆಗಳನ್ನು ಬರ್ಜಿ ಗಳಿಂದಿರಿದು, ಕತ್ತಿಗಳಿಂದ ಕಡಿದು, ಕಲಿತನದಿಂದ ಕಾದಿ, ವೈರಿಗಳನ್ನು ಚದರಿಸಿ ದಿಕ್ಕು ಪಾಲು ಮಾಡಿಬಿಟ್ಟರು (ದಶಂಬರ). ಈ ಸಮರದಲ್ಲಿ ಶೌರ್ಯತೋರಿಸಿದ ಎಲ್ಲ ಕಲಿಗಳಿಗೂ ದೊಡ್ಡ ದೊಡ್ಡ ಇನಾಮುಗಳು ದೊರೆದವು. **ಭಗವಾನ್‌ದಾಸ**ನ ಸ್ವಾರ್ಥತ್ಯಾಗದ ಸಾಹಸಕ್ಕೆ ಮೆಚ್ಚಿ **ಬಾದಷಹ**ನು ಅವನಿಗೊಂದು ನಗಾರಿಯನ್ನೂ ನಿಶಾನೆಯನ್ನೂ ಬಹು ಮಾನವಾಗಿ ಕೊಟ್ಟನು. ಇಷ್ಟು ದೊಡ್ಡ ಬಹುಮಾನವು ಮುಂದೆ ಯಾವ ಭಾರತೀಯನಿಗೂ ಸಿಕ್ಕಲಿಲ್ಲ.

ಅಷ್ಟರಲ್ಲಿ **ಬಾದಷಹ**ನ ಒಬ್ಬ ದಳವಾಯಿಯು **ಭಡೋಚ**ನ್ನು ಹಿಡಿದುಕೊಂಡನು. ಇನ್ನು **ಸೂರತ್** ಮಾತ್ರ ಉಳಿಯಿತು. ಅದನ್ನು **ಬಾದಷಹ**ನು ಒಂದು ತಿಂಗಳು ಹದಿನೇಳು ದಿವಸ ಮುತ್ತಿ ಕಯ್ವಶ ಮಾಡಿಕೊಂಡನು (ಫೆಬ್ರುವರಿ ೧೫೭೩). ಈ ಮುತ್ತಿಗೆಯಲ್ಲಿ **ಬುಂದಿ**ಯ ಅರಸನ ಮಗನಾದ **ರಾವಭೋಜ**ನು ಬಲು ಕಲಿತನವನ್ನು ತೋರಿಸಿದುದ ರಿಂದ **ಅಕ್ಬರ**ನು ಮೆಚ್ಚಿ ಅವನಿಗೆ ಬೇಕಾದುದನ್ನು ಕೇಳಿಕೊಳ್ಳಬಹುದೆಂದು ಹೇಳಿದನು. ಆಗ ಅವನು ಹೆಚ್ಚಿನದೇನನ್ನೂ ಕೇಳದೆ ಪ್ರತಿವರ್ಷ ಮಳೆ ಗಾಲದಲ್ಲಿ ತನ್ನ ಸಂಸ್ಥಾನಕ್ಕೆ ಹೋಗಿ ಬರಲಿಕ್ಕೆ ಅಪ್ಪಣೆಯನ್ನು ಮಾತ್ರ ಬೇಡಿಕೊಂಡನು. **ಬಾದಷಹ**ನು ಸಂತೋಷದಿಂದ ಅವನ ಕೋರಿಕೆ ಯನ್ನು ಮನ್ನಿಸಿ, **ಗುಜರಾಥ** ದೇಶದ ಆಡಳಿತದ ಏರ್ಪಾಡುಗಳನ್ನು ಮಾಡಿ, **ಆಗ್ರ**ಕ್ಕೆ ತಿರುಗಿ ಬಂದನು (೪ ಜೂನ್). ಇದೇ ವರ್ಷ ಅವನ ದಂಡಾಳು ಗಳು **ಕಾಂಗ್ರಾ** ಅಥವಾ **ನಾಗರಕೋಟ** (೪೮) ಕೋಟೆಯನ್ನು ಮುತ್ತಿ ದರು. ಆದರೆ ಅದು ಅವರ ಕಯ್ಸೇರಲಿಲ್ಲ.

**ಅಕ್ಬರ**ನು **ಸೂರತ**ದಲ್ಲಿದ್ದಾಗ ಒಂದು ವಿಪರೀತವಾದ ಸಂಗತಿಯು ಸಂಭವಿಸಿತೆಂದು **ಅಬುಲ್‌ಫಾಜಲ್ಲ**ನು ಬರೆಯುತ್ತಾನೆ. ಒಂದು ದಿನ ರಾತ್ರಿ **ಅಕ್ಬರ**ನೂ ಅವನ ಗೆಳೆಯರೂ ಮನದಣಿ (ಯಥೇಚ್ಛವಾಗಿ) ಸುರಾ








ಪಾನ ನುಡಿ ಮಾತಾಡುತ್ತಿರುವಾಗ ಒಬ್ಬ ಗೃಹಸ್ಥನು ಭಾರತೀಯರ ಎಣೆಯಿಲ್ಲದ ಎದೆಗಾರಿಕೆಯನ್ನು ಹೊಗಳಿ ಅವರು ಕತ್ತಿಗಳನ್ನು ಇರಿಯಲಿಕ್ಕೆ ಹಿಂಜರೆಯುವುದಿಲ್ಲೆಂದು ಹೇಳಿದನು. ತನಗಿಂತ ಹೆಚ್ಚಿನ ಶೂರರಿಲ್ಲೆಂದು ಹೆಮ್ಮೆಯನ್ನು ತಳೆದ **ಅಕ್ಬರ**ನು ತಾನಾದರೂ ಹಾಗೆ ಮಾಡಬಲ್ಲೆನೆಂದು ಹೇಳಿ ೨ ಕತ್ತಿಗಳನ್ನು ಗೋಡೆಯಲ್ಲಿ ಚುಚ್ಚಿ ಹಾಯ ಹೋದನು. ಮುಂದೆ ಒದಗುವ ಅನರ್ಥವನ್ನು ನಿವಾರಿಸುವ ಲವಲವಿಕೆಯಿಂದ **ಮಾನಸಿಂಗ ರಾಜ**ನು ಆ ಕತ್ತಿಯನ್ನು ಕೆಳಗೆ ಕೆಡವಿದನು. ಅದು **ಬಾದಷಹ**ನ ಕಯ್ಯ ಮೇಲೆ ಬಿದ್ದುದರಿಂದ ಅದು ಗಾಯವಾಯಿತು. ತನ್ನ ಬಯಕೆಗೆ ಅಡ್ಡಾದ್ದರಿಂದ **ಅಕ್ಬರ**ನು ಸಿಟ್ಟಗೆದ್ದು **ಮಾನಸಿಂಗ**ನನ್ನು ನೆಲಕ್ಕೆ ಕೆಡವಿ ಅವನ ಕುತ್ತಿಗೆಯನ್ನು ಹಿಚಕ ಹೋದನು. ಅಷ್ಟರೊಳಗೆ ಮತ್ತೊಬ್ಬ ಸರದಾರನು ನೆತ್ತರ ಸೋರುತ್ತಿದ್ದ **ಬಾದಷಹ**ನ ಕಯ್ಯನ್ನು ಒಡ್ಡು ಮುರಿದು ಹಿಚಿಕಿ ಎಳೆದು **ಮಾನಸಿಂಗ**ನ ಜೀವವುಳಿಸಿದನು. ಅಷ್ಟರೊಳಗೆ ಸುರಾಮದವು ಕಡಮೆಯಾದ್ದರಿಂದ **ಬಾದಷಹ**ನು ಎಲ್ಲರನ್ನು ಸಂತಯಿಸಿದನು.

ಇಷ್ಟರಿಂದಲೇ **ಗುಜರಾಥ್** ದೇಶದಲ್ಲಿ ಶಾಂತಿ ಸ್ಥಾಪಿತವಾಯಿತೆಂದು **ಅಕ್ಬರ**ನು ಎಣಿಸಿದ್ದನು. ಮೊದಲು ದೊರೆತನವನ್ನು ಹೊಂದಿದವರು ಆಳಾಗಲಿಕ್ಕೆ ಸುಲಭವಾಗಿ ಒಪ್ಪಿಕೊಳ್ಳಲಾರರೆಂಬುದು ಅವನಿಗೆ ಹೊಳೆದಿರಲಿಲ್ಲ. ಆದುದರಿಂದ ಅವನು ಆ ಸರದಾರರು ದಂಡು ಕೂಡಿಸುತ್ತಾರೆಂಬ ಸುದ್ದಿಯನ್ನು ಕೇಳಿದ ಕೂಡಲೆ, ಅವರನ್ನು ಮುರಿಬಡಿಯಲೆಳಸಿ, ತನ್ನ ದಂಡನ್ನು ಮುಂದೆ ಕಳುಹಿ ೧೫೭೩ ಅಗಸ್ಟ ೨೩ನೆಯ ದಿವಸ **ಆಗ್ರಾ**ವನ್ನು ಬಿಟ್ಟು, ಒಂದೇ ಸವನೆ ಪ್ರಯಾಣ ಮಾಡಿ **ಅಜಮೀರ**ದ ಮೇಲಿಂದ **ಗುಜರಾಥಿ**ನ ಹಳೆ ರಾಜಧಾನಿಯಾದ **ಪಾಟಣ**ಕ್ಕೆ ಹೋಗಿ ಅಲ್ಲಿ ತನ್ನ ದಂಡನ್ನು ಸೇರಿದನು. ಹಗೆಗಳ ದಂಡಿಗಿಂತ **ಅಕ್ಬರ**ನ ದಂಡು ತೀರ ಸಣ್ಣದಾಗಿತ್ತು. ಆದ್ದರಿಂದ ಅವನ ದಳವಾಯಿಗಳು ಕಾಳಗಕ್ಕೆ ಹೆದರಿದರು. ಆದರೂ ಅವನು ಅವರ ಮಾತು ಕೇಳಲಿಲ್ಲ. ಅವನ ಜನರು ಶೂರರಾಗಿದ್ದರು. ಇದಲ್ಲದೆ ಅವನು **ಆಗ್ರಾ**ವನ್ನು ಬಿಟ್ಟ ಸುದ್ದಿಯೇ ಹಗೆಗಳಿಗೆ ತಿಳಿದಿರಲಿಲ್ಲ. ಏಕೆಂದರೆ ಒಂಬತ್ತು ದಿವಸಗಳಲ್ಲಿ ಅವನು **ಆಗ್ರಾ**ದಿಂದ **ಅಹಮ್ಮದಾಬಾದಿ**ಗೆ (೬೦೦ ಮೈಲು) ಬಂದಾನೆಂಬ ವಿಚಾರವು ಅವರು ಕನಸಿನಲ್ಲಿ

ಯಾದರೂ ತಿಳಿದಿರಲಿಲ್ಲ. ಆದಕಾರಣ ಅವನ ದಂಡು **ಅಹಮ್ಮದಾಬಾದಿ**ಗೆ ಬಂದಾಗ ಶತ್ರುಗಳು ನಿಶ್ಚಿಂತೆಯಿಂದ ತಂತಮ್ಮ ಡೇರೆಗಳಲ್ಲಿ ನಿದ್ದೆ ಹತ್ತಿ ಗೊರಿಕೆಹೊಡೆಯುತ್ತಿದ್ದರು. ನಿದ್ದೆ ಹೋಗುತ್ತಿರುವವರ ಮೇಲೆ ಕಾಣಿಸಿಕೊಳ್ಳುವುದು ಸರಿಯಲ್ಲವೆಂದು ಎಣಿಸಿ, ಮೊಗಲರು ತುತೂರಿಗಳನ್ನೂ ಕಾಳೆಗಳನ್ನೂ ಊದಿಸಿದರು.* ಆ ಗದ್ದಲವನ್ನು ಕೇಳಿ ಹಗೆಗಳು ಎಚ್ಚತ್ತು ಮತ್ತೊಂದು ದಂಡನ್ನು ನೋಡಿ ಅಚ್ಚರಿಗೊಂಡರೇ ಹೊರತು ಅದು ಮೊಗಲರ ದಂಡಿರಬಹುದೆಂದು ಊಹಿಸಲಿಲ್ಲ. ಆದರೂ ಶತ್ರುಗಳ ಮುಖ್ಯಸ್ಥನು ಕಾಳೆಗಕ್ಕೆ ಸಜ್ಜಾದುದನ್ನು ನೋಡಿ ಮೊಗಲರು **ಸಾಬರಮತಿ** ಹೊಳೆಯನ್ನು ದಾಟ, ವೈರಿಗಳ ಮೇಲೆ ಹುಲಿಯಂತೆ ನುಗ್ಗಿ ಹೋಗಿ ಅವರನ್ನು ಮುರಿಬಡಿದು, ಅವರ ನಾಯಕನನ್ನು ಸೆರೆಹಿಡಿದರು (ಸಪ್ಟಂಬರ ೨). ಇಷ್ಟರಿಂದಲೇ **ಅಕ್ಬರ**ನ ಮುಳಿವು ತೀರಲಿಲ್ಲ. ಮತ್ತೊಬ್ಬ ನಾಯಕನು ೫,೦೦೦ ದಂಡಿನೊಡನೆ ಮೊಗಲರನ್ನು ಅಡ್ಡಕಟ್ಟದನು. ಆಗ **ಅಕ್ಬರ**ನು ಆ ದಂಡಿನವರನ್ನು ಪೂರ್ಣವಾಗಿ ಸೋಲಿಸಿ, ಅವರ ನಾಯಕನನ್ನು ಕೊಂದು, **ಅಹಮ್ಮದಾಬಾದಿ**ಗೆ ಹೋಗಿ, ಅಲ್ಲಿ ಐದು ದಿವಸ ವಿಶ್ರಾಂತಿಯನ್ನು ತೆಗೆದುಕೊಂಡನು. ಬಳಿಕ **ಅಹಮ್ಮದಾಬಾದಿ**ನ (೫೦) ಮೇಲಿಂದ **ಅಜಮೀರ**ಕ್ಕೆ ಹೋಗಿ, ಅಲ್ಲಿಯ ಮಸೀದಿಯನ್ನು ನೋಡಿ, ಹಾದಿಯಲ್ಲಿ ಬರುವಾಗ **ತೋಡರಮಲ್ಲ**ರಾಜನೊಡನೆ **ಗುಜರಾಥಿ**ನ ತೆರಿಗೆಯ ಕ್ರಮದ ವಿಷಯದಲ್ಲಿ ಆಲೋಚನೆಯನ್ನು ಮಾಡಿ **ಫತ್ತೇಪುರಸಿಕ್ರಿ**ಗೆ ತಿರುಗಿ ಬಂದನು (೫ ಅಕ್ಟೋಬರ). ಈಯಭಿಯೋಗದಲ್ಲಿ ಅವನು ಒಟ್ಟು ೪೩ ದಿವಸ ಹೊರಗೆ ಇದ್ದನು.

**ಅಕ್ಬರನು** ಪ್ರಜೆಗಳನ್ನು ನೋಯಿಸುವುದಕ್ಕೆ ಹೆದರುತ್ತಿದ್ದನೆಂಬುದು ಅವನ ನಡತೆಯಿಂದಲೇ ಗೊತ್ತಾಗುತ್ತದೆ. **ನೆಪೋಲಿಯನ್ ಬೊನಾ**

---

* ಕ್ಷಿತಿಯೊಳಗೆ ಕ್ಷತ್ರಿಯರ ಧರ್ಮ ।
ಸ್ಥಿತಿಯ ನಱಿಯಾ ಕೃಷ್ಣ ಚಾಪ ।
ಚ್ಯುತಶರನಪಗತವಾಹನರ ಪರಿಮುಕ್ತ ಕೇಶಿಗಳ ॥
ಗತಿವಿಹೀನರ ದೈನ್ಯವಾಚಾ ।
ಯಚಿತರ ವಲ್ಮೀಕರನು ಜಲಸಂ ।
ಗತರನಿಱಿವುದು ಧರ್ಮವೇ ನಾವಱಿಯೆವಿದನೆಂದ ॥
ಮಹಾಭಾರತ ಕರ್ಣಪರ್ವ

**ಪೋರ್ಟ್‌ಗೀಸರು**, **ಮರಾಟರೂ**, **ಹೈದರಲ್ಲಿ**ಯೂ, ೧೮ನೆಯ ಶತಮಾನದಲ್ಲಿ, **ಹಿಂದುಸ್ಥಾನದ** ಮೇಲೆ ಅಭಿಯೋಗ ಮಾಡಿದ **ಕೊರಾಸಾನಿಯ**ರೂ, **ಅಫಗಾನ**ರೂ ಯುದ್ಧ ಕಾಲದಲ್ಲಿ ಹಳ್ಳಿಗಳನ್ನು ಸುಲಿದು ದಂಡಿನವರಿಗೆ ಹಣ ಕೊಡುತ್ತಿದ್ದರು. ಆದರೆ **ಅಕ್ಬರನು** ಹಾಗೆಂದೂ ಮಾಡಲಿಲ್ಲ. ಅವನು ತನ್ನ ದಂಡಿನವರು ಯಾವಕಾಲದಲ್ಲಿಯಾದರೂ ಜನರನ್ನು ಸುಲಿಯಬಾರದೆಂತಲೂ ಬೆಳೆಗಳನ್ನು ಹಾಳುಮಾಡಬಾರದೆಂತಲೂ ಕಟ್ಟು ಮಾಡಿ, ಆ ನಿಯಮದಂತೆ ನಡಿಸಲಿಕ್ಕೆ ತಕ್ಕ ಅಧಿಕಾರಿಗಳನ್ನು ನಿಯಮಿಸುತ್ತಿದ್ದನು. ದಂಡು ಪಾಳೆಯ ಬಿಟ್ಟದ್ದೆಡೆಯಲ್ಲಿ ರೈತರಿಗಾದ ನಷ್ಟದ ಹಣವನ್ನು ಬಂಡಾರದಿಂದ ಕೊಡಿಸುತ್ತಿದ್ದನು. ಈ ತರದ ಏರ್ಪಾಡುಗಳಿಂದ ಅವನು ಜನರನ್ನು ಮೆಚ್ಚಿಸಿ, ಪ್ರಜಾನುರಂಜನೆಯ ತರತರದ ಕಟ್ಟಳೆಗಳಿಂದ ಪ್ರಜೆಗಳ ಮನಸ್ಸನ್ನೆಳೆದುಕೊಂಡು, ಮೊಗಲರ ಆಳಿಕೆಯನ್ನು ನೆಲೆಗೊಳಿಸಿದನು.* ಈಗ ನಮ್ಮ ದೇಶದೊಡೆಯರಾದ ಆಂಗ್ಲೇಯರು ಈ ತತ್ವವನ್ನೇ ಅನುಸರಿಸುತ್ತಿರುವುದರಿಂದ ಅವರ ಆಳಿಕೆಯೂ ಜನರಿಗೆ ಪ್ರಿಯಕರವಾಗಿರುತ್ತದೆ.

ಈ ಕಾಲಕ್ಕೆ **ಕಾಬೂಲು**, **ಪಂಜಾಬ**, **ಸಂಯುಕ್ತಪ್ರಾಂತ**, **ಮಧ್ಯಪ್ರಾಂತ**, **ಗುಜರಾಥು** ಈ ೫ ನಾಡುಗಳು ಮಾತ್ರ **ಅಕ್ಬರ**ನ ವಶದಲ್ಲಿದ್ದವು. ಅವನ ರಾಜ್ಯದ ಪೂರ್ವಕ್ಕಿದ್ದ **ಬಂಗಾಳ**, **ಬಿಹಾರ ಪ್ರಾಂತ**ಗಳಿಗೆ, **ಅಫಗಾನ್** ವಂಶದನೊಬ್ಬ ನವಾಬನು ಒಡೆಯನಾಗಿದ್ದನು. **ಹುಮಾಯೂನನು** ತನ್ನ ರಾಜ್ಯವನ್ನು ತಿರುಗಿ ತೆಗೆದುಕೊಂಡ ಬಳಿಕ ಈ ನವಾಬನು ಮೊಗಲರಿಗೆ ಕಪ್ಪಕೊಡುತ್ತೇನೆಂದೊಪ್ಪಿಕೊಂಡಿದ್ದನು. ಆದರೆ ಈ ಒಪ್ಪಿಗೆಯು ಕಾಗದದಲ್ಲೇ ಉಳಿಯಿತು. **ಅಕ್ಬರನು** **ಗುಜರಾಥ**ನ್ನೊಳನುಗ್ಗಿದಾಗ ಈ ನವಾಬನು ತೀರಿಹೋದುದರಿಂದ ಅವನ ಮಗನು ಪಟ್ಟವೇರಿದನು. ಆದರೆ ವಿರುದ್ಧ ಬಣ (ಪಂಗಡ)ದ ಸರದಾರರು ಕೆಲವು

---

* ಅರಸನೆ ನೀಂ ಕ್ಷಿತಿಧೇನುವ ।
ಕರೆಯಲಪೇಕ್ಷಿಪೊಡೆ ಕಱುವ ಪೊರೆವೋಲ್ ಪ್ರಜೆಯಂ ॥
ಪೊರೆ ಪುಟ್ಟೆ ವಾಗಿರಲ್ಪ್ರಜೆ ।
ಕರೆವುದದಿಳೆ ಕಾಮಧೇನುವೋಲ್ ಕಾಮಿತಮಂ ॥

ಬ. ನೀತಿಶತಕ

ದಿವಸಗಳಲ್ಲೇ ಅವನನ್ನು ಕೊಲ್ಲಿಸಿ ಅವನ ತಮ್ಮನಾದ **ದಾವುದ್‌ಖಾನ**ನನ್ನು ಗದ್ದಿಗೆಯ ಮೇಲೆ ಕುಳ್ಳಿರಿಸಿದರು. ಈ **ದಾವುದ**ನು ಸೋಮಾರಿಯೂ, ದುಂದುಗಾರನೂ, ಸ್ವೇಚ್ಛೆಯೂ, ದುರಭಿಮಾನಿಯೂ ಆಗಿದ್ದನು. ಆದ್ದರಿಂದ ಅವನು ತನ್ನ ತಂದೆಯಂತೆ **ಡಿಲ್ಲಿ**ಯ **ಬಾದಷಹ**ನನ್ನು ಮನ್ನಿಸದೆ ತಾನೇ ಸ್ವತಂತ್ರ ರಾಜನೆಂದು ಸಾರಿ ತನ್ನ ಹೆಸರಿನ ನಾಣ್ಯಗಳನ್ನು ಹೊರಡಿಸಿ **ಝಮಾನಿಯಾ** ಎಂಬ ಮೊಗಲರ ಕೋಟೆಯನ್ನು ಹಿಡಿದುಕೊಂಡು, ತನ್ನ ಮಂತ್ರಿಯಾದ **ಲೋದಿಖಾನ**ನನ್ನು ಕಪಟದಿಂದ ಕೊಲ್ಲಿಸಿದನು.

**ಅಕ್ಬರ**ನು **ಗುಜರಾಥಿ**ನಲ್ಲಿದ್ದಾಗ **ದಾವುದ**ನ ಈ ಪುಂಡತನದ ಸುದ್ದಿಯನ್ನು ಕೇಳಿ **ಜಾನ್‌ಪುರ**ದಲ್ಲಿದ್ದ ತನ್ನ ಸುಭೇದಾರನಿಗೆ ಅವನನ್ನು ದಂಡಿಸಲಿಕ್ಕೆ ಬರೆದನು. ಈ ಸುಭೇದಾರನು ಮುದುಕನಾದ್ದರಿಂದ **ದಾವುದ**ನನ್ನು ಹಣ್ಣಿಗೆ ತರಲಿಲ್ಲ. ಆದ್ದರಿಂದ **ಬಾದಷಹ**ನು ಸಿಟ್ಟಾಗಿ **ತೋಡರಮಲ್ಲ**ನನ್ನು ಆ ಕೆಲಸಕ್ಕೆ ನೇಮಿಸಿದನು. ಈ ಸುದ್ದಿಯನ್ನು ಕೇಳಿ ಸುಭೇದಾರನು ನಾಚಿ ದೊಡ್ಡ ದಂಡನ್ನು ಕೂಡಿಸಿಕೊಂಡು **ಪಾಟಣಾ**ದ ಭದ್ರವಾದ ಕೋಟೆಯನ್ನು ಮುತ್ತಿ **ಬಾದಷಹ**ನಿಗೆ ಅಲ್ಲಿಗೆ ಬರಲಿಕ್ಕೆ ಹೇಳಿ ಕಳುಹಿಸಿದನು.

**ಗುಜರಾಥಿ**ನಿಂದ ತಿರುಗಿ ಬಂದ ಕೂಡಲೆ ಈ ವರ್ತಮಾನವು **ಬಾದಷಹ**ನಿಗೆ ತಿಳಿಯಿತು. ಆ ಕ್ಷಣವೇ ಅವನು ತನ್ನ ಸುಭೇದಾರನಿಗೆ ತಾನು ಬರುವ ವರೆಗೆ ನಿರೀಕ್ಷಿಸ ಬೇಕೆಂದು ಬರೆದು, ಅವಸರದಿಂದ **ಅಜಮೀರ**ಕ್ಕೆ ಹೋಗಿ ಬಂದು, ಮಳೆಗಾಲದಲ್ಲೇ ದೋಣಿಯ ಮೇಲಿಂದ **ಕಾಶಿ**ಗೆ ಹೋಗಿ ಅಲ್ಲಿ ಮೂರು ದಿವಸ ನಿಂತು, ನೀರ್ದಾರಿಯಿಂದಲೇ **ಚೌಸಾ**ಕ್ಕೆ* (೫೧) ಬಂದನು. ಅಲ್ಲಿರುವಾಗ **ಪಾಟ್ಣಾ**ದಿಂದ (೪೯) ಕಾಗದವು ಬಂತು. ಅದರಲ್ಲಿ ಹಗೆಗಳು ಮೊಗಲರ ಮೇಲೆ ಬಿದ್ದು ಹಾನಿಯನ್ನುಂಟು ಮಾಡಿದರೆಂತಲೂ, **ಬಾದಷಹ**ನು ಆದಷ್ಟು ಬೇಗ ಬರಬೇಕೆಂತಲೂ ಬರೆದಿತ್ತು. ಅವನು ಅದನ್ನು ನೋಡಿದ ಕೂಡಲೆ ತನ್ನ ಹೆಂಡರು ಮಕ್ಕಳನ್ನು **ಜಾನ್‌ಪುರ**ಕ್ಕೆ ಕಳುಹಿ, ದಂಡಿನೊಡನೆ ಅವಸರದಿಂದ ದಾರಿಯನ್ನು ನಡೆದು,

*ಇಲ್ಲಿ ೧೫೩೯ರಲ್ಲಿ ಶೇರಷಹನು ಹುಮಾಯುನನನ್ನು ಸೋಲಿಸಿದನು.

ಒಂದು ವಾರದಲ್ಲಿ **ಪಾಟ್ನಾ**ಕ್ಕೆ ಬಂದು ಮುಟ್ಟಿದನು (೩ಅಗಸ್ಟ ೧೫೭೪). ಬಳಿಕ ತನ್ನ ದಳವಾಯಿಗಳೊಡನೆ ಆಲೋಚಿಸಿ **ಪಾಟ್ನಾ**ಕ್ಕೆ ಎದುರಿಗಿದ್ದ **ಹಾಜಿಪುರ** (೫೨)ವನ್ನು ಹಿಡಿದುಕೊಂಡನು. ಈ ಸುದ್ದಿಯನ್ನು ಕೇಳಿ **ದಾವುದ**ನು ಹೆದರಿ ಇರುಳಲ್ಲಿ **ಪಾಟ್ನಾ**ವನ್ನು ಬಿಟ್ಟು ಓಡಿ ಹೋದನು. ಆದುದರಿಂದ ಆ ಕೋಟೆಯು ಅನಾಯಾಸವಾಗಿ **ಬಾದಷಹ**ನ ಕಯ್ಸೇರಿತು.

ಇಷ್ಟರಿಂದಲೇ ಅವನ ಬಯಕೆಯು ನೆರವೇರಲಿಲ್ಲ. ಅವನ ಮನಸ್ಸಿನಲ್ಲಿ **ದಾವುದ**ನನ್ನು ಹಿಡಿಯಬೇಕೆಂದಿತ್ತು. ಆದುದರಿಂದ ಅವನು ಮೂರು ನಾಲ್ಕು ಗಂಟೆ ಮಾತ್ರ ಅಲ್ಲಿ ನಿಂತು ಕೆಲವು ರಾಹುತರನ್ನು ಸಂಗಡ ಕರೆದುಕೊಂಡು, **ದಾವುದ**ನನ್ನು ಬೆನ್ನಟ್ಟಿ **ದರ್ಯಾಪುರ**(೫೩) ವೆಂಬಲ್ಲಿ ಅವನ ಆನೆಗಳನ್ನು ಹಿಡಿದುಕೊಂಡನು. ಆದರೆ **ದಾವುದ**ನು ತಪ್ಪಿಸಿಕೊಂಡು ಓಡಿಹೋದನು.

**ಪಾಟ್ನಾ**ವು ಕಯ್ಸೇರಿದುದರಿಂದ ಎಲ್ಲ **ಬಿಹಾರ** ಪ್ರಾಂತವು ಮೊಗಲರ ಕಯ್ವಶವಾಯಿತು. **ಬಾದಷಹ**ನು **ದರ್ಯಾಪುರ**ದಲ್ಲಿ ಕೆಲವು ದಿವಸ ನಿಂತು, **ಜಾನ್‌ಪುರ, ಚುನಾರ್,** ವಾರಣಾಸಿ ಇವುಗಳನ್ನು **ಡಿಲ್ಲಿ**ಯ ಭಾಗಕ್ಕೆ ಸೇರಿಸಿ, ಹೊಸದಾಗಿ ಗೆದ್ದ ನಾಡಿಗೆ **ಮುನಿಮ್‌ಖಾನ**ನೆಂಬ ಒಬ್ಬ ಸುಭೇದಾರನನ್ನು ನಿಯಮಿಸಿ, ಅವನಿಗೆ **ದಾವುದ**ನನ್ನು ಬೆನ್ನಟ್ಟಲಪ್ಪಣೆಯನ್ನಿತ್ತು, ತಾನು **ಕಾನ್‌ಪುರ**ಕ್ಕೆ (೫೪) ಹೋಗಿ, ಅಲ್ಲಿ ಕೆಲವು ದಿವಸ ನಿಂತನು. ಅಲ್ಲಿರುವಾಗ ಆ ಸುಭೇದಾರನು **ಮೋಂಗಿರ್**(೫೫), **ಭಾಗಲ್ಪುರ** (೫೬) **ಗೌರ್** (೫೭) ಮುಂತಾದ ಊರುಗಳನ್ನು ಹಿಡಿದುಕೊಂಡು, **ದಾವುದ**ನನ್ನು ಎಡೆಬಿಡದೆ ಬೆನ್ನಟ್ಟಿ, **ಬಾಜೂರ**ಲ್ಲಿ* ಅವನನ್ನು ಚೆನ್ನಾಗಿ ಸೋಲಿಸಿದನೆಂಬ ಸುದ್ದಿಯು ಹರಡಿತು (ಮಾರ್ಚ ೧೫೭೫). ಮುಂದೆ **ದಾವುದ**ನು **ಕಟಕಿ**ಗೆ ಓಡಿಹೋದನು.

ಇತ್ತ **ಅಕ್ಬರ ಬಾದಷಹ**ನು **ಕಾನ್‌ಪುರ**ವನ್ನು ಬಿಟ್ಟು **ಡಿಲ್ಲಿ**ಗೆ ಹೋಗಿ, ಅಲ್ಲಿ ಕೆಲವು ದಿವಸ ಬೇಟೆಯಾಡಿ ಅಲ್ಲಿಂದ ಹೊರಟು, **ನರ್ನೂಲ**ಲ್ಲಿ (೫೮), **ಗುಜರಾಥ್—ಪಂಜಾಬಿ**ನ ಅಧಿಪತಿಗಳಿಗೆ ಕಾಣಿಸಿಕೊಂಡು,

---

* ಈ ಕಾಳಗವು ಬಲಸೋರ ಜಿಲ್ಹೆಯಲ್ಲಿದ ತುಕರಾಯಿ ಎಂಬ ಹಳ್ಳಿಯ ಹತ್ತರ ಆಯಿತೆಂದು ವ್ಹಿನ್ಸೆಂಟ ಸ್ಮಿಥ್ ಸಾಹೇಬರು ಬರೆಯುತ್ತಾರೆ.

**ಅಜಮೀರದ** ಮಾರ್ಗದಿಂದ ತನಗೆ ಪ್ರೀತಿಯ ಸ್ಥಳವಾದ **ಫತ್ತೆಪುರ ಸಿಕ್ರಿ**ಗೆ ತೆರಳಿದನು (೧ಲ ಜನವರಿ ೧೫೭೫). ಮುಂದೆ ತುಸು ದಿವಸದಲ್ಲೇ ಅವನು **ಇಬಾದತ್‌ಖಾನಾ (ಆರಾಧನಾಗೃಹ)** ಎಂಬ ಧರ್ಮವಿಚಾರದ ಭವ್ಯವಾದ ಮಂದಿರವನ್ನು ಕಟ್ಟಿಸಲಾರಂಭಿಸಿದನು. ಇದರ ಪಡಸಾಲೆಯಲ್ಲಿ ೩೦೦ ಜನರು ಪ್ರಶಸ್ತವಾಗಿ ಕೂಡ್ರುತಿದ್ದರು.

೧೫೭೪-೭೫ರಲ್ಲಿ ಬರವು ಬಾರದಿದ್ದರೆ, **ಅಕ್ಬರ**ನ ಆಳಿಕೆಯ ೧೭ ನೆಯ ವರ್ಷವು ಬಹುಸುಖದ ವರ್ಷವೆನ್ನಲಿಕ್ಕೆ ಏನೂ ಅಡ್ಡಿಯಿರುತ್ತಿರಲಿಲ್ಲ. ಎಲ್ಲ ಕಡೆಯಲ್ಲಿಯೂ ಅವನ ದಂಡಿಗೆ ಗೆಲುವಾಯಿತು. ಅವನ ವಿರೋಧಿಗಳೆಲ್ಲ ಶರಣಾಗತರಾದರು. **ಗುಜರಾಥಿ**ನಲ್ಲಿ ಶಾಂತತೆಯುಂಟಾಯಿತು; **ಬಂಗಾಲ, ಬೀಹಾರ** ಪ್ರಾಂತಗಳು ಕಯ್ಸೇರಿದವು.

ವಾಡಿಕೆಯಾಗಿ ಕೀಳ್ತರದ ಜನರು ತಮ್ಮಿಷ್ಟಾರ್ಥವು ಪೂರ್ಣವಾದ ಕೂಡಲೆ ದುಂದುಗಾರಿಕೆಯಲ್ಲಿ ಇಲ್ಲವೆ ಅಲಸತೆಯಲ್ಲಿ ಕಾಲಕಳೆಯುತ್ತಾರೆ. ಆದರೆ **ಅಕ್ಬರ**ನು ಈ ತರದ ಮನುಷ್ಯನಾಗಿರಲಿಲ್ಲವೆಂಬುದಕ್ಕೆ ನಮಗೆ ಸಾಕಾದಷ್ಟು ಆಧಾರಗಳಿರುತ್ತವೆ. ಅವನು ಎಲ್ಲ ಬಗೆಯ ಜಯವು ದೊರೆಯಿತೆಂದು ಉಬ್ಬಿ ಎಚ್ಚರದಪ್ಪಿ ದುರ್ವ್ಯಸನಗಳಿಗೊಳಗಾಗದೆಯೂ, ವಿಷಯಾಸಕ್ತನಾಗದೆಯೂ, ಸೊಬಗಿನ ಕಟ್ಟಡಗಳನ್ನು ಕಯ್ಕೊಳ್ಳದೆಯೂ, ಪ್ರಜೆಗಳ ಯೋಗಕ್ಷೇಮಗಳನ್ನು ಹೆಚ್ಚಿಸಬೇಕೆಂಬ ಆಲೋಚನೆಯಲ್ಲಿದ್ದನು. ಅವನು ತನ್ನ ಪ್ರವಾಸ* ಗಳಲ್ಲೆಷ್ಟೋ ಭೂಮಿಯು ಬೀಳು ಬಿದ್ದಿದ್ದುದನ್ನು ನೋಡಿದ್ದನು. ಆದುದರಿಂದ ಅದನ್ನು ಸಾಗುವಳಿ ಮಾಡುವುದಕ್ಕೆ ತಕ್ಕ ಉಪಾಯವನ್ನು ಹುಡುಕಿದನು. ಅದಾವುದೆಂದರೆ, ಸುಮಾರು ೧೦,೦೦,೦೦೦ ಟಂಕಗಳ ಅಥವಾ ೫೦,೦೦೦ ರೂಪಾಯಿಗಳ ಹುಟ್ಟುವಳಿಯಾಗುವಷ್ಟು ಭೂಮಿಯನ್ನು **ಕರೋಡಿ**ಯೆಂಬೊಬ್ಬ ಅಧಿಕಾರಿಯ ಕಯ್ಕೆಳಗೆ ಕೊಟ್ಟು ಆ ಭೂಮಿಯನ್ನು ಸಾಗುವಳಿಮಾಡಲಿಕ್ಕೆ ಯತ್ನಿಸಬೇಕೆಂದು ಅವನಿಗೆ ಕಟ್ಟುಮಾಡಿದನು. ಇದರಿಂದ ಕ್ರಮವಾಗಿ ಕೆಲ ಕೆಲವು ಭೂಮಿಯು ಸಾಗುವಳಿಗೆ ಬಂತು.

---

* ಪ್ರಯಾಣ.

ಈಯೆಪಾರ್ಡನ್ನು ಮುಗಿಸಿದ ಬಳಿಕ **ಅಕ್ಬರ**ನು ತನ್ನ ಕಾಲವನ್ನು ವ್ಯರ್ಥವಾಗಿ ಕಳೆಯಲಿಲ್ಲ. ಅವನ ಮನಸ್ಸಿನಲ್ಲಿ ಧರ್ಮವಿಚಾರಕ್ಕೆ ಪ್ರೋತ್ಸಾಹ ಕೊಡಬೇಕೆಂದಿತ್ತು. ಅದಕ್ಕೆ ಅವನು ತನ್ನ ಪ್ರೀತಿಯ ಸ್ಥಳವಾದ **ಫತ್ತೇಪುರ ಸಿಕ್ರಿ**ಯಲ್ಲೊಂದು ಸೊಗಸಾದ ದೊಡ್ಡ ಕಟ್ಟಡವನ್ನು ಕಟ್ಟಿಸಲಿಕ್ಕೆ ಈ ಮೊದಲೇ ಆರಂಭಿಸಿದ್ದನಷ್ಟೇ; ಆ ಕೆಲಸವನ್ನು ಜೋರಿನಿಂದ ಮುಂದರಿಸಿದನು. ಆ ವಿಶಾಲವಾದ ಮಂದಿರದಲ್ಲಿ ನಾಲ್ಕು ವಿಭಾಗಗಳನ್ನು ಮಾಡಿದ್ದನು. ಪಡುವಣೆಡೆಯು **ಪೈಗಂಬರ**ನ ವಂಶದವರಾದ ಸಯ್ಯದರಿಗಾಗಿತ್ತು; ತೆಂಕಣಭಾಗವು ಮೌಲ್ವಿಗಳ ಸಲುವಾಗಿ ಕಟ್ಟಲ್ಪಟ್ಟಿತು; ಬಡಗಣ ಭಾಗವು ವಿದ್ವಾಂಸರು, ಸಾಧುಗಳು, ತ್ರಿಕಾಲಜ್ಞಾನಿಗಳು ಮುಂತಾದವರ ವಾಸಸ್ಥಾನವಾಗಿತ್ತು; ಈ ಮೂರುವರ್ಗದ ಜನರೊಡನೆ ಸಂವಾದಮಾಡಲಿಚ್ಛಿಸುವ ಸರದಾರರೂ, ಸರಕಾರದ ಉದ್ಯೋಗಸ್ಥರೂ ಕುಳ್ಳಿರಲಿಕ್ಕೆ **ಬಾದಷಹ**ನು ಮೂಡಣಭಾಗವನ್ನು ಗೊತ್ತುಮಾಡಿದ್ದನು. ಅವನು ಪ್ರತಿ ಶುಕ್ರವಾರದ ರಾತ್ರಿಯಲ್ಲಿಯೂ ಹಬ್ಬದ ದಿವಸಗಳ ಇರುಳಲ್ಲಿಯೂ ಈ ಶಾರದಾಸದನಕ್ಕೆ ಬಂದು, ಅಲ್ಲಿ ಕೆಲವು ಹೊತ್ತು ವಿದ್ವಾಂಸರ ಕೂಡಲೂ, ಸಾಧುಗಳ ಕೂಡಲೂ ಮಾತಾಡಿ, ಅವರು ಯೋಗ್ಯರೆಂದು ಹೇಳಿದ ಜನರಿಗೆ ದಾನ ಕೊಟ್ಟು, ತನ್ನ ಅರಮನೆಗೆ ಹೊರಟು ಹೋಗುತ್ತಿದ್ದನು.

**ಅಕ್ಬರ**ನ ಸುಭೇದಾರನಾದ **ಮುನೀಮಖಾನ**ನು **ದಾವುದ**ನನ್ನು ಬಾಜೂರಿನ ನೆರೆಯಲ್ಲಿ ಮುರಿಬಡಿದನೆಂದು ಹಿಂದೆ ಬರೆದಿರುತ್ತೇವಷ್ಟೇ. ಆಗ **ತೋದರಮಲ್ಲ**ನ ಅಭಿಪ್ರಾಯದ ವಿರುದ್ಧವಾಗಿ **ಖಾನ**ನು **ದಾವುದ**ನಿಗೆ ದಯತೋರಿಸಿದನು. ಈ **ಖಾನ**ನಿಗೆ ೮೦ ವರ್ಷಗಳಾದ್ದರಿಂದ ಹುಚ್ಚುಮುಪ್ಪು ಕೂಡಿತ್ತೆನ್ನಬಹುದು. ಅವನ ಕಯ್ಕೆಳಗಿನವರು ಎಷ್ಟು ಹೇಳಿದರೂ ಕೇಳದೆ **ಬಂಗಾಲ**ದ ಹಳೆರಾಜಧಾನಿಯಾದ **ಗೌಡ** ಎಂಬ ಊರನ್ನು ತನ್ನ ರಾಜಧಾನಿಯಾಗಿ ಆರಿಸಿದನು. ತುಸು ದಿವಸಗಳಲ್ಲೇ ಕೆಟ್ಟ ಜ್ವರ ಹುಟ್ಟಿ, ಅವನೂ, ಎಷ್ಟೋಮಂದಿ ಸರದಾರರೂ, ದಂಡಿನವರೂ ಮಡಿದರು. ಉಳಿದವರು ಅಲ್ಲಿ ಇರಲಾರದೆ ತಮಗೆ ಸಿಕ್ಕಿದ ಸುಲಿಗೆಯನ್ನು ಸಂಗಡ ತೆಗೆದುಕೊಂಡು **ಡಿಲ್ಲಿ**ಯ ಹಾದಿಯನ್ನು ಹಿಡಿದರು. ಈ ಅರಾಜಕತ್ವವೇ

ಉತ್ತಮ ಸಂಧಿಯೆಂದೆಣಿಸಿ, **ದಾವುದ**ನು ದಂಗೆ ಎದ್ದು ಕಳಕೊಂಡ ರಾಜ್ಯವನ್ನೆಲ್ಲ ಹಿಡಿದು ಕೊಂಡನು.

ಈ ಅತ್ಯನರ್ಥಕರವಾದ ಸುದ್ದಿಯನ್ನು ಕೇಳಿ, **ಅಕ್ಬರ**ನು ಹೆದರದೆ **ಪಂಜಾಬಿ**ನ ಸುಭೇದಾರನಾದ **ಖಾನಜಹಾನ** (**ಹಸನ ಕುಲಿಖಾನ**)ನನ್ನು **ಬಂಗಾಲ**ದ ಸುಭೇದಾರನಾಗಿ ನೇಮಿಸಿ, **ದಾವುದ**ನನ್ನು ದಂಡಿಸಲಿಕ್ಕೆ ಕಳುಹಿದನು. ಅವನು ದಂಡೆತ್ತಿ ಬರುವಾಗ ಹಾದಿಯಲ್ಲಿ **ಬಂಗಾಲ**ದಿಂದ ತಿರುಗಿ ಬರುತಿದ್ದ ಜನರನ್ನು ಕಂಡು ಅವರನ್ನು ತಿರುಗಿ ಅಟ್ಟಿಕೊಂಡು ಹೋಗಿ, **ವಿಹಾರ**ದ ಸುಭೇದಾರನ ದಂಡನ್ನು ಕೂಡಿಕೊಂಡು **ದಾವುದ**ನನ್ನು ಎಡೆಬಿಡದೆ ಬೆನ್ನಟ್ಟಿ, **ರಾಜಮುಹಾಲ*** ದ ಹತ್ತರ ಅವನನ್ನು ನೆರೆ ಸೋಲಿಸಿ, ಸೆರೆಹಿಡಿದು, ಅವನ ರುಂಡವನ್ನು **ಡಿಲ್ಲಿ**ಗೆ ಕಳುಹಿದನು (೧೨ ಜುಲೈ ೧೫೭೬). ಇಲ್ಲಿಗೆ **ಬಂಗಾಲ**ದಲ್ಲಿ ೨೩೬ ವರ್ಷ (೧೩೪೦-೧೫೭೬) ನಡೆಯುತ್ತ ಬಂದ **ಅಫಗಾನ**ರ ಆಳಿಕೆಯು ಮುಗಿದಂತಾಯಿತು.

ಇದೇ ವರ್ಷ **ರಾಜಸ್ಥಾನ**ದಲ್ಲಿ ಗದ್ದಲವೆದ್ದಿತು. ಅದು ಹೇಗೆಂದರೆ.— **ಅಕ್ಬರ**ನು ಗಾದಿಯ ಮೇಲೆ ಕುಳಿತಾಗ **ಉದಯಸಿಂಗ**ನು **ಮೇವಾಡ**ದ ರಾಜನಾಗಿದ್ದನು. ಇವನು ಹೇಡಿಯಾದರೂ ಸ್ವಕುಲಾಭಿಮಾನಿಯಾಗಿದ್ದುದರಿಂದ ಉಳಿದ ರಾಜಪೂತ ಅರಸರಂತೆ ಮೊಗಲರೊಡನೆ ಶರೀರಸಂಬಂಧವನ್ನು ಮಾಡಲಿಕ್ಕೆ ಒಪ್ಪಿಕೊಳ್ಳಲಿಲ್ಲ. **ಜೋಧಪುರ**ದರಸನು ತನ್ನ ಮಗಳನ್ನು **ಅಕ್ಬರ**ನಿಗೆ ಕೊಟ್ಟುದರಿಂದ **ರಾಜಮಾನಸಿಂಗ**ನೂ ಅವನ ಮಗನೂ **ಅಕ್ಬರ**ನ ರಾಜ್ಯದಲ್ಲಿ ದೊಡ್ಡ ಅಧಿಕಾರಿಗಳಾದುದನ್ನು ಅವನು ಕಣ್ಣಾರೆ ನೋಡಿದ್ದರೂ, ಆ ಬಗೆಯಿಂದ ತನ್ನ ಕುಲದ ಗೌರವವನ್ನು ಕಡಿಮೆ ಮಾಡಿಕೊಳ್ಳಲಿಕ್ಕೆ ಅವನು ಮನಸ್ಸುಮಾಡಲಿಲ್ಲ.† ಆದುದರಿಂದ ಅವನು ಮೊಗಲರ ಕಡುಹಗೆಯಾದನು. **ಅಕ್ಬರ**ನ ದಂಡು **ಉದಯಸಿಂಗ**ನ ನಾಡನ್ನೊಳಸುಗ್ಗಿ, ಅವನ ರಾಜಧಾನಿಯನ್ನು ಹಿಡಿದುಕೊಂಡುದರಿಂದ

* ಇದು ಬಿಹಾರ-ಒರಿಸಾ ಪ್ರಾಂತದೊಳಗಿನ ಸಂತಾಳಪರಗಣೆ ಜಿಲ್ಲೆಯಲ್ಲಿ ಒಂದು ಸಣ್ಣ ಹಳ್ಳಿಯಾಗಿರುತ್ತದೆ.

† ಸ್ವಧರ್ಮೇ ನಿಧನಂ ಶ್ರೇಯಃ। ಪರಧರ್ಮೋ ಭಯಾವಹಃ॥

ಭಗವದ್ಗೀತೆ

(೧೫೭೮), ಅವನು **ರಾಜಪಿಂಪಳ**ದ ಗುಡ್ಡಗಳಿಗೆ ಓಡಿಹೋಗಿ, ಅಲ್ಲಿ ೧೫೭೨ರಲ್ಲಿ ಮರಣಹೊಂದಿದನು. (ಹಿಂದೆ ಪುಟ ೪೫ ನೋಡಿರಿ). ಅವನ ತರುವಾಯ ಅವನ ಮಗನಾದ **ಪ್ರತಾಪಸಿಂಗ**ನು ಪಟ್ಟವೇರಿದನು. ಇವನು ತನ್ನ ತಂದೆಯಂತೆ ಕುಲಾಭಿಮಾನಿಯೂ, ತನ್ನ ಅಜ್ಜನಂತೆ ಚತುರನೂ, ಧೈರ್ಯಶಾಲಿಯೂ, ಗಟ್ಟಿಗನೂ ಆಗಿದ್ದನು. ರಾಜ್ಯಕ್ಕೆ ಎರವಾಗಿಯೂ, ಸ್ವಜನರ ಸಹಾಯಕ್ಕೆ ಹೊರಗಾಗಿಯೂ, ದಂಡಾಗಲಿ ದುಡ್ಡು ಕಾಸಾಗಲಿ ಇಲ್ಲದೆಯೂ, ಈ **ರಾಣ**ನು ತನ್ನ ಮನೆತನದ ಗೌರವವನ್ನು ಸಾರ್ವಭೌಮನಾದ **ಅಕ್ಬರ**ನ ಸಿಟ್ಟಿನಿಂದ ಕಾಪಾಡುವುದಕ್ಕಾಗಿ ಮಾಡಿದ ಸಾಹಸಕ್ಕೆ ಣೆಯಿಲ್ಲ. ಇವನ ಧೈರ್ಯವೂ ಸಾಹಸವೂ ಸ್ವಾವಲಂಬನವೂ ಹೊಗಳ ತಕ್ಕಂತಹವೇ ಸರಿ. ಇವನ ಈ ಅವರ್ಣನೀಯವಾದ ಗುಣಗಳಿಗೆ ಮೆಚ್ಚಿ, ದೇವರು ಇವನನ್ನೂ ಇವನ ಸಂತತಿಯವರನ್ನೂ ಮೊಗಲರ ಹಾವಳಿಯಿಂದ ಕಾಪಾಡಿ, ಮತ್ತೆ ರಾಜ್ಯವನ್ನು ಕೊಟ್ಟು, ಇಂದಿನವರೆಗೂ ಸುರಕ್ಷಿತವಾಗಿಟ್ಟಿರುತ್ತಾನೆಂದರೂ ಅನ್ನಬಹುದು. (ಮುಂದೆ ೫ನೆಯ ಅಧ್ಯಾಯದಲ್ಲಿ **ಮೇವಾಡ**ದ ವರ್ಣನೆಯನ್ನು ನೋಡಿರಿ).

**ಉದಯಸಿಂಗ**ನು ಸತ್ತ ಬಳಿಕ **ಪ್ರತಾಪಸಿಂಗ**ನು **ಅರಾವಳಿ** ಗುಡ್ಡಗಳ ನಡುವೆ **ಕೋಮಲ್ಮೀರ್** ಅಥವಾ **ಕುಂಬಲ್ಗಡ** ಎಂಬಲ್ಲಿ ತನ್ನ ರಾಜ್ಯವನ್ನು ಸ್ಥಾಪಿಸಿ, ಮೊಗಲರ ದೇಶವನ್ನೊಳನುಗ್ಗಲಿಕ್ಕೆ ಸಿದ್ಧತೆಯನ್ನು ಮಾಡತೊಡಗಿದನು. ಈ ಸುದ್ದಿಯು ತಿಳಿದ ಕೂಡಲೆ **ಬಾದಷಹ**ನು ಅವನನ್ನು ದಂಡಿಸಲಿಕ್ಕೆ ತನ್ನ ನಂಬಿಗೆಯ ದಳವಾಯಿಯಾದ **ಮಾನಸಿಂಗ**ನನ್ನು ಕಳುಹಿದನು. ಎರಡು ದಂಡುಗಳೂ **ಹಳದಿಗಟ್ಟ**(೫೯)ದಲ್ಲಿ ಸೇರಿದವು (ಡಿಸೆಂಬರ್ ೧೫೭೬). ಈ ಕದನದಲ್ಲಿ **ಪ್ರತಾಪಸಿಂಗ**ನು ಸೋತು **ಅರಾವಳಿ** ಗುಡ್ಡಕ್ಕೆ ಓಡಿಹೋದನು. **ಬಾದಷಹ**ನು ಅವನನ್ನು ಬೆನ್ನಟ್ಟಲು ಒಂದು ದಂಡನ್ನು ಕಳುಹಿ, ತಾನು ೧೫೭೭-೭೮ರಲ್ಲಿ **ಮಾಳವಾ, ಗುಜರಾಥ್** ಪ್ರಾಂತಗಳ ಆಡಳಿತದಲ್ಲಿ ತಿದ್ದುಪಾಟುಮಾಡಿ **ಪಂಜಾಬಿ**ಗೆ ಹೋದನು. ಅಲ್ಲಿ ಕೆಲವು ದಿವಸ ನಿಂತು **ದಿಲ್ಲಿ**ಗೆ ತಿರುಗಿ ಬಂದು, **ಅಜಮೀರ**ಕ್ಕೆ ಹೋಗಿ, ಅಲ್ಲಿಂದ ದಿವಸಕ್ಕೆ ನೂರಕ್ಕಿಂತ ಹೆಚ್ಚು ಮೈಲು ಕುದುರೆಯ ಮೇಲೆ ಪ್ರಯಾಣಮಾಡಿ **ಫತ್ತೇಪುರಸಿಕ್ರಿ**ಗೆ ಬಂದು ಸೇರಿದನು.



ಪ್ರತಾಪಸಿಂಗ

೧೫೭೭ರಲ್ಲಿ **ಬಾದಷಹನು** ಟಂಕಸಾಲೆಖಾತೆಯ ವ್ಯವಸ್ಥೆಯನ್ನು ಮಾಡಿದನು. ಇಷ್ಟು ದಿವಸ **ಚೌಧರಿ** ಎಂಬ ಸಣ್ಣ ಅಧಿಕಾರಿಗಳ ಕಯ್ಯಲ್ಲಿ ಈ ಕೆಲಸವಿತ್ತು. ಅದು ಸರಿಯಾಗಿ ನಡೆಯದ್ದರಿಂದ **ಬಾದಷಹನು ಕಾಬೂಲ, ಲಾಹೋರ, ಡಿಲ್ಲಿ, ಜಾನಪುರ, ಗೌಡ, ಅಹಮ್ಮದಾಬಾದ** ಈ ೬ ಪಟ್ಟಣಗಳಲ್ಲಿ ಟಂಕಸಾಲೆಗಳನ್ನಿಡಿಸಿ ಅವುಗಳ ಮೇಲೆ ದೊಡ್ಡ ದೊಡ್ಡ ಅಧಿಕಾರಗಳನ್ನು ನೇಮಿಸಿ, ಬಂಗಾರದ ಮೊಹರುಗಳನ್ನೂ ಬೆಳ್ಳಿಯ ಚೌಕು ರೂಪಾಯಿಗಳನ್ನೂ ಹೊಡಿಸಲಾರಂಭಿಸಿದನು. ಈ ಚಿನ್ನಬೆಳ್ಳಿಯ ನಾಣ್ಯಗಳು ಆ ಕಾಲದ ಯುರೋಪ ಖಂಡದ ನಾಣ್ಯಗಳಿಗಿಂತ ತೂಕದಲ್ಲಿಯೂ, ಆಕಾರದಲ್ಲಿಯೂ, ಶುದ್ಧತೆಯಲ್ಲಿಯೂ ಮೇಲಾಗಿದ್ದವು.

ಮರುವರುಷ ಮೇ ತಿಂಗಳಲ್ಲಿ ಒಂದು ಸೋಜಿಗವಾದ ಸಂಗತಿಯು ಒದಗಿತು. ಅದಕ್ಕೂ ಮೊದಲು **ಬಾದಷಹನು ಪಂಜಾಬ**ಸೊಳಗೆ **ಭೀಡಾ** ಎಂಬ ಹಳ್ಳಿಯಲ್ಲಿ ಮುಕ್ಕಾಮು ಮಾಡಿದ್ದನು; ಬೇಟೆಯಾಡುವ ಉದ್ದೇಶದಿಂದ ೪೦, ೫೦ ಮೈಲುಗಳೊಳಗಿನ ಮಿಕಗಳನ್ನು ಹೊಡತರಲಿಕ್ಕೆ ನೂರಾರು ಜನ ಸಿಕಾರಿಗಳನ್ನು ನೇಮಿಸಿದ್ದನು. ಅಷ್ಟರೊಳಗೆ ಒಂದು ದಿನ ಗಿಡದ ಬುಡಕ್ಕೆ ಕುಳಿತಾಗ ಅವನ ಮನಸ್ಸಿನಲ್ಲಿ ಏನೋ ಒಂದು ವಿಚಾರ ಬಂದು ಅವನು ಬೇಟೆಯನ್ನು ಬಂದು ಮಾಡಲಿಕ್ಕೆ ಅಪ್ಪಣೆಯನ್ನಿತ್ತನು!! ಕೆಲವರು ಅವನಿಗೆ ದೇವರು ಸಾಕ್ಷಾತ್ಕಾರನಾದನೆಂದು ಹೇಳುತ್ತಾರೆ; ಮತ್ತೆ ಕೆಲವರು ಏನೋ ಮನೋವಿಕಾರವಾಯಿತೆಂದು ಬರೆಯುತ್ತಾರೆ. ಅದು ಹೇಗೇ ಇರಲಿ, ಆಗ ಅವನ ತಾಯಿಯು ಆವನ ಉಪಚಾರಕ್ಕೋಸ್ಕರ ಅಲ್ಲಿಗೆ ಬಂದಳು. ಅಲ್ಲಿಂದ **ಫತ್ತೇಪುರ ಸಿಕ್ರಿ**ಗೆ ಬಂದ ಬಳಿಕ **ಬಾದಷಹ**ನು ೧ ಕೋಟ ರೂಪಾಯಿಗಳನ್ನು ಫಕೀರರಿಗೂ, ಸಾಧುಗಳಿಗೂ ದಾನ ಮಾಡಿದನು. ಅವನು ತನ್ನ ತಲೆಯ ಕೂದಲು ತೆಗಿಸಿದ್ದರಿಂದ ಎಷ್ಟೋ ಮಂದಿ ಸರದಾರರು ಅವನ ಅನುಕರಣ ಮಾಡಿದರು.

ಇದೇ ಸಮಯದಲ್ಲಿ **ಬಾದಷಹ**ನು ಗೋವೆಗೆ ಕಳಿಸಿದ ಅಧಿಕಾರಿಯು ಯುರೋಪದಲ್ಲಿ ಆದ ಅಪರೂಪದ ಒಡವೆಗಳನ್ನೂ, ಅರಿವೆಗಳನ್ನೂ ತೆಗೆದುಕೊಂಡು ಬಂದನು. ಅವುಗಳನ್ನು ನೋಡಿ **ಬಾದಷಹ**ನು ಸಂತುಷ್ಟನಾದನು.

ಈ ಸಮಯುದಲ್ಲಿ **ಬಾದಷಹನ** ರಾಜ್ಯತೃಷ್ಣೆಯು ಕಡಮೆಯಾದ್ದರಿಂದ ಅವನ ಧರ್ಮತತ್ವಜಿಜ್ಞಾಸೆಯು ಹೆಚ್ಚಿತು. ಆದ್ದರಿಂದ ಮುಂದೆ ೩ ವರ್ಷ (೧೫೭೮ರಿಂದ ೧೫೮೦) ಧರ್ಮತತ್ವದ ವಿಚಾರದಲ್ಲೇ ಹೆಚ್ಚು ಕಾಲ ಕಳೆಯ ತೊಡಗಿದನು. ಮುಸಲ್ಮಾನರಾದ ಸಿಯಾ, ಸುನಿ, ಸುಫಿ ಮತದವರು ಕುರಾಣದ ಅರ್ಥವನ್ನು ಭಿನ್ನ ಭಿನ್ನವಾಗಿ ಮಾಡತೊಡಗಿದ್ದರಿಂದ ಮುಹಮ್ಮದೀಯ ಧರ್ಮದಲ್ಲಿದ್ದ ಅವನ ಶ್ರದ್ಧೆಯು ಕಡಮೆಯಾಗಲಾರಂಭಿಸಿತು. ಧರ್ಮತತ್ವವನ್ನು ತಿಳಿದುಕೊಳ್ಳಬೇಕೆಂಬ ಅವನ ಲವಲವಿಕೆಯು ದಿನದಿನಕ್ಕೆ ಹೆಚ್ಚತೊಡಗಿತು. ಆದ್ದರಿಂದ ಅವನು ಪಾರ್ಸಿ (ಜರೋಷ್ಟ್ರೀಯ) ಧರ್ಮಜ್ಞನಾದ **ದಸ್ತೂರ ಮೂಹ್ಯಾರ್ಜಿರಾಣಾ** ಎಂಬು

ವನನ್ನು **ಸುರತ** ಜಿಲ್ಲೆಯಲ್ಲಿದ್ದ **ನವಸರಿ** ಎಂಬ ಊರಿನಿಂದ ಕರಿಸಿಕೊಂಡನು. ಈ **ದಸ್ತೂರ**ನು ಒಂದು ವರ್ಷ **ಅಕ್ಬರ**ನ ಹತ್ತರ ನಿಂತು ತನ್ನ ಧರ್ಮದ ತತ್ವಗಳನ್ನು ತಿಳಿಸಿ ಮರಳಿ ತನ್ನ ಊರಿಗೆ ಹೋದನು (೧೫೭೯). ಅವನ ಉಪದೇಶದಿಂದ **ಬಾದಷಹ**ನು ಅರಮನೆಯಲ್ಲಿ ಅಗ್ನಿಯನ್ನಿಡಿಸಿದ್ದಲ್ಲದೆ, ತುಂಬಿದ ದರ್ಬಾರಿನಲ್ಲಿ ಸೂರ್ಯನಾರಾಯಣನಿಗೂ ಅಗ್ನಿದೇವನಿಗೂ ನಮಸ್ಕಾರ ಮಾಡತೊಡಗಿದನು. ಈ **ದಸ್ತೂರ**ನಿಗೆ **ಬಾದಷಹ**ನು ಸುಮಾರು ೩೦ ಕೂರಿಗೆ (೧೨೦ ಎಕರೆ) ಭೂಮಿಯನ್ನು ಇನಾಮಾಗಿ ಹಾಕಿಕೊಟ್ಟನು. (೧೫೮೦).

ತಾನೇ ಧರ್ಮದ ಮುಖ್ಯಸ್ಥನೆಂದು ತಿಳಿಸುವ ಉದ್ದೇಶದಿಂದ **ಬಾದಷಹ**ನು ಮುಲ್ಲಾನನ್ನು ಬಿಡಿಸಿ ಸ್ವತಃ ಪ್ರಾರ್ಥನೆ (ಕುತುಬೆ) ಯನ್ನು ಪ್ರತಿ ಶುಕ್ರವಾರ ಮಾಡಲಾರಂಭಿಸಿದನು (ಜೂನ ೧೫೭೯). ಇದನ್ನು ನೋಡಿ ಧರ್ಮಾಭಿಮಾನಿಗಳಾದ ಮುಸಲ್ಮಾನರು ಸಿಟ್ಟಾದರು. ಅದೇವರುಷ ಕ್ರೈಸ್ತಮತದ ತತ್ವವನ್ನು ತಿಳಿದುಕೊಳ್ಳಬೇಕೆಂದು ಒಬ್ಬ ರಾಯಭಾರಿಯನ್ನು ಗೋವೆಯಲ್ಲಿದ್ದ ಪೋರ್ತಗೀಸ ಅಧಿಪತಿಯ ಬಳಿಗೆ ಕಳುಹಿದನು. ಅವನು **ರಿಡೊಲ್ಫೊ ಆಕ್ವೆವಿಯೂ** ಎಂಬ ಕ್ರೈಸ್ತಧರ್ಮ ಪಂಡಿತನನ್ನು ಕರಕೊಂಡು **ಫತ್ತೇಪುರ ಸಿಕ್ರಿ**ಗೆ ಬಂದನು (ಫೇಬ್ರುವರಿ ೧೫೮೦). **ಬಾದಷಹ**ನು ಆ ಧರ್ಮೋಪದೇಶಕನಿಗೆ ಸ್ವಾಗತಮಾಡಿ ಆದರತೋರಿಸಿದ್ದಲ್ಲದೆ, ಕ್ರೈಸ್ತ ಧರ್ಮ ಗ್ರಂಥವಾದ **ಬಾಯಿಬಲ್ಲ**ನ್ನು ತುಂಬಿದ ದರ್ಬಾರಿನಲ್ಲಿ ತನ್ನ ತಲೆಯ ಮೇಲೆ ಇಟ್ಟುಕೊಂಡನು. ಇದಲ್ಲದೆ ಯೇಸುಕ್ರಿಸ್ತ ಮೇರಿ ಇವರ ಚಿತ್ರಗಳನ್ನು ತೆಗೆಯಲಿಕ್ಕೆ ದರ್ಬಾರಿನ ಚಿತ್ರಗಾರರಿಗೆ ಅಪ್ಪಣೆಯನ್ನಿತ್ತನು.

ಈ ಕಾಲಕ್ಕೆ ಮಹಮ್ಮದೀಯ ಧರ್ಮದಲ್ಲಿ **ಅಕ್ಬರ**ನ ಶ್ರದ್ಧೆಯು ತೀರ ಕಡಮೆಯಾಗಿತ್ತೆನ್ನ ಬಹುದು. ೧೫೭೯ರಲ್ಲಿ ಅವನೇ ಧರ್ಮದ ಮುಖ್ಯಸ್ಥನೆಂತಲೂ, ಕುರಾಣದ ಅರ್ಥದಲ್ಲಿ ಸಂಶಯ ಬಂದಾಗ ಅವನು ಮಾಡಿದ ತೀರ್ಪೇ ಕೊನೆಯ ನಿರ್ಣಯವೆಂತಲೂ ಎಲ್ಲ ಮುಸಲ್ಮಾನ ಧರ್ಮಾಧಿಕಾರಿಗಳು ಒಡಂಬಟ್ಟು ಅದರಂತೆ ಒಂದು ಅರ್ಜಿಯನ್ನು ಬರೆದು **ಬಾದಷಹ**ನಿಗೆ ಒಪ್ಪಿಸಿದರು. ಈ ಎಲ್ಲ ಕಾರಣಗಳಿಂದ ಮುಸಲ್ಮಾನರೊಳಗೆ ಅಸಂತೋಷವು ಹೆಚ್ಚಲಾರಂಭಿಸಿತು. ಆದ್ದರಿಂದ **ಬಾದಷಹ**ನು ಪ್ರಯಾ

ಣದಲ್ಲಿಯಾದರೂ ಪ್ರಾರ್ಥನೆಯನ್ನು ಮಾಡಲಿಕ್ಕೆ ಒಂದು ದೊಡ್ಡ ಡೇರೆಯನ್ನು ಮಾಡಿಸಿದ್ದಲ್ಲದೆ, ಒಬ್ಬ ಯಾತ್ರಿಕನು ಮಕ್ಕಾದಿಂದ ತಂದ ಒಂದು ಕಲ್ಲನ್ನು ಭಕ್ತಿ-ಪೂರ್ವಕವಾಗಿ ಸ್ವೀಕರಿಸಿದನು (೧೫೮೦).

೧೫೮೦ರಲ್ಲಿ ವರ್ಣಿಸಿ ಹೇಳುವಂತಹ ಸಂಗತಿಯಾವುದೂ ಸಂಭವಿಸಲಿಲ್ಲ. ದೇಶದಲ್ಲೆಲ್ಲ ಶಾಂತಿಯು ಹಬ್ಬಿತ್ತು. ಕಾಳಗದ ಗದ್ದಲವು ಹೆಚ್ಚಾಗಿರಲಿಲ್ಲ. ಆದುದರಿಂದ ಈ ವರುಷವು **ಬಾದಷಹ**ನಿಗೆ ಕೆಲಮಟ್ಟಿಗೆ ವಿರಾಮಕಾಲವೆಂದರೂ ಸಲ್ಲುವುದು. ಆದರೆ **ಅಕ್ಬರ**ನು ಮರುವರುಷ (೧೫೮೧) ಎರಡು ಮಹತ್ವದ ಏರ್ಪಾಡುಗಳನ್ನು ಮಾಡಿದನು. ಅವಾವವೆಂದರೆ:—(೧)**ಬಾದಷಹ**ನು ದೇಶದ ವ್ಯಾಪಾರಕ್ಕೆಡರು ತರುತ್ತಿದ್ದ **ತಂಘೂ**ಯೆಂಬ ಒಳನಾಡಿನ ಸುಂಕವನ್ನು ತೆಗೆದುಹಾಕಿದನು; (೨) **ಅಫಗನ್** ಕುಲದ ಅರಸರು ಹಿಂದೂ ಜನರ ಮೇಲೆ ಹಾಕಿದ್ದ **ಜಿಜಿಯಾ**ಯೆಂಬ ತಲೆತೆರಿಗೆಯನ್ನು ತಾನು ಗೆದ್ದ ಹೊಸ ಪ್ರಾಂತಗಳಲ್ಲಿ ತೆಗೆದುಹಾಕಿದನು. ಈ ಎರಡನೆಯ ಕಟ್ಟಳೆಯು ಜನರ ಮತದ ವಿಷಯದಲ್ಲಿ ಸರಕಾರದ ಪ್ರತಿಬಂಧವಿರಬಾರದೆಂಬ **ಅಕ್ಬರ**ನ ತತ್ವದ ಫಲವೇ ಸರಿ.

ಅತ್ತ **ಬಂಗಾಲ**ದಲ್ಲಿ ಬಂಡಾಯವೆದ್ದಿತು (ಜನವರಿ ೧೫೮೦). ಇದರ ಮುಖ್ಯ ಕಾರಣಗಳು ಮೂರು:—

(ಅ) **ಅಕ್ಬರ**ನ ಮುಲಕಿಯ ಅಧಿಕಾರಿಗಳು ಲಂಚಗುಳಿಗಳಾದ್ದರಿಂದ **ಜಹಗೀರ**ದಾರರ ಹಕ್ಕುಗಳನ್ನು ವಿಚಾರಿಸುವಾಗ ದುಡ್ಡು ತೆಗೆದುಕೊಂಡು ಎಷ್ಟೋ ಅನ್ಯಾಯದ ತೀರ್ಪುಗಳನ್ನು ಮಾಡಿದರು.

(ಇ) **ಬಂಗಾಲ**ದ ರಾಜಾಧಿಕಾರಿಗಳಿಗೆ ೧೦೦ಕ್ಕೆ ೧೦೦ ರೂಪಾಯಿ ಹೆಚ್ಚು ಸಂಬಳ ಕೊಡಬೇಕೆಂತಲೂ, ವಿಹಾರದವರಿಗೆ ೧೦೦ಕ್ಕೆ ೫೦ ಹೆಚ್ಚು ಕೊಡಬೇಕೆಂತಲೂ **ಬಾದಷಹ**ನು ಕಟ್ಟು ಮಾಡಿದ್ದರೂ **ಬಂಗಾಲ**ದ ಸರಕಾರದವರು ಆ ಹುಕುಮಿನಷ್ಟು ಸಂಬಳ ಕೊಡಲಿಲ್ಲ.

(ಉ) **ಅಕ್ಬರ**ನು ಮುಸಲ್ಮಾನ ಧರ್ಮ ಬಿಟ್ಟನೆಂಬ ಸುದ್ದಿಯು ದೇಶದಲ್ಲೆಲ್ಲ ಹರಡಿದ್ದರಿಂದ ಮುಸಲ್ಮಾನರು ಸಿಟ್ಟಿಗೆದ್ದು, ಅವನ ತಮ್ಮನೂ **ಕಾಬೂಲಿನ** ಸುಭೇದಾರನೂ ಆದ **ಮಿರ್ಜಾ ಮಹಮ್ಮದ ಹಕೀಮ**ನನ್ನು

**ಡಿಲ್ಲಿ**ಯ ಗಾದೆಯ ಮೇಲೆ ಕೂಡ್ರಿಸ ಬೇಕೆಂದು ಒಳಸಂಚು ಮಾಡ ತೊಡಗಿದರು. **ಜಾನ್‌ಪುರ**ದ ಕಾಜಿಯು ಈ ಒಳಸಂಚು ಮುಸಲ್ಮಾನ ಧರ್ಮಕ್ಕೆ ಸರಿಯಾದ್ದೆಂದು ಅಭಿಪ್ರಾಯಪಟ್ಟನು.

ಈ ಕಾರಣಗಳ ದೆಶೆಯಿಂದ **ಬಂಗಾಲ**ದ ಕೆಲವು ಅಧಿಕಾರಿಗಳು ಬಂಡಾಯವನ್ನೆಬ್ಬಿಸಿದರು. ಅಲ್ಲಿಯ ಸುಭೇದಾರನಿಗೂ ಅವನ ಕೆಳಗಿನ ದೊಡ್ಡ ಅಧಿಕಾರಿಗಳಿಗೂ ಮನಸ್ತಾಪವಿದ್ದುದರಿಂದ ಆ ಬೇಗೆಯನ್ನು ನಂದಿಸುವ ಯತ್ನವು ಸರಿಯಾಗಿ ನಡೆಯಲಿಲ್ಲ. ಅಷ್ಟರೊಳಗೆ ಸುಭೇದಾರನು ಅರಕ್ಷಿತವಾದ ತಾಂಡಕ್ಕೆ ಹೋದುದರಿಂದ ಬಂಡುಗಾರರು ಆ ಸಂಧಿಯನ್ನು ಸಾಧಿಸಿ ಅವನನ್ನು ಹಿಡಿದು ಕ್ರೂರತನದಿಂದ ಕೊಂದು ಸರಕಾರದ ಖಜಾನೆ-ಹತ್ಯಾರಗಳನ್ನು ತೆಗೆದುಕೊಂಡರು (ಎಪ್ರಿಲ್).

**ಬಂಗಾಲ**ದ ದಂಗೆಯ ಸುದ್ದಿಯನ್ನು ಕೇಳಿ **ಅಕ್ಬರ**ನು ಚಿಂತೆಗೀಡಾದನು. ಏಕೆಂದರೆ **ಮಿರ್ಜಾ ಹಕೀಮ**ನು ಬಂಡುಗಾರರಿಗೆ ನೆರವಾಗುವ ಉದ್ದೇಶದಿಂದ ದಂಡಿನೊಡನೆ **ಕಾಬೂಲಿ**ನಿಂದ ಹೊರಟರುತ್ತಾರೆಂಬ ಸುದ್ದಿಯು **ಬಾದಷಹ**ನಿಗೆ ಈ ಮೊದಲೇ ತಲುಪಿತ್ತು. ಆದ್ದರಿಂದ ಅವನು ರಾಜಧಾನಿಯನ್ನು ಬಿಡದೆ **ರಾಜಾ ತೋಡರಮಲ್ಲ** ಮೊದಲಾದ ಅಧಿಕಾರಿಗಳನ್ನು **ಬಂಗಾಲ**ಕ್ಕೆ ಕಳುಹಿ, **ಮಿರ್ಜಾ ರಿಜೀಜಕೋಕಾ** ಎಂಬ ಶೂರ ಪುರುಷನನ್ನು **ಬಂಗಾಲ**ದ ಸುಭೇದಾರನನ್ನು ಮಾಡಿ ಅವನ ನೆರವಿಗೆ **ಶಹಾಬಾಜಖಾನ**ನೆಂಬ ಒಬ್ಬ ಕಲಿಯನ್ನು ಕಳುಹಿದನು. ಈ **ಖಾನ**ನು ಹೋಗಿ ಬಂಡುಗಾರರನ್ನು **ಅಯೋಧ್ಯಾ-ಜಾನ್‌ಪುರ**ಗಳ ನಡುವೆ ಸದೆಬಡಿದನು (ಜನವರಿ ೧೫೮೧). ಮುಂದೆ ೩ ವರ್ಷಗಳಲ್ಲಿ ಈ ಬಂಡಾಯವು ಪೂರ್ಣವಾಗಿ ಅಡಗಿತು, ದ್ರೋಹವನ್ನು ಉಪದೇಶ ಮಾಡಿದ **ಬಂಗಾಲ-ಜಾನ್‌ಪುರ**ಗಳ ಕಾಜಿಗಳನ್ನು **ಅಕ್ಬರ**ನು ನದಿಯಲ್ಲಿ ಮುಳಗಿಸಿ ಕೊಲ್ಲಿಸಿದನು.

**ಬಂಗಾಲ**ದ ಅಧಿಕಾರಿಗಳು **ಕಾಬೂಲಿ**ನ ಸುಭೇದಾರನಾದ **ಮಿರ್ಜಾ ಮಹಮ್ಮದ ಹಕೀಮ**ನೊಡನೆ ನಡಿಸಿದ ಒಳಸಂಚಿನ ಮೂಲಕವಾಗಿ **ಅಕ್ಬರ**ನ ಮನಸ್ಸು ೧೫೮೦ರಲ್ಲಿ ಬಹಳ ಅಸ್ವಸ್ಥವಾಗಿತ್ತೆಂದು ಹಿಂದೆ ಹೇಳಿರುತ್ತೇವಷ್ಟೇ. ಈ **ಮಿರ್ಜ**ನು ೧೫೦೦೦ ರಾಹುತರೊಡನೆ **ಪಂಜಾಬ**ನ್ನು ಒಳನುಗ್ಗಿದನೆಂಬ ಸುದ್ದಿಯನ್ನು ಕೇಳಿ **ಅಕ್ಬರ**ನು ತಾನೇ ದೊಡ್ಡ ದಂಡಿ

ನೊಡನೆ ಹೊರಟನು (ಫೇಬ್ರುವರಿ ೧೫೮೧); ಬಂಡುಗಾರರ ಸಂಚಿನೊಳಗೆ ಸೇರಿದವನೆಂದು ಸಂಶಯ ಬಂದ ಮುತ್ತು ತನ್ನ ಮುಖ್ಯ ಫಡನೀಸನಾದ **ಖ್ವಾಜಾಶಹಾಮನಸೂರ**ನನ್ನು ತನ್ನ ಸಂಗಡಲೆ ಒಯ್ದನು. **ಬಾದಷಹ**ನ ಪಾಳೆಯವು **ಸೋನಪತ**ದ ನೆರೆಯಲ್ಲಿರುವಾಗ ಈ ಫಡನೀಸನಿಗೆ **ಕಾಬೂಲಿ**ನಿಂದ ಬಂದ ಪತ್ರಗಳು ೩ನೆಯ ಸಾರೆ **ಅಕ್ಬರ**ನ ಕಯ್ಸೇರಿದವು. ಎಷ್ಟು ದಯೆ ತೋರಿಸಿದರೂ **ಶಹಾಮನಸೂರ**ನು ತನ್ನ ದ್ರೋಹದ ವಿಚಾರಗಳನ್ನು ಬಿಡುವುದಿಲ್ಲೆಂದು ಮನಗಂಡು **ಬಾದಷಹ**ನು **ಶಹಾಬಾದಿ**ನ ನೆರೆಯಲ್ಲಿ ಅವನನ್ನು ಗಲ್ಲಿಗೆ ಹಾಕಿಸಿದನು. ಬಳಿಕ **ಬಾದಷಹ**ನು **ಸರಹಿಂದ**ದ ಮಹಾಲಾದ **ಪಾಯಲ್** ಎಂಬ ಊರಿನಲ್ಲಿರುವಾಗ **ಮಿರ್ಜಾ ಹಕೀಮ**ನು **ಪಂಜಾಬ**ವನ್ನು ಬಿಟ್ಟು ತಿರುಗಿ ಹೋದನೆಂಬ ಆನಂದವಾರ್ತೆಯು ಬಂತು. ಅದರಿಂದ **ಅಕ್ಬರ**ನಿಗೆ ತುಸು ಸಮಾಧಾನವಾಯಿತು. ಆದರೂ **ಅಕ್ಬರ**ನು ಉಬ್ಬದೆ **ಮಿರ್ಜಾಹಕೀಮ**ನನ್ನು ಬೆನ್ನಟ್ಟಬೇಕೆಂದು ನಿಶ್ಚಯಿಸಿ, ಸತ್ಲಜ, ಬಿಯಾಸ, ರವಿ, ಚಿನಾಬ ಈ ನಾಲ್ಕು ನದಿಗಳನ್ನು ಕ್ರಮದಿಂದ ದಾಟಿ **ರೊಹತಾಸ** ಮಾರ್ಗದಿಂದ ಸಿಂಧು ನದಿಗೆ ಬಂದು ಮುಟ್ಟಿದನು. ಆ ನದಿಯು ಆಗ ತುಂಬ ಹರಿಯುತ್ತಿತ್ತು. ಎಷ್ಟೋ ಮಂದಿ ಸರದಾರರು ಮುಂದೆ ಹೋಗಲಿಕ್ಕೆ ವಿಮುಖರಾಗಿದ್ದರು. ಅವನ ಸಂಗಡಲಿದ್ದ **ಮೊನ್ಸಿರೇಟ** ಪಾದರಿಯಾದರೂ **ಮಿರ್ಜಾಹಕೀಮ**ನನ್ನು ಪೂರ್ಣವಾಗಿ ನಾಶ ಮಾಡಕೂಡದೆಂದು ಸಲ್ಲೆಕೊಟ್ಟನು. ಆದರೂ ಸಕಾಲದ ಪೇರ್ಮೆಯನ್ನರಿತ **ಅಕ್ಬರ**ನು ಮುಂದರಿಸಲಿಕ್ಕೆ ಅನುವಾಗಿ, ತನ್ನ ಮಗನಾದ **ಮುರಾದ**ನನ್ನು ದಂಡಿನೊಡನೆ ಮುಂದೆ ಕಳುಹಿ, ತಾನೂ ಸಿಂಧುವನ್ನು ದಾಟಿದನು (೧೨ ಜುಲೈ). ಈ ಸುದ್ದಿಯನ್ನು ಕೇಳಿ **ಮಿರ್ಜಾಹಕೀಮ**ನು **ಕಾಬೂಲ**ನ್ನು ಬಿಟ್ಟು ಓಡಿಹೋದ್ದರಿಂದ ರಾಜಧಾನಿಯು ಅನಾಯಸವಾಗಿ ಮೊಗಲರ ಕಯ್ಸೇರಿತು (ಆಗಸ್ಟ). **ಅಕ್ಬರ**ನು ಸಂತುಷ್ಟನಾಗಿ ೩೦೦೦ ಮಂದಿ ಬಡವರಿಗೆ ದಾನಕೊಟ್ಟು, **ಕಾಬೂಲು** ಪ್ರಾಂತವನ್ನು ತನ್ನ ತಂಗಿಗೆ ಒಪ್ಪಿಸಿ, ತಿರುಗಿ ಹೊರಟು **ರಾಜಾಮಾನಸಿಂಗ**ನನ್ನು **ಸಿಂಧ** ಪ್ರಾಂತದ ಸುಭೇದಾರನಾಗಿ ನೇಮಿಸಿ ಸುರಕ್ಷಿತವಾಗಿ ತನ್ನ ರಾಜಧಾನಿಗೆ ಬಂದು ಮುಟ್ಟಿದನು (೧ ದಶಂಬರ ೧೫೮೧). ಈ ದಂಡಯಾತ್ರೆಯಲ್ಲಿ **ಬಾದಷಹ**

ನಿಗೆ ಪೂರ್ಣ ಯಶಸ್ಸು ಬಂದುದರಿಂದ ಅವನು ನಿರ್ಭಯನಾಗಿ ವೇದ ಧರ್ಮಾಚರಣೆಯನ್ನು ಹೆಚ್ಚು ಹೆಚ್ಚು ಕಯ್ಕೊಳ್ಳ ತೊಡಗಿದನೆಂದು **ವಿನ್ಸೆಂಟ ಸ್ಮಿಥ್ ಸಾಹೇಬ**ರು ತಮ್ಮ **ಅಕ್ಬರ**ಚರಿತ್ರದಲ್ಲಿ ಬರೆಯುತ್ತಾರೆ.

ಈ ಕಾಲಕ್ಕೆ ಅರಬಿ ಸಮುದ್ರವು **ಗೋವೆ**ಯ ಪೋರ್ತುಗೀಸರ ವಶದಲ್ಲಿತ್ತು. ಏಕೆಂದರೆ **ಅಕ್ಬರ**ನ ಹಡಗುಪಡೆಯು ಪೋರ್ತುಗೀಸರನ್ನು ದಂಡಿಸುವಷ್ಟು ಬಲಿಷ್ಟವಾಗಿರಲಿಲ್ಲ. ಆದ್ದರಿಂದ ಪೋರ್ತುಗೀಸರು ತಮಗೆ ವಿಪುಲವಾಗಿ ದುಡ್ಡುಕೊಟ್ಟು ಅಪ್ಪಣೆಯನ್ನು ತೆಗೆದುಕೊಳ್ಳದೆ ಹೋಗುವ **ಮಕ್ಕಾ** ಯಾತ್ರಿಕರ ಹಡಗುಗಳನ್ನು ಹಿಡಿಯುತ್ತಿದ್ದರು. ಆದ ಕಾರಣ ಮೊಗಲ್ ದಂಡಿಗೂ ಪೋರ್ತುಗೀಸರಿಗೂ ಆಗಿಂದಾಗ ಚಕಮುಕಿ (ಸಣ್ಣ ಪುಟ್ಟ ಜಗಳ)ಗಳಾಗುತ್ತಿದ್ದವು. ಒಮ್ಮೆ **ಬಾದಷಹ**ನೇ ಹುಕುಮುಕಳಿಸಿ ಇಂತಹದೊಂದು ಜಗಳವನ್ನು ನಿಲ್ಲಿಸಿದ್ದನು. ಈ ಸಂಬಂಧದಿಂದ **ಅಕ್ಬರ**ನು **ಗೋವೆ**ಯವರ ಕೂಡ ಕೃತ್ರಿಮ ಭಾವದಿಂದ ನಡೆಯುತ್ತಿದ್ದನೆಂದು **ಸ್ಮಿಥ್ ಸಾಹೇಬ**ರು ಅವನ ಮೇಲೆ ಆರೋಪ ಹೊರಿಸುತ್ತಾರೆ. ಈ ಅಭಿಪ್ರಾಯವು ಪಾದರಿಗಳ ಲೇಖಗಳನ್ನು ಅವಲಂಬಿಸಿರುವುದರಿಂದ ಇದರ ನಿಜತ್ವದ ಬಗ್ಗೆ ಸಂಶಯ ಬರುತ್ತದೆ.

ಇದೇ ಸಮಯದಲ್ಲಿ **ಬಾದಷಹ**ನು **ಸ್ಪೇನ**ದ **ಬಾದಷಹ**ನ ಕಡೆಗೆ ತನ್ನ ನಿಯೋಗಿಗಳನ್ನು ಕಳಿಸುವ ವಿಚಾರ ಮಾಡಿದನು. ಇಬ್ಬರು ಸರದಾರರೂ ಒಬ್ಬ ಪಾದರಿಯೂ **ಗೋವೆ**ಯ ವರೆಗೆ ಹೋದರು. ಮುಂದೆ ಹೋಗಲಿಕ್ಕೆ ಅಲ್ಲಿ ಹಡಗು ದೊರೆಯದ್ದರಿಂದ ಆ ವಿಚಾರವು ಅಷ್ಟಕ್ಕೆ ನಿಂತಿತು (೧೫೮೨). **ಅಕ್ಬರ**ನ ಬಳಿಯಲ್ಲಿದ್ದ **ಆಕ್ವೇವ್ಹಿಯಾ** ಎಂಬ ಪಾದರಿಯು ಮರು ವರುಷ **ಗೋವೆ**ಗೆ ತಿರುಗಿ ಹೋಗಿ ತನ್ನ ಉದ್ದೇಶವು ನಿಷ್ಫಲವಾಯಿತೆಂದು ಉಸರುಗರೆದನು.

**ಗುಜರಾಥ**ದ ಮಾಜಿ ಅರಸನಾದ **ಮುಜಫರಶಹ**ನು ಕಾವಲುಗಾರರಿಂದ ತಪ್ಪಿಸಿಕೊಂಡು ಕೆಲರಾಜದ್ರೋಹಿಗಳನ್ನು ಕೂಡಿ ದಂಡು ಕಟ್ಟಿಕೊಂಡು ಬಂದು, **ಅಹಮ್ಮದಾಬಾದ ಬಡೋಚ**ಗಳನ್ನು ಹಿಡಿದುಕೊಂಡನು (ದಶಂಬರ ೧೫೮೩). ಈ ಭಯಂಕರವಾದ ಸುದ್ದಿಯು ಬಂದ ಕೂಡಲೆ **ಅಕ್ಬರ**ನು **ಮಿರ್ಜಾಖಾನ** (**ಬೈರಾಮ್‌ಖಾನ**ನ ಮಗ)ನನ್ನು

**ಗುಜರಾಥ**ದ ಸುಭೇದಾರನಾಗಿ ನೇಮಿಸಿದನು. ಅವನು **ಮುಜಫರಶಹ**ನನ್ನು **ಅಹಮ್ಮದಾಬಾದಿ**ನ ನೆರೆಯಲ್ಲಿದ್ದ **ಸಾರಬೇಜ** ಎಂಬಲ್ಲಿಯೂ, **ರಾಜಪಿಂತಳ**ದಲ್ಲಿದ್ದ **ನಾಂದೋದ** ಎಂಬಲ್ಲಿಯೂ ಪೂರ್ಣವಾಗಿ ಸೋಲಿಸಿ ಓಡಿಸಿದ್ದರಿಂದ **ಬಾದಷಹ**ನು ಸಂತುಷ್ಟನಾಗಿ ಅವನಿಗೆ **ಖಾನಖಾನ**ನೆಂಬ ಬಿರುದನ್ನು ಕೊಟ್ಟನು (೧೫೮೪). **ಮುಜಫರಶಹ**ನು ಮುಂದೆ ಗತ್ಯಂತರಕಾಣದೆ ಆತ್ಮಹತ್ಯಮಾಡಿಕೊಂಡನು (೧೫೯೧).

ಅದೇ ವರುಷ **ಬಾದಷಹ**ನು **ಜಯಪುರ**ದ ರಾಜಾ **ಭಗವಾನದಾಸ**ನ ಮಗಳೂ, **ರಾಜಾಮಾನಸಿಂಗ**ನ ದತ್ತು ತಂಗಿಯೂ ಆದ **ಮಾನಬಾಯಿ**ಯೊಡನೆ ತನ್ನ ಹಿರಿಮಗನಾದ **ಸಲೀಮ**ನ ಮದುವೆಯನ್ನು ಬಹು ಸಂಭ್ರಮದಿಂದ **ಫತ್ತೇಪುರ ಸಿಕ್ರಿ**ಯಲ್ಲಿ ಮಾಡಿದನು (ಫೇಬ್ರುವರಿ ೧೫೮೪). ಆಕೆಗೆ **ಶಹಾಬೇಗಮ್ಮ**ಂದು ಹೆಸರಿಟ್ಟರು.

ತನ್ನ ತಮ್ಮನಾದ **ಹಕೀಮ**ನು **ಕಾಬೂಲ**ಲ್ಲಿ ಸತ್ತ ಸುದ್ದಿಯು **ಅಕ್ಬರ**ನಿಗೆ ೧೫೮೫ರಲ್ಲಿ ಬಂತು. ಆಗ ಅಲ್ಲಿ ಗದ್ದಲವೆದ್ದಿತು. **ಯುಜ್‌ಬೆಕ್ಕ**ರು **ಬದಕ್ಷಾ**ನ ಪ್ರಾಂತವನ್ನು ಹಾಳುಮಾಡಿ **ಕಾಬೂಲಿ**ನ ಮೇಲೆ ನುಗ್ಗಿ ಬರುತ್ತಿದ್ದರು. ಈ ಸುದ್ದಿಯನ್ನು ಕೇಳಿದ ಕೂಡಲೆ **ಬಾದಷಹ**ನು ತಡಮಾಡದೆ **ಅಟೆಕ್ಕಿ**(೬೦)ನ ವರೆಗೆ ಬಂದು, ಅಲ್ಲಿ ತನ್ನ ದಂಡನ್ನು ಮೂರು ಭಾಗಗಳಾಗಿ ಮಾಡಿ, **ಕಾಶ್ಮೀರ** ಪ್ರಾಂತವನ್ನು ಹಿಡಿದುಕೊಳ್ಳಲಿಕ್ಕೆ ಒಂದು ಭಾಗದೊಡನೆ **ಭಗವಾನ್‌ದಾಸ**ನನ್ನು ಕಳುಹಿದನು. **ಕಾಶ್ಮೀರ**ದ ಸುಲ್ತಾನನು ತಾನೇ ಬಂದು **ಬಾದಷಹ**ನನ್ನು ಓಲೈಸಲಿಲ್ಲೆಂಬುದೇ ಈ ದಂಡಯಾತ್ರೆಯ ಮುಖ್ಯ ಕಾರಣವು. ಉಳಿದ ಎರಡು ಭಾಗಗಳಿಗೆ **ಬಲೂಚಿಯ**ರನ್ನೂ **ಸ್ವಾಟ್ಟ**ರನ್ನೂ (**ಯುಸಫ್‌ಜಿಯ**ರನ್ನೂ) ದಂಡಿಸಬೇಕೆಂದು ಅಪ್ಪಣೆಯನ್ನು ಕೊಟ್ಟನು. ಆದರೆ **ಸ್ವಾಟ್ಟ**ರು ಮೊಗಲರ ಆಟ ನಡೆಯಗೊಡಲಿಲ್ಲ. ಆದುದರಿಂದ ಅವರನ್ನೆದುರಿಸಲಿಕ್ಕೆ **ಅಕ್ಬರ**ನು ತನ್ನ ಪ್ರೀತಿಯ ದಳವಾಯಿಯಾದ **ಬೀರಬಲ್ಲ** ರಾಜನನ್ನು ೮೦೦೦ ಸೈನ್ಯದೊಡನೆ ಕಳುಹಿದನು. ಇವನೂ ಸಹ ದೈವಯೋಗದಿಂದ ಸೋಲಿಗೆ ಗುರಿಯಾಗಿ ರಣದಲ್ಲಿ ಮಡಿದನು. ಇವನು **ರಹಸ್ಯ**ದ ಗೆಳೆಯನಾದ್ದರಿಂದ ಇವನ ಸಾವಿನ ಸುದ್ದಿಯನ್ನು ಕೇಳಿ **ಬಾದಷಹ**ನು ನೊಂದು ಬೆಂದು

**ತೋಡರಮಲ್ಲ**ನನ್ನೂ, **ಮಾನಸಿಂಗರಾಜ**ನನ್ನೂ ದೊಡ್ಡ ದಂಡಿನೊಡನೆ ಪುನಃ ಕಳುಹಿದನು.* ಈ ಶೂರರು ಯುಕ್ತಿಯಿಂದಲೂ ಎಚ್ಚರದಿಂದಲೂ ಕಾದಿ **ಯುಸಫ್‌ಜಿಯ**ರನ್ನು ಪೂರ್ಣವಾಗಿ ಸೋಲಿಸಿ ಬಿಟ್ಟರು. ಬಳಿಕ **ಬಾದಷಹ**ನು **ಮಾನಸಿಂಗ**ನನ್ನು **ಕಾಬೂಲಿ**ನ ಸುಭೇದಾರನನ್ನಾಗಿ ಮಾಡಿ ತಾನು **ಲಾಹೋರಿ**ಗೆ ತೆರಳಿದನು; ಮುಂದೆ **ಕಾಬೂಲಿ**ಯರು ತಮಗೆ ಮುಸಲ್ಮಾನ ಜಾತಿಯ ಅರಸನು ಬೇಕೆಂದು ಬೇಡಿದುದರಿಂದ, **ಮಾನಸಿಂಗ**ನನ್ನು **ಬಂಗಾಲ**ದ ಸುಭೇದಾರನನ್ನು ಮಾಡಿ, **ಕಾಬೂಲಿ**ಗೆ ಒಬ್ಬ ಮುಸಲ್ಮಾನ ಸರದಾರನನ್ನು ನಿಯಮಿಸಿದನು (೧೫೮೭).

ಇತ್ತ **ಕಾಶ್ಮೀರ**ಕ್ಕೆ ಕಳುಹಿದ ದಂಡಯಾತ್ರೆಯು ನಿಷ್ಫಲವಾಯಿತು. ಆಗ **ಕಾಶ್ಮೀರ**ದಲ್ಲಿ ಒಬ್ಬ ಮುಸಲ್ಮಾನನು ಆಳುತ್ತಿದ್ದನು. ಅವನ ದಂಡಾಳುಗಳು ಮೊಗಲರನ್ನು ಅಡ್ಡಗಟ್ಟಿದರು. ಅಷ್ಟರಲ್ಲಿ **ಯುಸಫ್‌ಜಿಯ**ರು ಮೊಗಲರನ್ನು ಸೋಲಿಸಿದರೆಂಬ ಸುದ್ದಿಯು ತಿಳಿದುದರಿಂದ ಮೊಗಲರ ದಳವಾಯಿಗಳ ಕಯ್ಕಾಲುಗಳು ತಣ್ಣಗಾದವು. ಆದುದರಿಂದ ಅವರು ಹೆಚ್ಚಿನ ಸಾಹಸಕ್ಕೆ ಹೋಗದೆ **ಕಾಶ್ಮೀರ**ದ ಅರಸನೊಡನೆ ಒಡಂಬಡಿಕೆಯನ್ನು ಮಾಡಿಕೊಂಡು ಮರಳಿ ಬಂದರು. ಇವರು ಮಾಡಿದುದು ಸರಿದೋರದುದರಿಂದ **ಅಕ್ಬರ**ನು ಇವರಿಗೆ ಕಾಣಿಸಿಕೊಳ್ಳಲಿಲ್ಲ. ಆದರೆ ಆತನು ದೀರ್ಘಕೋಪಿಯಲ್ಲದುದರಿಂದ ಕೆಲವು ದಿವಸಗಳ ಮೇಲೆ ಅವರನ್ನು ಕ್ಷಮಿಸಿ ೧೫೮೭ರಲ್ಲಿ ಮತ್ತೊಂದು ದಂಡನ್ನು **ಕಾಶ್ಮೀರ**ಕ್ಕೆ ಕಳುಹಿದನು. ಆಗ ಅಲ್ಲಿ ಒಂದು ದಂಗೆಯೆದ್ದುದರಿಂದ ಮೊಗಲರ ಬಯಕೆಯು ಅನಾಯಾಸ

---

* ರಾಜಾಬೀರಬಲ್ಲನು ಒಬ್ಬ ಬಡ ಬ್ರಾಹ್ಮಣನ ಮಗನಾಗಿದ್ದನು. ಇವನು ೧೫೨೮ರಲ್ಲಿ ಕಾಲ್ಪಿ ಎಂಬ ಗ್ರಾಮದಲ್ಲಿ ಹುಟ್ಟಿದನು. ಇವನ ಮೊದಲಿನ ಹೆಸರು ಮಹೇಶದಾಸ. ಮೊಟ್ಟ ಮೊದಲು ಇವನು ರಾಜಾಭಗವಾನ್ದಾಸನ ಊಳಿಗದಲ್ಲಿದ್ದನು. ಆ ರಾಜನು ಇವನನ್ನು ಅಕ್ಬರನ ಕಡೆಗೆ ಕಳುಹಿದನು. ಇವನು ಗಾಯಕನೂ, ಕವಿಯೂ, ಕಥೆಗಾರನೂ, ಧೂರ್ತನೂ, ಪ್ರಸಂಗಾವಧಾನಿಯೂ ಆದ್ದರಿಂದ ಬಾದಷಹನಿಗೆ ಅತಿಪ್ರಿಯನಾದನು. ಇವನಿಗೆ ಕವಿರಾಜನೆಂಬ ಬಿರುದು ದೊರೆದಿತ್ತು. ಬುಂದೇಲಖಂಡದಲ್ಲಿದ್ದ ಕಾಲಂಜರ ಎಂಬ ಊರು ಇವನ ಜಹಗೀರಾಗಿತ್ತು. ಇವನು ಬರೆದ ಗ್ರಂಥಗಳಾವವೂ ಇಲ್ಲದಿದ್ದರೂ ಅಕ್ಬರ ಬೀರಬಲ್ಲರ ಕಥೆಗಳು ಹೇರಳವಾಗಿರುತ್ತವೆ. ಅಕ್ಬರನ ಹೊಸ ಧರ್ಮಕ್ಕೆ ಸೇರಿದವರೊಳಗೆ ಇವನೊಬ್ಬನೇ ಬ್ರಾಹ್ಮಣನಾಗಿದ್ದನು.

ವಾಗಿ ಕಯ್ಗೂಡಿತು ಮತ್ತು **ಕಾಶ್ಮೀರ** ಪ್ರಾಂತವು **ಕಾಬೂಲು** ಸುಭೇಗೆ ಸೇರಿತು (೧೫೮೭).*

೧೫೮೮ರಲ್ಲಿ **ಅಕ್ಬರನು ಸಿಂಧು** ಪ್ರಾಂತದ ದಕ್ಷಿಣ ಭಾಗವನ್ನು ತನ್ನ ಕಯ್ವಶಮಾಡಿಕೊಂಡು, ಮರುವರುಷ **ಕಾಶ್ಮೀರ**ಕ್ಕೆ ಹೋಗಿ, ಅಲ್ಲಿ ಕೆಲವು ದಿವಸ ನಿಂತು, ಮುಂದೆ **ಕಾಬೂಲಿ**ಗೆ ಹೋದನು. ಅಲ್ಲಿರುವಾಗ **ತೋಡರ ಮಲ್ಲ** ರಾಜನೂ **ಭಗವಾನ್‌ದಾಸ**ನೂ ತೀರಿಹೋದರೆಂಬ ಖೇದಕರವಾದ ವಾರ್ತೆಯು ಬಂತು (೧೫೮೯ ನವಂಬರ್ ೧೦). ಅವನು ಅದನ್ನು ಕೇಳಿ ಬಹಳ ವ್ಯಸನಪಟ್ಟು **ಗುಜರಾಥಿ**ಗೂ **ಜಾನ್‌ಪುರ**ಕ್ಕೂ ಬೇರೆ ಸುಭೇದಾರರನ್ನು ನಿಯಮಿಸಿ, **ಲಾಹೋರಿ**ಗೆ ತಿರುಗಿ ಬಂದನು (೧೫೯೦). ಆಗ **ಗುಜರಾಥಿ**ನ ಸುಭೇದಾರನಿಗೂ **ಕಚ್ಛ, ಕಾಠೇವಾಡ** ಪ್ರಾಂತಗಳ ಅರಸರಿಗೂ ಜಗಳ ನಡೆದುದರಿಂದ ಆ ಎರಡು ನಾಡುಗಳನ್ನೂ ಮೊಗಲರ ರಾಜ್ಯಕ್ಕೆ ಸೇರಿಸಿಕೊಳ್ಳಲು ಅನುಕೂಲವಾಯಿತು.

**ಅಕ್ಬರನು ಲಾಹೋರಿ**ನಲ್ಲೆರಡು ವರ್ಷಕಾಲ ನಿಲ್ಲಬೇಕಾಯಿತು. ಏಕಂದರೆ ಆ ಕಾಲದಲ್ಲಿ **ಸಿಂಧು** ಪ್ರಾಂತದಲ್ಲಿ ಶಾಂತತೆ ಇರಲಿಲ್ಲ. ಅಲ್ಲಿ ಶಾಂತಿಯನ್ನು ಉಂಟುಮಾಡುವಷ್ಟರೊಳಗೆ **ಕಾಶ್ಮೀರ**ದಲ್ಲಿ ದಂಗೆಯೆದ್ದಿತು. ಆದುದರಿಂದ **ಬಾದಷಹ**ನು ತಾನೇ ದಂಡಿನೊಡನೆ ಕಾಶ್ಮೀರಕ್ಕೆ ಹೋಗಿ ಅಲ್ಲಿನ ಬಂಡುಗಾರರನ್ನು ಶಿಕ್ಷಿಸಿ **ಶ್ರೀನಗರ**ದಲ್ಲಿ (೬೨) ೮ ದಿವಸ ನಿಂತು, ಮರಳಿ **ಲಾಹೋರಿ**ಗೆ ಬಂದನು. ಕೂಡಲೆ **ಬಂಗಾಲ** ಸುಭೇದಾರನಾದ **ಮಾನಸಿಂಗರಾಜನು ಒರಿಸ್ಸಾ** ಪ್ರಾಂತವನ್ನು ಗೆದ್ದು **ಬಾದಷಹ**ನಿಗೆ ೧೨೦ ಆನೆಗಳನ್ನು ಕಾಣಿಕೆಯಾಗಿ ಕಳುಹಿದುದರಿಂದ **ಅಕ್ಬರ**ನಿಗೆ ಬಹಳ ಸಂತೋಷವಾಯಿತು (೧೫೯೨).

ಈ ಕಾಲದ ವರೆಗೆ ತೆಂಕಣ ಹಿಂದೂಸ್ಥಾನಕ್ಕೆ ಮೊಗಲರ ಸಂಪರ್ಕವಿರಲಿಲ್ಲ. ಉತ್ತರ ಹಿಂದೂಸ್ಥಾನವೆಲ್ಲ ಸಂಪೂರ್ಣವಾಗಿ ಕಯ್ವಶವಾದ್ದರಿಂದ ಮರುವರುಷದಿಂದ (೧೫೯೩), **ಅಕ್ಬರನು** ಅದನ್ನು ಗೆಲ್ಲುವ ಪ್ರಯತ್ನಕ್ಕೆ ಮೊದಲುಮಾಡಿದನು. ಮುಂದೆ ೮ ವರುಷಗಳ ವರೆಗೆ ಈ ಎತ್ತುಗಡೆಯಲ್ಲೇ ಅವನ ದಳಪಾಯಿಗಳು ತೊಡಗಿದ್ದರು.

* ಇದೇ ವರುಷ ಸೇಲಿಮನ ಹೆಂಡತಿಯಾದ ರಾಜಮಾನಸಿಂಗನ ತಂಗಿಯು ಮುಂದೆ ದುರ್ದೈವಿಯಾದ ಖುಸ್ರು ರಾಜಕುಮಾರನನ್ನು ಹೆತ್ತಳು.

೧೫೮೬ರಲ್ಲಿ **ಮುರ್ತೇಝ ನಿಜಾಮನು ಅಹಮ್ಮದನಗರ**ದಲ್ಲಿ ಆಳುತ್ತಿದ್ದನು. **ಮುರ್ತೇಝ**ನು ಹುಚ್ಚನಾಗಿದ್ದುದರಿಂದ ತನ್ನನ್ನು ಪಟ್ಟದ ಮೇಲೆ ಕೂಡ್ರಿಸಬೇಕೆಂದು ಅವನ ತಮ್ಮನಾದ **ಬರಹಾಣ**ನು **ಬಾದಷಹ**ನನ್ನು ಬೇಡಿಕೊಂಡನು. **ಬಾದಷಹ**ನು ಅವನಿಗೆ ನೆರವಾಗಲಿಕ್ಕೆ ಒಂದು ದಂಡನ್ನು ಕಳುಹಿದನು: ಆದರೆ ಅದರಿಂದೇನೂ ಪ್ರಯೋಜನವಾಗಲಿಲ್ಲ. ಮುಂದೆ ಆರು ವರುಷಗಳ ಮೇಲೆ (೧೫೯೨) **ಮುರ್ತೇಝ**ನು ತೀರಿಹೋದುದರಿಂದ **ಬರಹಾಣ**ನು ಅನಾಯಾಸವಾಗಿ **ಅಹಮ್ಮದ ನಗರ**ರಾಜ್ಯದ ಪಟ್ಟವೇರಿದನು. ಅವನು ಮುಂದೆ ೧೫೯೫ರಲ್ಲಿ ಸತ್ತನು. ಆಗ ಪಟ್ಟಕ್ಕಾಗಿ



ಚಾಂದಬೀಬಿ

ಜಗಳವು ನಡೆಯಿತು. ಒಟ್ಟು ೪ ಜನರು ಬಾಧ್ಯಸ್ಥರು ಹೋರಾಡುತ್ತಿದ್ದರು. ಅವರೊಳಗೆ ಒಬ್ಬನು ಮೊಗಲರ ಸಹಾಯ ಬೇಡಿದುದರಿಂದ **ಅಕ್ಬರ**ನ ತೀರ ಕಿರಿಯ ಮಗನಾದ **ಮುರಾದ**ನು ದಂಡಿನೊಡನೆ ಬಂದು, **ಅಹಮ್ಮದನಗರ**ವನ್ನು ಮುತ್ತಿದನು. ಆಗ **ಚಾಂದಬೀಬಿ** ಎಂಬ ಪ್ರಸಿದ್ಧಳಾದ ಸ್ತ್ರೀಯು ತನ್ನ ಅಣ್ಣನ ಮಗನಾದ **ಬಹದ್ದೂರ್ ನಿಜಾಮುಷಹ**ನೆಂಬ ಚಿಕ್ಕ ಮಗುವನ್ನು ಗದ್ದಿಗೆಯ ಮೇಲೆ ಕುಳ್ಳಿರಿಸಿ, ತಾನು ರಾಜ್ಯಭಾರವನ್ನು ಮಾಡುತ್ತಿದ್ದಳು. ಈಕೆಯ ಧೈರ್ಯವೂ, ಸಾಹಸವೂ, ಚಾತುರ್ಯವೂ ಹೊಗಳತಕ್ಕಂತಹವೇ ಸರಿ. ಈಕೆಯು ತನ್ನ ಆಪ್ತನಾದ ವಿಜಾಪುರದರಸನ ಸಹಾಯವನ್ನು ಪಡೆದು, ರಾಜ್ಯದಲ್ಲಿದ್ದ ಬೇರೆ ಬೇರೆ ಬಣದ ಮುಖ್ಯಸ್ಥರನ್ನು ತನ್ನ ಕಡೆಗೊಲಿಸಿಕೊಂಡು, ಮೊಗಲರ ಆಟ ಸಾಗಗೊಡಲಿಲ್ಲ. ಮೊಗಲರು ಮೂರೆಡೆಗಳಲ್ಲಿ ಸುರಂಗವನ್ನು ಹಾರಿಸಲು ಸಿದ್ಧ ಮಾಡಿಕೊಂಡಿದ್ದರು. ಈ ಸುದ್ದಿಯು ತಿಳಿದ ಕೂಡಲೆ **ಚಾಂದಬೀಬಿ**ಯು ದಕ್ಷತೆಯಿಂದೆರಡು ಸ್ಥಳಗಳಲ್ಲಿದ್ದ ಸುರಂಗಗಳನ್ನು ನಿಷ್ಫಲವಾಗಿ ಮಾಡಿ, ಮೂರನೆಯದಕ್ಕೆ ಕಯ್ ಹಚ್ಚುವದರೊಳಗಾಗಿಯೇ ಮೊಗಲರು ಅದನ್ನು ಹಾರಿಸಿ ಗೋಡೆಯಲ್ಲಿ ತೂತು ಕೆಡವಿದರು. ಅದನ್ನು ನೋಡಿ **ನಿಜಾಮುಷಾಹಿ**ಯ ಸೇನೆಯವರು ಹೆದರಿ ಹಗೆಗಳಿಗೆ ಬೆನ್ನು ತೋರಿಸುವ ಪ್ರಯತ್ನದಲ್ಲಿದ್ದರು. **ಚಾಂದಬೀಬಿ**ಯ ಶೂರತನವೇ ಆಹೊತ್ತು **ಅಹಮ್ಮದನಗರ**ವನ್ನು ಮೊಗಲರ ಹಾವಳಿಯಿಂದ ಉಳಿಸಿತೆನ್ನುವುದಕ್ಕೆ ಅಡ್ಡಿಯಿಲ್ಲ. ತನ್ನ ಜನರು ಎದೆಗುಂದಿದ್ದನ್ನು ನೋಡಿ, ಆಕೆಯು ಖಡ್ಗಧಾರಿಯಾಗಿ ಕಿಂಡಿಯ ಹತ್ತಿರ ಹೋಗಿ, ಧೈರ್ಯದಿಂದ ಹಗೆಗಳನ್ನಿರಿಯ ತೊಡಗಿದುದನ್ನು ನೋಡಿ, ಮೀಸೆಹೊತ್ತ ಗಂಡಸರೆಲ್ಲರೂ ನಾಚಿ, ಟೊಂಕಕಟ್ಟಿ, ಜೀವದ ಹಂಗುದೊರೆದು, ಹೊಡೆದಾಡ ತೊಡಗಿದರು. ಇಂತಹ ಹುರುಪಿನಿಂದ ಕಾದುವವರಿಗೆ ಎದುರಾಗುವರಾರು ? ಕೂಡಲೆ ಮೊಗಲರು ಹಿಂಜರಿದರು. ರಾತ್ರಿಯೆಲ್ಲಾ ಶ್ರಮಪಟ್ಟು **ಚಾಂದಬೀಬಿ**ಯು ಆ ಒಡಕನ್ನು ಮುಚ್ಚಿಸಿ ಬೆಳಗಾದಮೇಲೆ ನುಗ್ಗಿಬಂದ ಮೊಗಲರ ದಂಡನ್ನು ಬೆರಗುಮಾಡಿಬಿಟ್ಟಳು!! ಮೊಗಲರು ಎದೆಗುಂದಿದರು. **ಚಾಂದಬೀಬಿ**ಗೂ ಮುಂದೆ ನುಗ್ಗಿಹೋಗುವಷ್ಟು ಶಕ್ತಿಯಿರಲಿಲ್ಲ. ಆದುದರಿಂದ ಎರಡು ಪಕ್ಷದವರೂ ಒಪ್ಪಂದ ಮಾಡಿಕೊಳ್ಳಲಿಕ್ಕೆ ಸಿದ್ಧರಾದರು. **ಚಾಂದ**

**ಬೀಬಿ**ಯು **ವರ್ಹಾಡ**ವನ್ನು ಮೊಗಲರಿಗೆ ಕೊಟ್ಟಳು. **ಬಹದ್ದೂರ ನಿಜಾ ಮಷಹ**ನು **ಅಹಮ್ಮದಷಾಹಿ**ಯ ಒಡೆಯನೆಂದು ಮೊಗಲರು ಒಪ್ಪಿ ಕೊಂಡರು (೧೫೯೬).

ಈ ಒಪ್ಪಂದವು ಒಂದು ವರುಷದ ವರೆಗಾದರೂ ನಡೆಯಲಿಲ್ಲ. **ಚಾಂದಬೀಬಿ**ಯು **ಮಹಮ್ಮದಖಾನ**ನೆಂಬುವನನ್ನು ತನ್ನ ಮಂತ್ರಿಯನ್ನಾಗಿ ಮಾಡಿಕೊಂಡಿದ್ದಳು. ಇವನು ಅವಳಿಗೆ ವಿರುದ್ಧವಾಗಿ ಒಳಸಂಚು ನಡಿಸಿ **ಮುರಾದರಾಜ**ನ ಸಹಾಯವನ್ನು ಕೋರಿದನು. **ವಿಜಾಪುರ ಗೋವಳಕೊಂಡ**ಗಳ ಅರಸರು **ಅಹಮ್ಮದನಗರ**ದವರ ಬೆಂಬಲವಾದರು. ಎರಡು ಪಕ್ಷದ ದಂಡುಗಳೂ **ಗೋದಾವರಿ**ಯ ತೀರದ ಮೇಲಿದ್ದ **ಸುಪೆ** ಎಂಬಲ್ಲಿ ಒಂದಕ್ಕೊಂದು ಎದುರಾದವು (ಜನವರಿ ೧೫೯೭). ಅಲ್ಲಿ ಒಂದು ಕಡುಗಾಳೆಗ ನಡೆಯಿತು. ಎರಡು ಪಕ್ಷದವರಿಗೂ ಗೆಲುವು ಆಗಲಿಲ್ಲ. ಆದರೆ ಇಷ್ಟರಲ್ಲಿ **ಮುರಾದ**ನಿಗೂ ಅವನೊಡನೆ ಬಂದ **ಖಾನಖಾನ**ನಿಗೂ ಜಗಳ ಬಂತು. ಅದನ್ನು ಕೇಳಿ **ಅಕ್ಬರ**ನು **ಅಬುಲ್ ಫಾಜಲ್ಲ**ನನ್ನು ಅವನಿಗೆ ಬದಲಾಗಿ ನಿಯಮಿಸಿದನು. ಇವನು ದಂಡಿನ ಸ್ಥಿತಿಗತಿಯನ್ನು ನೋಡಿ, **ಬಾದಷಹ**ನು ಅಲ್ಲಿಗೆ ಬರುವುದು ಅವಶ್ಯವೆಂದೆಣಿಸಿ, ಅದರಂತೆಯೇ ಅವನಿಗೆ ಹೇಳಿಕಳುಹಿದನು. **ಬಾದಷಹ**ನು ಬರುವಷ್ಟರೊಳಗೇ ಮೊಗಲರು **ದೌಲತ್ತಾಬಾದ್** (೬೩) ಮುಂತಾದ ಕೋಟೆಗಳನ್ನು ಹಿಡಿದುಕೊಂಡಿದ್ದರು. ಬಂದ ಕೂಡಲೆ ಅವನು **ಬರಹಾಣಪುರ**ವನ್ನು ಹಿಡಕೊಂಡು **ಅಹಮ್ಮದನಗರ**ವನ್ನು ಮುತ್ತಲಿಕ್ಕೆ **ಖಾನಖಾನ**ನನ್ನು ಕಳುಹಿದನು (೧೫೯೯). ಇಷ್ಟರಲ್ಲಿ **ಅಹಮ್ಮದನಗರ**ದ ದರಬಾರಿನಲ್ಲಿ ಒಡಕು ಹುಟ್ಟ ಮೊದಲನೆಯ ಮುತ್ತಿಗೆಯಲ್ಲಿ **ಚಾಂದಬೀಬಿ**ಗೆ ನೆರವಾದ ಹಬಸಿಯ ಮುಖ್ಯಸ್ಥನು **ಅಹಮ್ಮದನಗರ**ವನ್ನು ಮುತ್ತಿದನು. ಮೊಗಲರ ಪಡೆಯು ಬಂದ ಕೂಡಲೆ ಅವನು ಮುತ್ತಿಗೆಯನ್ನೆಬ್ಬಿಸಿದನು. **ಚಾಂದಬೀಬಿ**ಯು ಮೊಗಲರೊಡನೆ ಒಪ್ಪಂದದ ಮಾತುಗಳನ್ನು ನಡಿಸಿದಳು. ಅಷ್ಟರಲ್ಲಿ ವಿರುದ್ಧ ಬಣದವರು **ಚಾಂದಬೀಬಿ**ಯ ಅರಮನೆಯನ್ನು ಹೊಕ್ಕು ಆಕೆಯನ್ನು ಕೊಲೆಮಾಡಿದರು!! ಈ ಕೊಲೆಯ ದೋಷವು ಅವರನ್ನು ದಂಡಿಸದೆ ಬಿಡಲಿಲ್ಲ. **ಅಹಮ್ಮದನಗರ**ವನ್ನು ಹಿಡಿದುಕೊಂಡ ಕೂಡಲೆ

ಮೊಗಲರು ಅಲ್ಲಿಯ ಎಲ್ಲ ಪಡೆಯುವರನ್ನು ಕೊಂದುಹಾಕಿ **ನಿಜಾಮುಷಹ** ನನ್ನು **ಗ್ವಾಲಿಯರಿ**ನಲ್ಲಿ ಸೆರೆಯಲ್ಲಿಟ್ಟರು (೧೬೦೦). ಆದರೂ **ನಿಜಾಮು ಷಾಹಿ**ಯ ರಾಜ್ಯವು ಕೂಡಲೆ ಮೊಗಲರ ಕಯ್ವಶವಾಗಲಿಲ್ಲ. ಆ ರಾಜ್ಯದ ಪ್ರಮುಖ ಸರದಾರರು ಮತ್ತೊಬ್ಬನನ್ನು ಅರಸನನ್ನಾಗಿ ಮಾಡಿಕೊಂಡು, ಉಳಿದ ರಾಜ್ಯದಲ್ಲಿ ಆಳುತ್ತಿದ್ದರು. ಮುಂದೆ **ಷಹಾಜಿಹಾನ**ನ ಆಳಿಕೆಯಲ್ಲಿ ಈ ರಾಜ್ಯವು ತೀರ ನಷ್ಟವಾಯಿತು (೧೬೩೭).

**ಅಕ್ಬರ**ನು ೧೪ ವರ್ಷಗಳ ವರೆಗೆ **ಲಾಹೋರಿ**ನಲ್ಲಿ ತನ್ನ ದರಬಾರನ್ನು ಮಾಡುತ್ತಿದ್ದನು. ಅವನು ೧೫೯೮ರಲ್ಲಿ ತೆಂಕಣಿಗೆ ಬಂದು, **ಅಹಮ್ಮದ**




ಸಲೀಮ್ ಅಥವಾ ಜಹಂಗೀರ

**ನಗರ**ವನ್ನೂ, **ಅಸೀರ್ಗಡ***ವನ್ನೂ(೬೧) ಹಿಡಿದುಕೊಂಡು, ತನ್ನ ಕಿರಿಯ ಮಗನಾದ **ಡ್ಯಾನಿಯಲ್ಲ**ನನ್ನು **ಖಾನ್‌ದೇಶ ವರಾಡ** ಪ್ರಾಂತಗಳಿಗೆ ಸುಭೇದಾರನನ್ನಾಗಿ ಮಾಡಿದನು. ಅಷ್ಟರಲ್ಲಿ **ಸೆಲೀಮ**ನ ಬಂಡಾಯದ ಸುದ್ದಿ ಬಂದುದರಿಂದ ಅವನು ಅವಸರದಿಂದ **ಆಗ್ರಾ**ಕ್ಕೆ ಹೋದನು (ಮೇ ೧೬೦೧).

**ಅಕ್ಬರ**ನ ಹಿರಿಯ ಮಗನಾದ **ಸೆಲೀಮ**ನು ಕ್ರೂರನೂ, ದುರಾಚಾರಿಯೂ, ಮನಸ್ವಿಯೂ ಆಗಿದ್ದನು. ಅವನಲ್ಲಿ ಧರ್ಮಾಭಿಮಾನವು ಬಹಳವಾಗಿತ್ತು. ಇವನು ಚಿಕ್ಕಂದಿನಿಂದ ತನ್ನ ದುರ್ನಡತೆಯಿಂದ ತಂದೆಗೆ ಉಪದ್ರವನ್ನು ಕೊಡುತ್ತಿದ್ದನು. **ಅಬುಲ್‌ಫಾಜಲ್ಲ**ನು **ಬಾದಷಹ**ನ ವಿಶ್ವಾಸಕ್ಕೆ ಪಾತ್ರನಾಗಿದ್ದನು. ಅವನ ಹೇಳಿಕೆಯಿಂದಲೇ **ಬಾದಷಹ**ನು ಮುಸಲ್ಮಾನ್ ಧರ್ಮವನ್ನು ಬಿಟ್ಟನೆಂದೆಣಿಸಿ, **ಸೆಲೀಮ**ನು **ಅಬುಲ್‌ಫಾಜಲ್ಲ**ನನ್ನು ದ್ವೇಷಿಸುತ್ತಿದ್ದನು. ಅವರಿಬ್ಬರಿಗೂ ಮನಸ್ಸು ಸರಿ ಇರುತ್ತಿರಲಿಲ್ಲ; ಆದುದರಿಂದ **ಬಾದಷಹ**ನು **ಅಬುಲ್‌ಫಾಜಲ್ಲ**ನನ್ನು ತೆಂಕಣದೇಶದ ದಳವಾಯಿಯನ್ನಾಗಿ ಮಾಡಿ, **ಸೆಲೀಮ**ನನ್ನು **ಅಹಮ್ಮದನಗರ**ಕ್ಕೆ ಕಳುಹಿಕೊಟ್ಟನು. ಅಲ್ಲಿಂದ ತಿರುಗಿ ಬಂದ ಬಳಿಕ ಅವನನ್ನು **ಅಜಮೀರ**ದ ನವಾಬನನ್ನಾಗಿ ಮಾಡಿ, **ಮಾನಸಿಂಗ**ನೊಡನೆ **ಮೇವಾಡ**ದ ರಾಣನೊಡನೆ ಆರಂಭವಾದ ಯುದ್ಧವನ್ನು ನಡಿಸುವುದಕ್ಕೆ ಕಳುಹಿದನು (೧೬೦೦). ಅದರಂತೆ **ಸೆಲೀಮ**ನೂ, **ಮಾನಸಿಂಗ**ನೂ, **ಮೇವಾಡ**ಕ್ಕೆ ಹೊರಟರು. ಅಷ್ಟರಲ್ಲಿ **ಬಂಗಾಲ**ದಲ್ಲಿ ಒಂದು ದಂಗೆ ಎದ್ದಿತೆಂಬ ಸುದ್ದಿಯು ಬಂತು. **ಮಾನಸಿಂಗ**ನು ಆ ನಾಡಿನ ಸುಭೇದಾರನಾದುದರಿಂದ, ಅವನು ಕೂಡಲೆ ಅಲ್ಲಿಗೆ ಹೊರಟು ಹೋದನು. ಇತ್ತ **ಸೆಲೀಮ**ನು ತಾನು **ಬಾದಷಹ**ನಾಗಲು ಇದೇ ಉತ್ತಮವಾದ ಸಂಧಿಯೆಂದೆಣಿಸಿ, ತನ್ನ ದಂಡಿನೊಡನೆ **ಆಗ್ರಾ**ಕ್ಕೆ ಹೋದನು. ಅಲ್ಲಿಯ ಅಧಿಕಾರಿಯು ಅವನಿಗೆ ಬಾಗಿಲನ್ನು ತೆರೆಯಲಿಲ್ಲ. ಆದುದರಿಂದ ಅವನು ಅದನ್ನು ಹಿಡಿದುಕೊಳ್ಳುವದು ಅಸಾಧ್ಯವೆಂದೆಣಿಸಿ, **ಅಲಹಾಬಾದಿ**ಗೆ ಹೋಗಿ ಆ ಪಟ್ಟಣವನ್ನು ತೆಗೆದು

* ಮೊಗಲರ ೨ ಲಕ್ಷ ದಂಡು ೧೦ ತಿಂಗಳ ಮುತ್ತಿದ ಬಳಿಕ ಅಸೀರ್ಗಡವು ಅಕ್ಬರನ ಕಯ್ಸೇರಿತು (೧೭ ಜನವರಿ ೧೬೦೧). ಈ ಮುತ್ತಿಗೆಯಲ್ಲಿ ಅಕ್ಬರನು ವಿಶ್ವಾಸಘಾತದಿಂದ ಖಾನದೇಶದ ನವಾಬನನ್ನು ಕೊಲ್ಲಿಸಿದನೆಂದು ವ್ಹಿನ್ಸೆಂಟ ಸ್ಮಿಥ್ ಸಾಹೇಬರು ಬರೆಯುತ್ತಾರೆ.



ನೂರ್‌ಜಹಾನ್ ರಾಣಿ

ಕೊಂಡು, ತಾನು **ಬಾದಷಹ**ನೆಂದು ಸಾರಿಸಿಕೊಂಡನು (೧೬೦೧). ಈ ಸುದ್ದಿಯನ್ನು ಕೇಳಿ **ಅಕ್ಬರ**ನು ಮೇಲೆ ತಿಳಿಸಿದಂತೆ **ಆಗ್ರಾ**ಕ್ಕೆ ಹೊರಟು ಬಂದನು.

ಮತ್ತೆಯಾವ ಅರಸನಾದರೂ ರಾಜದ್ರೋಹಿಯೂ, ಪಿತೃದ್ರೋಹಿಯೂ ಆದ **ಸೆಲೀಮ**ನನ್ನು ಕ್ಷಮಿಸುತ್ತಿರಲಿಲ್ಲ. ಆದರೆ **ಅಕ್ಬರ**ನು ಹೆಂಣುಗರುಳಿನವನಾಗಿದ್ದನು. ತನ್ನ ಮಗನೊಡನೆ ಕಾದಲು ಅವನ ಮನಸ್ಸು ಸ್ವಲ್ಪವಾದರೂ ಒಡಂಬಡಲಿಲ್ಲ. ಅವನ ದಂಡೂ **ಸೆಲೀಮ**ನ ದಂಡಿಗಿಂತ ತೀರ ಸಣ್ಣದಾಗಿತ್ತು. ಆದುದರಿಂದ ಅವನು **ಸೆಲೀಮ**ನಿಗೆ ಒಳ್ಳೆಯ ಮಾತಿನ ಒಂದು ಕಾಗದ ಬರೆದನು. ಅದನ್ನು ಓದಿ **ಸೆಲೀಮ**ನು

ಪಶ್ಚಾತ್ತಾಪಪಟ್ಟು ತನ್ನ ದ್ರೋಹದ ವಿಚಾರಗಳನ್ನು ಬಿಡಲಿಲ್ಲ.* ಅವನು ತನ್ನ ದಂಡಿನೊಡನೆ **ಇಟಾವ** (೬೪)ಕ್ಕೆ ಬಂದನು. ಅದನ್ನು ಕೇಳಿ **ಬಾದಷಹ**ನು ಮತ್ತೊಂದು ಕಾಗದವನ್ನು ಬರೆದನು. ಅದರಲ್ಲಿ ಅವನು ಎರಡು ಮಾರ್ಗಗಳೊಳಗೆ ಒಂದನ್ನು ಆರಿಸಿಕೊಳ್ಳಲು ಹೇಳಿದ್ದನು. ಅವಾವವೆಂದರೆ–(೧) ತನ್ನೊಡನೆ ಕಾದಲಿಕ್ಕೆ ಸಿದ್ಧನಾಗಬೇಕು. (೨) ಅಥವಾ ಕೆಲವುಜನ ಸೇವಕರೊಡನೆ ಬಂದು ತನಗೆ ಶರಣಾಗತನಾಗಬೇಕು. ಈ ಕಾಗದವನ್ನು ನೋಡಿ **ಸೆಲೀಮ**ನ ಹುಚ್ಚು ಕೊಂಚಮಟ್ಟಿಗೆ ಇಳಿಯಿತು. ಆದರೂ ಅವನು ತನ್ನ ೭೦,೦೦೦ ದಂಡಿನೊಡನೆ **ಬಾದಷಹ**ನನ್ನು ಕಾಣುವನೆಂದು ಹಟಹಿಡಿದುದರಿಂದ **ಅಕ್ಬರ**ನ ಹಾಡು ಬಿಸಿತುಪ್ಪದಂತೆ ಆಯಿತು. ಅವನ ಮನಸ್ಸೆಂಬ ರಣಭೂಮಿಯಲ್ಲಿ ಪಿತೃತ್ವವೂ, ರಾಜತ್ವವೂ ತುಮುಲಯುದ್ಧವನ್ನು ಮಾಡಲಾರಂಭಿಸಿದವು. ಮಗನ ಮೇಲಿನ ಅತಿಪ್ರೇಮದಿಂದ **ಸೆಲೀಮ**ನನ್ನು ದಂಡಿಸಲಿಕ್ಕೆ ಅವನ ಮನಸ್ಸು ಒಡಂಬಡಲೊಲ್ಲದು; ಅವನ ರಾಜದ್ರೋಹದ ದುಷ್ಕೃತ್ಯಗಳನ್ನು ಸಹಿಸುವುದು ಅಸಂಭವವಾಗಿತ್ತು. ಈ ಅಂತಃಕರಣದ ಘೋರಯುದ್ಧದಲ್ಲಿ ಎಷ್ಟೋ ದಿವಸಗಳು ಕಳೆದು ಹೋದವು.

**ಅಕ್ಬರ**ನ ಈ ಮಮತೆಯು **ಸೆಲೀಮ**ನ ನಡತೆಯನ್ನು ಸರಿಪಡಿಸಲಿಲ್ಲ. **ಅಬುಲ್‌ಫಾಜಲ್ಲ**ನು ತನ್ನ ತಂದೆಯ ಧರ್ಮವನ್ನು ಕೆಡಿಸಿದನೆಂಬ ಸಿಟ್ಟು ಅವನ ಮನಸ್ಸಿನಲ್ಲಿ ಕುದಿಯುತ್ತಿತ್ತು. ಆದುದರಿಂದ **ಅಬುಲ್‌ಫಾಜಲ್ಲ**ನು ಸಣ್ಣ ದಂಡಿನೊಡನೆ **ದಕ್ಷಿಣ**ದೇಶದಿಂದ ತಿರುಗಿ ಬರುತ್ತಾನೆಂಬ ಸುದ್ದಿಯನ್ನು ಕೇಳಿ, **ಸೆಲೀಮ**ನು **ಓರ್ಛಾದ** (೬೫) ಅರಸನಾದ **ಬೀರಸಿಂಗ**ನಿಗೆ ಅವನನ್ನು ಕೊಲ್ಲಬೇಕೆಂದು ಹೇಳಿಕೊಟ್ಟನು. ಅದರಂತೆಯೇ ಆ ದುಷ್ಟನು ಹಾದಿಯಲ್ಲಿ ಹೊಂಚುಹಾಕಿಕೊಂಡಿದ್ದು **ಅಬುಲ್‌ಫಾಜಲ್ಲ**ನನ್ನು ಕೊಂದು

---

* ಸುರೆಯಂ ಸೇವಿಸುವಾತ ಬಲ್ಲನೆ ಮಹಾ ಯೋಗೀಂದ್ರನೆಂದೆಂಬುದಂ | ದೊರೆಯೋಲ್ತೀ ಜವನಾಂತವಂ ಬಡವರಂ ತಾ ನೋಳ್ಪನೇ ಕಣ್ಗಳಿಂ || ಪಿರಿಯರ್ಜ್ಞಾನಿತರೆಂದು ಕಾಂಬನೇ ಮಹಾ ದುರ್ಮಾರ್ಗಿಯೆಂತಾದೊಡಂ | ದುರುಳಂ ಬಲ್ಲನೇ ಬಾಳ್ವರಂ ಹರ ಹರಾ ಶ್ರೀಚನ್ನ ಸೋಮೇಶ್ವರ ||

ಸೊಮೇಶ್ವರ ಶತಕ.

ಹಾಕಿದನು (೧೨ ಅಗಸ್ಟ ೧೬೦೨).* ಈ ಸುದ್ದಿಯನ್ನು ಕೇಳಿ **ಅಕ್ಬರನು** ಬಹಳ ಕಳವಳಗೊಂಡು, ಮೂರು ದಿನ ದರಬಾರಿಗೆ ಹೋಗದೆ ಆ ಕೊಲೆಗಡ ಕನನ್ನು ಶಿಕ್ಷಿಸಲು ಒಂದು ದಂಡನ್ನು ಕೂಡಲೆ ಕಳುಹಿದನು. ಆದರೆ ಆ ನೀಚನು **ಬಾದಷಹ**ನಿರುವ ವರೆಗೆ ಗುಡ್ಡಗಳಲ್ಲಿ ಅಡಗಿಕೊಂಡಿದ್ದು, **ಸೆಲೀ ಮ**ನು ಪಟ್ಟವೇರಿದ ಬಳಿಕ ಅವನ ದರಬಾರಿಗೆ ಬಂದು ಬಹುಮಾನವನ್ನು ಹೊಂದಿದನು.

ಈ ಮೇರೆಗೆ ತಂದೆಮಕ್ಕಳ ದ್ವೇಷವು ಬೆಳೆಯುತ್ತ ನಡೆದುದನ್ನು ನೋಡಿ ರಾಣಿವಾಸದವರು ಕಳವಳಗೊಂಡರು. ಅದನ್ನು ಹಾಗೇ ಬೆಳೆ ಗೊಟ್ಟರೆ ಅನರ್ಥವಾಗಬಹುದೆಂದು ಹೆದರಿ, ಅವರು ತಂದೆಮಕ್ಕಳನ್ನು ಕೂಡಿಸುವ ವಿಚಾರವನ್ನು ಮಾಡ ತೊಡಗಿದರು. ಅವರೊಳಗೆ **ಬೈರಾಮ್ ಖಾ**ನನ ವಿಧವೆಯೂ **ಅಕ್ಬರ**ನ ರಾಣಿಯೂ **ಮುರಾದ** ಅರಸುಮಗನ ತಾಯಿಯೂ ಆದ **ಸುಲ್ತಾನ ಸಾಲೀಮಾ ಬೇಗಮ್ಮ**ಳು ಬುದ್ಧಿವಂತಿಯೂ ಧೈರ್ಯಶಾಲಿಯೂ ಆದ್ದರಿಂದ ತಂದೆಮಕ್ಕಳನ್ನು ಒಟ್ಟು ಗೂಡಿಸುವ ದುಸ್ತ ರವಾದ ಕೆಲಸವನ್ನು ಉಬ್ಬಿನಿಂದ ಕಯ್ಕೊಂಡಳು. ಕೂಡಲೆ ಅವಳು **ಬಾದಷಹ**ನ ಅಪ್ಪಣೆಪಡೆದು **ಸೆಲೀಮ**ನಿದ್ದ **ಅಲ್ಲಹಾಬಾದಿ**ಗೆ ಹೊರ ಟಳು (ಜನವರಿ ೧೬೦೪).

ಈ ಕಾಲಕ್ಕೆ **ಸೆಲೀಮ**ನ ತಲೆಗೇರಿದ ಹುಚ್ಚು ಕೆಲ ಮಟ್ಟಿಗೆ ಇಳಿ ದಿತ್ತು. ಆದ್ದರಿಂದ ಅವನು ಅತ್ಯಾದರದಿಂದ ಆಕೆಗೆ ಸ್ವಾಗತಮಾಡಿದನು. ಆಕೆಯು ೨೩ ತಿಂಗಳು ಅವನಲ್ಲಿದ್ದು ಯುಕ್ತಿಪ್ರಯುಕ್ತಿಯಿಂದ ಅವನಿಗೆ ತಿಳಿ ಹೇಳಿ ಅವನ ರಾಜಪಿತೃದ್ರೋಹದ ವಿಚಾರಗಳನ್ನು ದೂರಮಾಡಿ **ಬಾದಷಹ**ನಿಗೆ ಶರಣು ಹೋಗಲಿಕ್ಕೆ ಅವನನ್ನು ಒಡಂಬಡಿಸಿದಳು. ಈ ಸುದ್ದಿಯನ್ನು ಕೇಳಿ **ಬಾದಷಹ**ನಿಗೆ ಅತ್ಯಾನಂದವಾಯಿತು. **ಸಾಲೀಮಾ ಬೇಗಮ್ಮ**ಳು ಅವನನ್ನು ಕರಕೊಂಡು **ಆಗ್ರಾ**ಕ್ಕೆ ಬಂದು ತನ್ನ ಅತ್ತೆಯಾದ **ಮರಿಯಮ್ಮಾ** ಮಕಾನಿಗೆ ಅವಳನ್ನು ಒಪ್ಪಿಸಿದಳು. ಆಕೆಯು ಮಗ

* ಕೊಲೆಯಾದಾಗ ಅಬುಲ್‌ಫಾಜಲ್ಲನಿಗೆ ೫೨ನೆಯ ವರ್ಷ ನಡೆದಿತ್ತು. ಇವನು ಕುಶಾಗ್ರ ಬುದ್ಧಿಯೂ, ಜಾಣನೂ ಚತುರನೂ, ವ್ಯವಹಾರಜ್ಞನೂ ಆಗಿದ್ದನು. ಬಾದಷಹನಿಗೆ ಇವನಲ್ಲಿ ಪೂರ್ಣ ವಿಶ್ವಾಸವಿತ್ತು. ಇವನು ೪೦೦೦ ಸ್ವಾರರ ಮನಸಬ್ದಾರನಾಗಿದ್ದನು.

ಮುಮ್ಮಕ್ಕಳ ಭೆಟ್ಟಿಮಾಡಿಸಿದಳು. **ಸೆಲೀಮ**ನು ೧೨೦೦೦ ಮೊಹರುಗಳನ್ನೂ ೭೭೦ ಆನೆಗಳನ್ನೂ ಕಾಣಿಕೆಯಾಗಿ ಅರ್ಪಿಸಿದನು. **ಬಾದಷಹ**ನು **ಸೆಲೀಮ**ನಿಗೆ ಬೇಕಾದ ತನ್ನ ಆನೆಗಳೊಳಗಿನದೊಂದು ಉತ್ತಮ ಆನೆಯನ್ನು ಇನಾಮಾಗಿ ಕೊಟ್ಟನು. ಈ ಮೇರೆಗೆ ತಂದೆಮಕ್ಕಳ ರಾಜಿಯು ಅಥವಾ ರಾಜಿಯು ಶಾಸ್ತ್ರವು ಆಯಿತು. **ಬಾದಷಹ**ನು ಅವನಿಗೆ **ಮೇವಾಡ**ದ ಅರಸನೂ, ಹೆಸರುವಾಸಿಯಾದ **ಪ್ರತಾಪಸಿಂಗ**ನ ಮಗನೂ ಆದ **ಅಮರಸಿಂಗ**ನ ಮೇಲೆ ದಂಡೆತ್ತಿ ಹೋಗಲಿಕ್ಕೆ ಹೇಳಿದನು. ಆದರೆ **ಸೆಲೀಮ**ನು ಆ ದಂಡಯಾತ್ರೆಗೆ ಹೆಚ್ಚಿನ ದಂಡೂ, ದುಡ್ಡೂ ಬೇಕೆಂದು ಕೇಳಿದ್ದರಿಂದ **ಅಲ್ಲಹಾಬಾದಿ**ಗೆ ತಿರುಗಿ ಹೋಗಲಿಕ್ಕೆ ಅಪ್ಪಣೆಕೊಟ್ಟನು. ತಿರುಗಿ ಹೋಗಿ **ಸೆಲೀಮ**ನು ಎಂಟಾನು ಎಂಟು ದಿವಸ ರಾಜಿಯು ಬಗ್ಗೆ ಉತ್ಸವ ಬೆಳಿಸಿದನು (ನವಂಬರ ೧೬೦೩).

ಇದೇ ಸುಮಾರಿನಲ್ಲಿ **ಖುಶ್ರು** ಅರಸುಮಗನ ತಾಯಿಯೂ **ರಾಜಾ ಮಾನಸಿಂಗ**ನ ದತ್ತು ತಂಗಿಯೂ **ಸೆಲೀಮ**ನ **ರಜಪುತ** ರಾಣಿಯೂ ಆದ **ಶಹಾಬೇಗಮ್ಮ**ಳು ಆಪೀಮು ತಿಂದು ಆತ್ಮಹತ್ಯಮಾಡಿಕೊಂಡಳು. **ಸೆಲೀಮ**ನು ಆಕೆಯನ್ನು ಅತಿಶಯವಾಗಿ ಪ್ರೀತಿಸುತ್ತಿದ್ದುದರಿಂದ ೪ ದಿವಸ ಅನ್ನನೀರನ್ನು ಬಿಟ್ಟನು. **ಬಾದಷಹ**ನು ಅವನಿಗೆ ದುಃಖ ಪ್ರದರ್ಶನದ ಕಾಗದವನ್ನು ಬರೆದನು.

**ಬಾದಷಹ**ನು **ಸೆಲೀಮ**ನನ್ನು **ಮೇವಾಡ** ದೇಶದ ಮೇಲೆ ದಂಡೆತ್ತಿ ಹೋಗಲಿಕ್ಕೆ ಹೇಳಿದನೆಂದು ಮೇಲೆ ಹೇಳಿರುತ್ತದಷ್ಟೆ. ಈ ದಂಡ ಯಾತ್ರೆಯ ಕಾರಣವನ್ನು ಸಂಕ್ಷೇಪವಾಗಿ ಕೆಳಗೆ ಕೊಡುತ್ತೇವೆ.

ಹಿಂದೆ ೫೯ನೆಯ ಪುಟದಲ್ಲಿ **ಪ್ರತಾಪಸಿಂಗ**ನು **ಆರಾವಳಿ** ಗುಡ್ಡಕ್ಕೆ ಓಡಿ ಹೋದನೆಂದು ಹೇಳಿದೆ. ಅವನು ಮೊಗಲರ ಕಾಟವನ್ನು ತಾಳಲಾರದೆ, ಬಡತನಕ್ಕೆ ಬೇಸತ್ತು ತಾನಿದ್ದ ನಾಡನ್ನು ಬಿಟ್ಟು, **ಸಿಂಧು** ನದೀ ತೀರಕ್ಕೆ ಹೋಗಬೇಕೆಂದು ಮನಸ್ಸು ಮಾಡಿದನು. ಆಗ ಅವನ ಒಬ್ಬ ಮಂತ್ರಿಯು ಹಣದ ಸಾಹಾಯ ಮಾಡಿದುದರಿಂದ ಅವನು ಮತ್ತೆ ದಂಡು ಕೂಡಿಸಿ ಮೊಗಲರ ದಳವಾಯಿಯನ್ನು ಪೂರ್ಣವಾಗಿ ಸೋಲಿಸಿ ಸುಮಾರು ಎಲ್ಲ **ಮೇವಾಡ**ವನ್ನು ಹಿಡಿದುಕೊಂಡನು (೧೫೮೦). ಬಳಿಕ ಅವನು

**ರಾಜಸ್ಥಾನ**ದಲ್ಲುಳಿದ ಸ್ಥಳಗಳನ್ನು ತೆಗೆದುಕೊಳ್ಳಲು ಪ್ರಯತ್ನ ಮಾಡ ತೊಡಗಿದನು. ೧೫೯೪ರ ಸುಮಾರಿನಲ್ಲಿ ಅವನ ಹಾವಳಿಯು ಬಹಳ ವಾದುದರಿಂದ **ಬಾದಷಹ**ನು ಮೇಲೆ ಹೇಳಿದಂತೆ ೧೫೯೭ರಲ್ಲಿಯೂ, ೧೬೦೩ರಲ್ಲಿಯೂ **ಸೆಲೀಮ**ನನ್ನು **ಮೇವಾಡ**ಕ್ಕೆ ಕಳುಹಿದನು. ಆದರೆ **ಸೆಲೀಮ**ನು ಏನು ಕೆಲಸವನ್ನೂ ಮಾಡದೆ ತನ್ನ ದ್ರೋಹದ ವಿಚಾರಗಳ ಲ್ಲಿಯೂ ದುಂದುಗಾರಿಕೆಯಲ್ಲಿಯೂ ಕಾಲ ಕಳೆದು ತಿರುಗಿ ಬಂದನು.

**ಅಕ್ಬರ**ನಿಗೆ ಮಕ್ಕಳಿಂದ ಸುಖವಿರಲಿಲ್ಲ.* ಅವನಿಗೆ ಮೊದಲು ಹುಟ್ಟಿದ ಅವಳಿ ಜವಳಿ ಮಕ್ಕಳು ಚಿಕ್ಕಂದಿನಲ್ಲಿಯೇ ತೀರಿ ಹೋದರು (ಪುಟ ೪೬ ನೋಡಿ). ಮೂರನೆಯವನಾದ **ಸೆಲೀಮ**ನು ಹಿಂದೆ ವಿವರಿಸಿ ದಂತೆ ಅವಿವೇಕಿಯಾಗಿದ್ದನು. ನಾಲ್ಕನೆಯವನಾದ **ಮುರಾದ**ನು ಕುಡು ಕತನದಿಂದ **ಜಲ್ನಾ**(೬೬)ದಲ್ಲಿ ಸತ್ತನು (ಮೇ ೧೫೯೯). ೫ನೆಯವನಾದ **ಡ್ಯಾನಿಯಲ್ಲ**ನು ಚೆಲುವನೂ, ಜಾಣನೂ, **ಖಾನಖಾನ**ನ ಅಳಿಯನೂ ಆಗಿದ್ದನು. ಇವನೂ ಕುಡಿತದಿಂದಲೇ ಸತ್ತನು (ಎಪ್ರಿಲ ೧೬೦೪). ಈ ದುಃಖವು **ಅಕ್ಬರ**ನಿಗೆ ತಾಳಲಾರದಷ್ಟಾಯಿತು. ಅವನ ಪ್ರಕೃತಿಯು ದಿನ ದಿನಕ್ಕೆ ಹೆಚ್ಚಾಗಿ ಕೆಡುತ್ತ ಬಂತು.

**ಟಾಡ್ ಸಾಹೇಬ**ರ ರಾಜಸ್ಥಾನವೆಂಬ ಪುಸ್ತಕದಲ್ಲಿ **ಅಕ್ಬರ**ನ ರೋಗದ ವಿಷಯದಲ್ಲಿ ಸೋಜಿಗವಾದ ಕಾರಣವು ಬರೆಯಲ್ಪಟ್ಟಿದೆ. ಅದು ಏನಂದರೆ, ತನ್ನ ತರುವಾಯ **ಮಾನಸಿಂಗ** ರಾಜನು **ಸೆಲೀಮ**ನ ಮಗನಾದ **ಖುಸ್ರು**ವಿಗೆ ಪಟ್ಟಗಟ್ಟುವನೆಂಬ ಹೆದರಿಕೆಯಿಂದ **ಅಕ್ಬರ**ನು ಅವನನ್ನು ಕೊಲ್ಲಿಸಲಿಚ್ಛಿಸಿ, ಒಂದು ದಿನ **ಮಾನಸಿಂಗ**ನಿಗೆ ಔತನಕ್ಕೆ ಬರ ಹೇಳಿ ಮಾಜೂಮ್ ಎಂಬ ಭಕ್ಷ್ಯವನ್ನು ಮಾಡಿಸಿ ಅದರಲ್ಲಿ ವಿಷಹಾಕಿಸಿ ದನು. ಆದರೆ ಕಾಲ-ಕರ್ಮ-ಸಂಯೋಗದಿಂದ ಆ ವಿಷದ ಭಾಗವನ್ನು **ಬಾದಷಹ**ನೇ ತಿಂದನಂತೆ.

---

* ಸ್ವಕುಲೋದ್ಧಾರಕನಾಗಿ ಭಾಗ್ಯಯುತನಾಗಾಯುಷ್ಯಮುಳ್ಳಾತನಾ |
ಗಕಳಂಕಂ ಘನವಾಗಿ ಬಾಳ್ವ ಸತಿಯಿದ್ದಾನಂದಮಂ ಮಾಳ್ಪ ಬಾ ||
ಲಕನಾಗೀಶ್ವರ ಭಕ್ತನಾಗಿ ತನುದಾರಾಢ್ಯಾನ್ವಿತಂ ಮಾನವಂ |
ಸುಖ ಪೂರ್ವಾರ್ಜಿತ ಪುಣ್ಯವೆ ಹರಹರಾ ಶ್ರೀಚೆನ್ನ ಸೋಮೇಶ್ವರ ||

ಸೋಮೇಶ್ವರ ಶತಕ.

ಈ ಸಂಗತಿಯು **ಬುಂದಿ**ಯ ಸಂಸ್ಥಾನದರಸನ ಬರಹದಿಂದ ತಿಳಿದು ಬರುತ್ತದೆ. ಆದರೆ ಇದು ದಿಟವೆಂದು ತೋರುವದಿಲ್ಲ. ಏಕಂದರೆ, (೧) **ಅಕ್ಬರ**ನು ಆಗಲೆ ಸಾಯುಲಿಲ್ಲ. ಎಷ್ಟೋ ದಿವಸ ನರಳಿ ಸತ್ತನು. (೨) ತನ್ನ ಒಂದು ಮಾತಿನಿಂದ **ಸೆಲೀಮ**ನಿಗೆ ಪಟ್ಟಗಟ್ಟುವಂತಿರಲು, ಅವನು ಇಂತಹ ನೀಚ ಕೆಲಸಕ್ಕೆ ಎಂದೂ ಕೈ ಹಾಕಿರಲಾರನು, (೩) **ಸೆಲೀಮ**ನು ದುರ್ಬಲನಾಗಿರಲಿಲ್ಲ. ಅವನಿಗೆ ಮುಸಲ್ಮಾನ ಜಾತಿಯ ಬಹು ಜನ ಸರದಾರರು ಅನುಕೂಲರಾಗಿದ್ದರು.

ಮುಂದೆ **ಬಾದಷಹ**ನು ಬಹಳ ದಿವಸ ಬದುಕುವುದಿಲ್ಲವೆಂದೆಲ್ಲರೂ ತಿಳಿದಿದ್ದುದರಿಂದ ಅವನ ತರುವಾಯ ಯಾರು ಪಟ್ಟವೇರಬೇಕೆಂಬ ವಿಚಾರವು ನಡೆಯಿತು. ಅವನ ಮಕ್ಕಳೊಳಗೆ **ಸೆಲೀಮ**ನ ಹೊರತು ಉಳಿದವರಾರೂ ಬದುಕಿರಲಿಲ್ಲ. **ಸೆಲೀಮ**ನಿಗೆ ಇಬ್ಬರು ಮಕ್ಕಳಿದ್ದರು. ಅವರೊಳಗೆ **ಖುಸ್ರು**ವೆಂಬುವನು **ಮಾನಸಿಂಗ**ರಾಜನ ಸೋದರಳಿಯನಾಗಿದ್ದನು. **ಖುರಾಮ**ನೆಂಬ ಮತ್ತೊಬ್ಬ ಮಗನು ಎಲ್ಲರಿಗೂ ಪ್ರಿಯನಾಗಿದ್ದನು. ಇವನೇ ಮುಂದೆ **ಷಹಜಹಾನ**ನೆಂಬ ಹೆಸರಿನಿಂದ ಪಟ್ಟವೇರಿದನು.

ಮೇಲೆ ಹೇಳಿದಂತೆ **ಮಾನಸಿಂಗ** ರಾಜನು **ಖುಸ್ರು**ವಿನ ಆಪ್ತನಾಗಿದ್ದನು. ಇದಲ್ಲದೆ **ಖುಸ್ರು**ವು **ಅಜೀಮ**ನೆಂಬೊಬ್ಬ ದೊಡ್ಡ ಮುಸಲ್ಮಾನ ಸರದಾರನ ಮಗಳನ್ನು ಮದುವೆಯಾಗಿದ್ದನು. ಈ ಇಬ್ಬರು ಸರದಾರರು **ಖುಸ್ರು**ವಿಗೆ ಪಟ್ಟಗಟ್ಟಬೇಕೆಂಬ ಉದ್ದೇಶದಿಂದ **ಬಾದಷಹ**ನಿಗೆ ರೋಗ ಬಂದ ಕೂಡಲೆ **ಆಗ್ರಾ**ದ ಕೋಟೆಯ ಸುತ್ತಲು ಕಾವಲಿರಿಸಿದರು. **ಅಕ್ಬರ**ನಿಗೆ ಈ ಸುದ್ಧಿಯು ತಿಳಿದ ತಕ್ಷಣವೇ ಅವನು ಎಲ್ಲಾ ಸರದಾರರನ್ನೂ ಕರಿಸಿ, **ಸೆಲೀಮ**ನು ತನ್ನ ಬಳಿಕ **ಬಾದಷಹ**ನಾಗಬೇಕೆಂತಲೂ, **ಖುಸ್ರು**ವು **ಬಂಗಾಲ**ಕ್ಕೆ ಅಧಿಪತಿಯಾಗಬೇಕೆಂತಲೂ ತನ್ನ ಇಷ್ಟವನ್ನು ಸ್ಪಷ್ಟವಾಗಿ ಹೇಳಿದನು. ಈ ಮಾತಿಗೆಲ್ಲರೂ ತಲೆದೂಗಿದುದರಿಂದ **ಮಾನಸಿಂಗ**ನೂ, **ಖುಸ್ರು**ವಿನ ಹೆಣ್ಣು ಕೊಟ್ಟ ಮಾವನೂ ನಿರುಪಾಯರಾದರು. ಈ ಸುದ್ಧಿಯನ್ನು ಕೇಳಿ **ಸೆಲೀಮ**ನು ಪೂಜ್ಯಬುದ್ಧಿಯಿಂದ ಬಂದು, ತಂದೆಯಡಿಗೆರಗಿ, ಗಟ್ಟಿಯಾಗಿ ಅಳತೊಡಗಿದನು. ಆಗ **ಅಕ್ಬರ**ನು ಮತ್ತೆ ಎಲ್ಲ ಸರದಾರರನ್ನೂ ಕರಿಸಿ, ಅವರೆದುರಿಗೆ **ಸೆಲೀಮ**ನ ಟೊಂಕಕ್ಕೆ ತನ್ನ ಕಠಾರಿಯನ್ನು



ಷಹಜಹಾನ್

ಕಟ್ಟಿಸಿ, ಅವನ ತಲೆಯ ಮೇಲೆ ತನ್ನ ಮುಕುಟವನ್ನು ಇಡಿಸಿ, ಅವನಿಗೆ ತನ್ನ ಎಲ್ಲಾ ತೊಡಿಗೆಗಳನ್ನು ತೊಡಿಸಿ “ಈ ಎಲ್ಲಾ ಸರದಾರರು ನನಗೋಸ್ಕರ ನಾನಾ ತರದ ಕಷ್ಟಗಳನ್ನನುಭವಿಸಿರುತ್ತಾರೆ. ಆದುದರಿಂದ ಅವರನ್ನೂ, ರಾಣಿವಾಸದ ಜನರನ್ನೂ, ಪ್ರಜೆಗಳನ್ನೂ ಸರಿಯಾಗಿ ಕಾಪಾಡು” ಎಂದು ಹೇಳಿ ಪ್ರಾಣ ಬಿಟ್ಟನು (೨೭ನೇ ಅಕ್ಟೋಬರ ೧೬೦೫). ಆಗ ಅವನಿಗೆ ೬೩ ವರ್ಷ ತುಂಬಿ ಒಂದು ದಿವಸ ಮಾತ್ರವಾಗಿತ್ತು. ಇವನು ೪೯ ವರುಷ ೮ ತಿಂಗಳು ರಾಜ್ಯಭಾರವನ್ನು ಮಾಡಿ, ಹಿಂದೂಜನರ ಮನಸ್ಸನ್ನೊಲಿಸಿ ಕೊಂಡು ತನ್ನ ರಾಜ್ಯವನ್ನು ವಿಸ್ತರಿಸಿ, ಶತ್ರುಗಳನ್ನು ನಿಗ್ರಹಿಸಿ, ಗುಣಿಗಳನ್ನು ಆದರಿಸಿ, ಸ್ವರ್ಗಸ್ಥನಾದುದರಿಂದ ಇವನ ಕೀರ್ತಿಯು ಈ **ಭರತಖಂಡ** ದಲ್ಲಿ ಆಚಂದ್ರಾರ್ಕವಾಗಿರುವುದೆನ್ನಲಿಕ್ಕೇನೂ ಸಂಶಯವಿಲ್ಲ. ಆಗ್ರಾದ

ವಾಯುವ್ಯಕ್ಕೆ ೫ ಮೈಲಿ ದೂರದಲ್ಲಿರುವ **ಸಿಕಂದರ**ವೆಂಬ ಹಳ್ಳಿಯೊಳಗೆ ಇವನು ತಾನಿರುವಾಗಲೇ ಕಟ್ಟಿಸಲಾರಂಭಿಸಿದ ಗೋರಿಯಲ್ಲಿ ಇವನ ದೇಹವನ್ನು ಹೂಳಿದರು. ಮುಂದೆ **ಜಹಂಗೀರ**ನು ೧೬೧೩ರಲ್ಲಿ ಮುಗಿಸಿದ ಈ ರಮಣೀಯವಾದ ಗೋರಿಯನ್ನು ಈಗಲೂ ನೋಡಬಹುದು. ಇದರ ಸುತ್ತಲು ೧೫೦ ಎಕರೆ ವಿಸ್ತಾರವಾದ ಹುದೋಟವು ಇರುತ್ತದೆ.

---

# ೫ನೆಯ ಅಧ್ಯಾಯ

## ಅಕ್ಬರನೂ ರಜಪೂತರೂ

ಈ ದೇಶದಲ್ಲಿರುವ ಅನೇಕಜಾತಿಯವರಲ್ಲಿ ರಜಪೂತರು ಕಡುಗಲಿಗಳೆಂದು ಹೆಸರಾಗಿರುತ್ತಾರಷ್ಟೆ. ಪೂರ್ವಕಾಲದಲ್ಲಿ ಈ ದೇಶಕ್ಕೆ ದಂಡೆತ್ತಿ ಬಂದ ಮುಸಲ್ಮಾನರೊಡನೆ ಒಟ್ಟುಗೂಡಿ ಹೋರಾಡಿದವರು ಇವರೇ. **ಗಜನಿ ಮುಹಮ್ಮದ**ನು ಈ ದೇಶಕ್ಕೆ ದಂಡೆತ್ತಿ ಬಂದಾಗ ರಜಪೂತರೇ ಅವನನ್ನು ೨-೩ ಸಾರಿ ಕಲಿತನದಿಂದ ಎದುರಿಸಿದರು. ಈ ಕಾಲದಲ್ಲಿ ಅವರು ತೋರಿಸಿದ ದೇಶಾಭಿಮಾನವನ್ನೂ, ಧರ್ಮಾಭಿಮಾನವನ್ನೂ ಎಷ್ಟು ಹೊಗಳಿದರೂ ತೀರದು. ಮುಂದೆ ಬಂದ ಮುಸಲ್ಮಾನರಿಗೂ ಇವರು ದೊಡ್ಡ ಬಾವುಗನಂತೆ* ತೋರುತ್ತಿದ್ದರು. **ಅಕ್ಬರ ಬಾದಷಹ**ನ ಅಜ್ಜನಾದ **ಬಾಬರ**ನೊಡನೆ ಕಾದುವಾಗ, ಇವರು ತೋರಿಸಿದ ಶೂರತನವನ್ನೂ, ಸ್ವಾಮಿಭಕ್ತಿಯನ್ನೂ, ದೇಶಾಭಿಮಾನವನ್ನೂ, ಸ್ತ್ರೀಮರ್ಯಾದಾರಕ್ಷಣಲೋಲುಪತೆಯನ್ನೂ ಬಣ್ಣಿಸಲಳವಲ್ಲ. ಮುಂದೆ **ಬಾಬರ**ನು ಸತ್ತ ಬಳಿಕ **ಹುಮಾಯೂನ**ನು ತಿರುಗಿ **ಡಿಲ್ಲಿ**ಯ ಗಾದಿಯನ್ನು ಸಂಪಾದಿಸುವ ವರೆಗೆ ರಜಪೂತರು, ಆ ಕಾಲದ ಮುಸಲ್ಮಾನರ ಅರಸರನ್ನು ಮಗ್ಗುಲಿನಲ್ಲಿ ನೆಟ್ಟಮುಳ್ಳಿನಂತೆ ಬಾಧಿಸುತ್ತಿದ್ದರು. ಇಂತಹ ರಜಪೂತರು **ಅಕ್ಬರ**ನು ಪಟ್ಟವೇರಿದ ಕೂಡಲೆ ಅವನಿಗೆ ವಿಧೇಯರಾದುದು ಆಶ್ಚರ್ಯವಲ್ಲವೇ? ಅವರು ಮೊಗಲರ ರಾಜ್ಯ

---

* ದೊಡ್ಡ ಗಂಡು ಬೆಕ್ಕು. ನೋಡಿದವರಲ್ಲಿ ಭಯ ಹುಟ್ಟಿಸುವ ಮನುಷ್ಯ.

ವನ್ನು ವಿಸ್ತರಿಸಲಿಕ್ಕೆ **ಬಾದಷಹ**ನಿಗೆ ಮನಃಪೂರ್ವಕವಾಗಿ ನೆರವಾದುದು ಹೆಚ್ಚು ಸೋಜಿಗವಲ್ಲವೇ? ಇದೂ ಅಲ್ಲದೆ ಅವರು ತಮ್ಮ ಧರ್ಮಾಭಿಮಾನವನ್ನು ತೊರೆದು ಮೊಗಲರಿಗೆ ತಮ್ಮ ಹೆಣ್ಣುಮಕ್ಕಳನ್ನು ಮದುವೆ ಮಾಡಿಕೊಟ್ಟು ಅವರೊಳಗೆ ಬೆರೆತುಕೊಂಡುದು ಅತ್ಯದ್ಭುತವಾದ ಸಂಗತಿಯಲ್ಲವೇ? ಇಂತಹ ಅತ್ಯಾಶ್ಚರ್ಯಕರವಾದ ರೂಪಾಂತರವು **ಅಕ್ಬರ ಬಾದಷಹ**ನ ಜಾಣ್ಮೆಚದುರತನಗಳಿಂದ ಹೇಗಾದವೆಂಬದನ್ನು ಈ ಅಧ್ಯಾಯದಲ್ಲಿ ವಿವರಿಸುವೆವು.

**ಬಾಬರ**ನ ಕಾಲದಲ್ಲಿ ಮೊಗಲರಿಗೂ ರಜಪೂತರಿಗೂ ಕಡುಹಗೆತನವಿತ್ತೆಂಬುದು **ಸಿಕ್ರಿ**ಯ (೬೭) ಕಾಳಗ, **ಚಾಂದೇರಿ** (೬೮) ಮುತ್ತಿಗೆಗಳಿಂದ ಸ್ಪಷ್ಟವಾಗಿ ತೋರುತ್ತದೆ. ಆದರೆ ಮುಂದೆ **ಹುಮಾಯೂನ**ನ ಆಳಿಕೆಯಲ್ಲಿ ಇದು ಕೊಂಚ ಕಡಿಮೆಯಾಯಿತು. ಇಷ್ಟೇ ಅಲ್ಲ; **ಹುಮಾಯೂನ**ನು **ಚಿತ್ತೂ**ರಿನ ರಾಣಿಯಾದ **ಕರ್ಣಾವತಿ**ಯ **ರಾಖಿಬಂದ** ಭಾಯಿ (ಕಡಗ ಕೊಟ್ಟ ಸಹೋದರನು)ಯಾಗಿದ್ದನು. ಈ **ರಾಖಿಬಂದಿ**ನ ಕ್ರಮವು ವಿಚಿತ್ರವಾದುದಾಗಿರುತ್ತದೆ. ಬೇಸಗೆಕಾಲದಲ್ಲಿ ಈ **ರಾಖಿ**ಯ (ಕಡಗದ) ಸಮಾರಂಭವಾಗುತ್ತದೆ. ಆಗ ರಜಪೂತರ ತರುಣಿಯರು ತಮ್ಮ ಮನಸ್ಸಿಗೆ ಬಂದ ಗೃಹಸ್ಥನಿಗೆ, ಅವನು ಆಪ್ತನಾಗಲಿ, ಬೇರೆಯವನಾಗಲಿ, ರಜಪೂತನಾಗಲಿ, ಎರಡನೆಯ ಜಾತಿಯವನಾಗಲಿ ಒಂದು ಕಡಗವನ್ನು ಕಳುಹಿ ಅವನು ತಮ್ಮನ್ನು ಸಲಹುವ ಅಣ್ಣನೆಂದೆಣಿಸುತ್ತಾರೆ. ಅವನು ಆಕೆಯನ್ನು ನೋಡುವ ಆವಶ್ಯಕತೆ ಇಲ್ಲದಿದ್ದರೂ ಈ **ರಾಖಿ**ಯನ್ನು ತೆಗೆದುಕೊಂಡ ಗೃಹಸ್ಥನು ಅದನ್ನು ಕಳುಹಿದವಳನ್ನು ಕಷ್ಟಕಾಲ ಬಂದಾಗ ಕಾಪಾಡಬೇಕು. ಈ **ರಾಖಿಬಂದ**ನು ಆಕೆಗೆ ಎಷ್ಟು ಉಪಕಾರ ಮಾಡಿದರೂ ಪ್ರತಿಫಲಕ್ಕೆ ಆಶೆಯನ್ನು ಮಾಡಕೂಡದು. ಈ ಪದ್ಧತಿಯು ಮೊದಲು ಯೂರೋಪ್ ಖಂಡದಲ್ಲಿ ನಡೆಯುತ್ತಿದ್ದ **ಷಿವಾಲ್ರಿ** ಎಂಬ ಅಬಲಾಬಂಧುತ್ವಪದ್ಧತಿಯನ್ನು ಕೆಲಮಟ್ಟಿಗೆ ಹೋಲುತ್ತದೆ. **ಗುಜರಾಥಿ**ನ **ಸುಲ್ತಾನ**ನಾದ **ಬಾಹದ್ದೂರಷಹ**ನು **ಚಿತ್ತೂ**ರಿನ ಕೋಟೆಯನ್ನು ಮುತ್ತಿದಾಗ **ಕರ್ಣಾವತಿ**ಯು **ಹುಮಾಯೂನ**ನಿಗೆ ತನ್ನನ್ನು ಸಂರಕ್ಷಿಸಬೇಕೆಂದು ಬೇಡಿಕೊಂಡಳು (೧೫೩೪). ಆಗ ಅವನು **ಬಂಗಾಲ**

ಪ್ರಾಂತದ ತನ್ನ ಅಭಿಯೋಗವನ್ನಷ್ಟಕ್ಕೇ ನಿಲ್ಲಿಸಿ, **ಬಾಹದ್ದೂರಷಹ**ನನ್ನು ಸೋಲಿಸಿ, **ಕರ್ಣಾವತಿ**ಯು ಮಗನಾದ **ವಿಕ್ರಮಜಿತು**ವನ್ನು ತಿರುಗಿ **ಚಿತ್ತೂರಿ**ನ ಪಟ್ಟದ ಮೇಲೆ ಕುಳ್ಳಿರಿಸಿದನು.

**ಮಾರವಾಡ** ಅಥವಾ **ಜೋಧಪೂರ್** (೬೯) **ಕನೋಜಿನ** ಕಾಳಗವಾದ ಬಳಿಕ **ಷೇರಷಹ**ನಿಂದ ಬೆನ್ನಟ್ಟಲ್ಪಟ್ಟ **ಹುಮಾಯೂನ**ನು, ಹಿಂದೆ (ಎರಡನೆಯ ಅಧ್ಯಾಯದಲ್ಲಿ) ಹೇಳಿದಂತೆ **ಜೋಧಪುರ**ದ (**ಮಾರವಾಡ**ದ) ಅರಸನಾದ **ಮಾಲದೇವ**ನ ಆಶ್ರಯಬೇಡಿದನು. ಅವನು ಆಶ್ರಯಕೊಡದುದರಿಂದ **ಹುಮಾಯೂನ**ನು ಅಲ್ಲಿಂದ ಹೊರಟು, **ಉಮರಕೋಟೆ**ಗೆ ಹೋದನಷ್ಟೇ. **ಮಾಲದೇವ**ನು ತನ್ನ ತಂದೆಗೆ ತನ್ನ ಜನನ ಕಾಲದಲ್ಲಿ ದುಃಖ ಕೊಟ್ಟನೆಂಬ ದ್ವೇಷದಿಂದಲೋ ಬೇರೆ ಯಾವ ಕಾರಣದಿಂದಲೋ **ಅಕ್ಬರ**ನು ರಾಜ್ಯಸೂತ್ರವನ್ನು ಕಯ್ಕೊಂಡ ಕೂಡಲೆ ಅವನ ರಾಜ್ಯವನ್ನು ಒಳ ನುಗ್ಗಿದನು (೧೫೬೧). ಮೊದಲು ಅವನು **ಮಾಲ್ಕೋಟ** (ಮೆತರ್ಾ) (೭೦)ವೆಂಬ ಕೋಟೆಯನ್ನು ಮುತ್ತಿ, ಒಂದು ಕಡುಗಾಳಗದಲ್ಲಿ ರಜಪೂತರನ್ನು ಸೋಲಿಸಿ, ಅದನ್ನು ಹಿಡಿದುಕೊಂಡನು. ಬಳಿಕ **ನಾಗೋರ** ಕೋಟೆಯು (೭೧) ಅವನ ಕಯ್ಸೇರಿತು (೧೫೬೧). ಆಗ **ಅಕ್ಬರ**ನು ರಜಪೂತರಲ್ಲಿ ಭೇದಹುಟ್ಟಿಸುವ ಉದ್ದೇಶದಿಂದ ಈ ಕೋಟೆಗಳನ್ನೂ ಇವುಗಳಿಗೆ ಸೇರಿದ ಊರುಗಳನ್ನೂ, **ಮಾಲದೇವ**ನ ಮಾಂಡಲಿಕನೂ **ಬಿಕಾನೇರಿ**ನ (೭೨) ಅರಸನೂ ಆದ **ರಾಯಸಿಂಗ**ನಿಗೆ ಕೊಟ್ಟು, ಅವನನ್ನು ತನ್ನ ಆಶ್ರಿತನನ್ನಾಗಿ ಮಾಡಿಕೊಂಡನು. ಮುಂದೆ ೬-೭ ವರ್ಷಗಳ ವರೆಗೆ ಕಾದಿ ತನ್ನ ಪ್ರಯತ್ನಗಳೆಲ್ಲ ವ್ಯರ್ಥವಾದುದನ್ನು ನೋಡಿ, **ಮಾಲದೇವ**ನು ತನ್ನ ಎರಡನೆಯ ಮಗನಾದ **ಚಂದ್ರಸೇನ**ನನ್ನು **ಅಕ್ಬರ**ನಿದ್ದೆಡೆಗೆ ಕಳುಹಿದನು (೧೫೬೯). ಆಗ **ಬಾದಷಹ**ನು **ಅಜಮೀರ**ದಲ್ಲಿದ್ದನು. ಅವನು **ಮಾಲದೇವ**ನು ತಾನೇ ಬಾರದುದನ್ನು ನೋಡಿ, ಕೋಪಗೊಂಡು, **ಜೋಧಪುರ**ವನ್ನು ತನ್ನ ಆಶ್ರಿತನಾದ **ರಾಯಸಿಂಗ**ನಿಗೆ ಉಂಬಳಿಹಾಕಿಕೊಟ್ಟು, ತನ್ನ ದಂಡಿನವರಿಗೆ ಅದನ್ನು ಮುತ್ತಲಿಕ್ಕೆ ಅಪ್ಪಣೆ ಕೊಟ್ಟನು. ಆಗ ಮುದುಕನಾದ **ಮಾಲದೇವ**ನು ನಿರುಪಾಯನಾಗಿ ತನ್ನ ಹಿರಿಯ ಮಗನಾದ **ಉದಯಸಿಂಗ**ನನ್ನು **ಬಾದಷಹ**ನ

ಬಳಿಗೆ ಕಳುಹಿದನು. ಈ **ಉದಯಸಿಂಗ**ನು ತನ್ನ ತಮ್ಮನಂತೆ ಸ್ವಜನಾಭಿಮಾನಿಯೂ, ಸ್ವಾತಂತ್ರ್ಯಪ್ರೀತಿಯುಳ್ಳವನೂ ಅಲ್ಲದುದರಿಂದ **ಬಾದಷಹ**ನು ಅವನನ್ನು ಸಾವಿರ ಮಂದಿ ಸವಾರರ ಮುಖ್ಯಸ್ಥನನ್ನು ಮಾಡಿದುದಲ್ಲದೆ, ಅವನಿಗೆ **ಮೋಟರಾಜ** (ಹೆಬಗರಸು)* ಎಂಬ ಹೆಸರನ್ನು ಕೊಟ್ಟನು. ಮುಂದೆ **ಮಾಲದೇವ**ನು ಬಹಳ ದಿವಸ ಬಾಳಲಿಲ್ಲ; ಅವನು ಕೂಡಲೆ ತೀರಿ ಹೋದನು (೧೫೬೯).

ತನ್ನಣ್ಣನು ಹೀಗೆ ಮೊಗಲರ ಆಶ್ರಿತನಾದುದು **ಚಂದ್ರಸೇನ**ನ ಮನಸ್ಸಿಗೆ ಸರಿಬರಲಿಲ್ಲ. ಅವನು ದಂಡು ಕೂಡಿಸಿಕೊಂಡು **ಮಾರವಾಡ**ದ ಪಡುವಲಲ್ಲಿದ್ದ **ಸೇವಾನ್** (೭೩) ಎಂಬ ಕೋಟೆಯಲ್ಲಿ ನಿಂತು ತಾನು ಸಾಯುವ ವರೆಗೂ (೧೫೮೪) ಮೊಗಲರೊಡನೆ ಕಾದಿದನು.

ತಂದೆಯು ಸತ್ತ ಬಳಿಕ **ಉದಯಸಿಂಗ**ನು ತನ್ನ ತಂಗಿಯಾದ **ಜೋಧಬಾಯಿ**ಯನ್ನು **ಅಕ್ಬರ**ನಿಗೆ ಮದುವೆಮಾಡಿಕೊಟ್ಟನು. ಸ್ವಧರ್ಮಾಭಿಮಾನಿಯಾದ **ಮಾಲದೇವ**ನು ತನ್ನ ಮಗಳು ಮೊಗಲರ **ಬಾದಷಹ**ನ ರಾಣಿಯಾದುದನ್ನು ನೋಡದೆ ಸತ್ತುದರಿಂದ ಅವನು ಪುಣ್ಯವಂತನೇ ಸರಿ. ಅವನು ಇನ್ನೂ ಕೆಲವು ದಿವಸವಿದ್ದರೆ ಮೊಗಲರೊಡನೆ ಜಗಳಹೂಡಿದ **ಮೇವಾಡ**ದ (೭೪) ಅರಸನಾದ **ಪ್ರತಾಪಸಿಂಗ**ನಿಗೆ ಬೆಂಬಲವಾಗುತ್ತಿದ್ದನು ಎನ್ನಲಿಕ್ಕಡ್ಡಿಯಿಲ್ಲ.

**ಜೋಧಬಾಯಿ**ಯನ್ನು ಮದುವೆಯಾದ ಬಳಿಕ **ಅಕ್ಬರ**ನು **ಅಜಮೀರಿ**ನ ಹೊರತು ಪೂರಾ **ಮಾರವಾಡ**ವನ್ನು ತನ್ನ ಬೀಗನಿಗೆ ಕೊಟ್ಟನು. ತರುವಾಯ **ಉದಯಸಿಂಗ**ನು ಮೊಗಲರ ಸಹಾಯದಿಂದ ೧೪೦೦ ಹೊಸ ಹಳ್ಳಿಗಳನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡನು. ಈ ಒಟ್ಟು ರಾಜ್ಯದ ವಾರ್ಷಿಕ ಕಂದಾಯವು ೩೦,೦೦,೦೦೦ ರೂಪಾಯಿ ಆಯಿತು. ಇವನಿಗೆ ೧೭ ಮಂದಿ ಗಂಡು ಮಕ್ಕಳಿದ್ದರು. ಅವರೊಳಗೆ ಹಿರಿಯವನಾದ **ಸೂರಸಿಂಗ**ನು **ಲಾಹೋರಿ**ನಲ್ಲಿ ಮೊಗಲರ ದಳವಾಯಿಯಾಗಿದ್ದನು. **ಉದಯಸಿಂಗ**ನಿರುವಾಗಲೇ ಇವನು ತನ್ನ ಪರಾಕ್ರಮವನ್ನು ತೋರಿಸಿ **ಬಾದಷಹ**ನಿಂದ '**ಸವಾಯಿರಾಜ**'ನು ಎಂಬ ಬಿರುದನ್ನು ಪಡೆದನು. **ರಾಜಾ**

---

* ದಾಂಡಿಗ ದೊರೆ.

**ಸೂರನು ಬಾದಷಹನ** ಅಪ್ಪಣೆಯಂತೆ **ಸಿರೋಹಿಯ** (೭೫) ಅರಸನನ್ನು ಗೆದ್ದು, **ಗುಜರಾಥಿನ** ಅರಸನನ್ನು **ದುಂಡೋಕಿನ** (೭೬) ಕಾಳಗದಲ್ಲಿ ಸೋಲಿಸಿದನು. ಈ ಗೆಲವಿನ ಸುದ್ದಿಯನ್ನು ಕೇಳಿ **ಬಾದಷಹನು** ಸಂತುಷ್ಟನಾಗಿ, **ರಾಜಾಸೂರನ** ಮನಸೂಬನ್ನು ಹೆಚ್ಚಿಸಿದುದಲ್ಲದೆ, ಒಂದು ಕತ್ತಿಯನ್ನು ಅವನಿಗೆ ಇನಾಮಾಗಿ ಕಳುಹಿ, ಕೆಲವು ಭೂಮಿಯನ್ನು ಉಂಬಳಿ ಹಾಕಿಕೊಟ್ಟನು. ತರುವಾಯ **ರಾಜಾಸೂರನು** ದಕ್ಷಿಣದೇಶವನ್ನು ನುಗ್ಗಿ, ಅಲ್ಲಿಯ ಅರಸನಾದ **ಅಮರವಲೇಖನನ್ನು** ಸೋಲಿಸಿ, ಅವನ ರಾಜ್ಯವನ್ನು ಹಿಡಿದುಕೊಂಡನು. ಈ ಗೆಲವಿಗೋಸ್ಕರ **ಬಾದಷಹನು** ಅವನಿಗೆ ಒಂದು ನೌಬತ್ತನ್ನು ಕಳುಹಿದುದಲ್ಲದೆ, **ಧಾರಾ**(೭೭) ಪ್ರಾಂತವನ್ನು ಉಂಬಳಿಯಾಗಿ ಕೊಟ್ಟನು.

**ಉದಯಸಿಂಗನಿಗೆ** ೧೭ ಮಂದಿ ಹೆಣ್ಣು ಮಕ್ಕಳೂ, ೧೭ ಮಂದಿ ಗಂಡು ಮಕ್ಕಳೂ ಇದ್ದರು. ಹಿರಿಯ ಮಗನಾದ **ರಾಜಾಸೂರನ** ವಿಷಯವಾಗಿ ಮೇಲೆ ಹೇಳಿರುತ್ತೇವಷ್ಟೆ. ಇವನೇ ಮುಂದೆ **ಜೋಧಪುರದ** ಅರಸನಾದನು. ಉಳಿದ ಗಂಡು ಮಕ್ಕಳಲ್ಲಿ ಕೆಲವರು **ರತ್ಲಾಮ್** (೭೮), **ಕಿಸನಗಡ** (೭೯), **ರೂಪನಗಡ** (೮೦), **ಗೋವಿನಗಡ** (೮೧), **ಪಿಸನಗಡ**(೮೨) ಮುಂತಾದ ಸಂಸ್ಥಾನಗಳನ್ನು ಸ್ಥಾಪಿಸಿದರು. ಇವರ ವಂಶದವರಲ್ಲಿ ಕೆಲವರು ಈಗಲೂ ಆಯಾ ಸಂಸ್ಥಾನಗಳಲ್ಲಿ ಆಳುತ್ತಿರುತ್ತಾರೆ. **ಉದಯಸಿಂಗನು** ೧೬೦೨ರಲ್ಲಿ ಸತ್ತನು.

ಇವನ ಮರಣದ ಕಾರಣವು ಸೋಜಿಗವಾದುದಾಗಿರುವದರಿಂದ ಅದನ್ನು ಇಲ್ಲಿ ಸಂಕ್ಷೇಪವಾಗಿ ತಿಳಿಸುತ್ತೇವೆ:—**ಉದಯಸಿಂಗನು ಡಿಲ್ಲಿಯ** ದರಬಾರಿನಿಂದ ತನ್ನ ನಾಡಿಗೆ ತಿರುಗಿ ಬರುವಾಗ ದಾರಿಯಲ್ಲಿ ಒಬ್ಬ ಸುಂದರಿಯಾದ ಬ್ರಾಹ್ಮಣಕುಮಾರಿಯನ್ನು ಮೋಹಿಸಿದನು. ಈ ಸುದ್ದಿಯು ಆಕೆಯ ತಂದೆಗೆ ತಿಳಿದ ಕೂಡಲೆ ಅವನು ರೇಗಿ ಚಿತಿಯನ್ನು ಮಾಡಿ, ತನ್ನ ಮಗಳನ್ನು ಕಡಿದು, ಆ ಚಿತಿಯಲ್ಲಿ ಹಾಕಿ, ಆಕೆಯನ್ನು ಅವಮಾನ ಮಾಡಿದವನು ೩ ಪ್ರಹರದಲ್ಲಿಯಾಗಲಿ, ೩ ದಿವಸಗಳಲ್ಲಿಯಾಗಲಿ, ೩ ವರ್ಷಗಳಲ್ಲಿಯಾಗಲಿ ಹಾಳಾಗಿ ಹೋಗಲೆಂದು ಶಪಿಸಿ, ತಾನೂ ಆ ಚಿತಿಯಲ್ಲಿ ಬಿದ್ದು ಪ್ರಾಣ ಬಿಟ್ಟನು. ಈ ಸುದ್ದಿಯನ್ನು ಕೇಳಿದ **ಉದಯಸಿಂಗನು** ಮುಂದೆ ೨-೩ ತಿಂಗಳಲ್ಲಿಯೇ ಹೊಟ್ಟೆ ಬೇನೆಯಿಂದ ಸತ್ತನು.

**ಅಕ್ಬರ**ನು ತಾನು ಹಿಡಿದುಕೊಂಡ ಕೆಲವು ಸ್ಥಳಗಳನ್ನು **ಮಾರ ವಾಡ**ದ ಮಾಂಡಲಿಕನಾದ **ರಾಯಸಿಂಗ**ನಿಗೆ ಕೊಟ್ಟನೆಂದು ಹಿಂದೆ ಹೇಳಿ ರುತ್ತೇವಷ್ಟೆ. ಈ **ರಾಯಸಿಂಗ**ನು **ಅಕ್ಬರ**ನ ಪಕ್ಷ್ಷದಕನಾಗಿದ್ದನು. **ರಾಯ ಸಿಂಗ**ನ ತಂದೆಯಾದ **ಕಲ್ಯಾಣಸಿಂಗ**ನು ೧೫೭೩ರಲ್ಲಿ ತೀರಿ ಹೋದನು. ಆಗ **ರಾಯಸಿಂಗ**ನು ಅವನ ಅಸ್ಥಿಗಳನ್ನು **ಭಾಗೀರಥಿ**ಯಲ್ಲಿ ಹಾಕಲಿಕ್ಕೆ **ಕಾಶಿ**ಗೆ ಹೋಗಿ ತಿರುಗಿ ಬರುವಾಗ **ಬಾದಷಹ**ನನ್ನು ಕಾಣಲಿಕ್ಕೆ **ದಿಲ್ಲಿ**ಗೆ ಹೋದನು. ಆ ದರಬಾರಿನಲ್ಲಿದ್ದ **ರಾಜಾಮಾನಸಿಂಗ**ನು ಇವನಿಗೆ **ಬಾದ ಷಹ**ನ ದರುಶನ ಮಾಡಿಸಿದನು. ಆಗ **ಬಾದಷಹ**ನು ಇವನಿಗೆ ೪೦೦೦ ಸವಾರರ ಮನಸುಬ್ದಾರಿಯನ್ನೂ **ಹಿಸ್ಸಾರ್** (೮೩) ಪ್ರಾಂತದ ಸುಭೇದಾರಿ ಯನ್ನೂ ಕೊಟ್ಟುದಲ್ಲದೆ, ಮುಂದೆ ಕೆಲವು ದಿವಸಗಳ ತರುವಾಯ ಹಿಂದೆ ಹೇಳಿದಂತೆ **ಮಾಲದೇವ**ನ ರಾಜ್ಯದ ಕೆಲವು ಭಾಗವನ್ನೂ ಕೊಟ್ಟನು. **ರಾಯಸಿಂಗ**ನು ತನ್ನ ತಮ್ಮನಾದ **ರಾಮಸಿಂಗ**ನನ್ನು ದಂಡಿನೊಡನೆ ಕಳುಹಿ **ಭಟೆಯಾನಾ** (೮೪) ಪ್ರಾಂತವನ್ನು ಗೆದ್ದುಕೊಂಡನು. ಮುಂದೆ **ರಾಮಸಿಂಗ**ನು **ಜೋಹಿಯೂರ** ಪ್ರಾಂತವನ್ನು ನಿರ್ನಾಮ ಮಾಡಿ **ಪುನ್ನಿ ಯಾರ್** (೮೫) ಪ್ರಾಂತವನ್ನು ಗೆದ್ದುಕೊಂಡನು.

**ಅಕ್ಬರ**ನು ಮಾಡಿದ ಎಲ್ಲ ಯುದ್ಧಗಳಲ್ಲಿ **ರಾಯಸಿಂಗ**ನು ತನ್ನ ದಂಡಿನೊಡನೆ ಅವನಿಗೆ ನೆರವಾದನು. **ಅಹಮ್ಮದಾಬಾದಿ**ನ ಮುತ್ತಿಗೆ ಯಲ್ಲಿ ಅವನು ಅಲ್ಲಿಯ ಅಧಿಪತಿಯಾದ **ಮಿರ್ಜಾ ಮಹಮ್ಮದ್ ಹುಸೇ ನ**ನನ್ನು ದ್ವಂದ್ವಯುದ್ಧದಲ್ಲಿ ಕೊಂದನು. ಇಂತಹ ಕಲಿಯ ಉಪಯೋಗ ವನ್ನು ಅರಿತಂತಹ **ಬಾದಷಹ**ನು ತನ್ನ ಹಿರಿಯ ಮಗನಾದ **ಸೆಲೀಮ**ನಿಗೆ **ರಾಯಸಿಂಗ**ನ ಮಗಳನ್ನು ಮದುವೆ ಮಾಡಿದನು. ಈ ಸಂಬಂಧದಿಂದಲೇ ಮುಂದೆ ದುರ್ದೈವಿಯಾದ **ಪರ್ವಿಜ**ನು ಹುಟ್ಟಿದನು.

**ಅಂಬರ್** (೮೬) ಅಥವಾ **ಜಯಪುರ**—ಈ ದೇಶದ ಅರಸರು ತಾವು ಪೂರ್ವಕಾಲದಲ್ಲಿ ಹೆಸರಾದ **ನಳ-ದಮಯಂತಿ**ಯರ ವಂಶೀಯ ರೆಂದು ಹೇಳುತ್ತಾರೆ. **ಮೊಗಲರ** ರಾಜ್ಯಸ್ಥಾಪಕನಾದ **ಬಾಬರ**ನು ಈ ದೇಶಕ್ಕೆ ಕಡೆಯಸಾರಿ ಬಂದ ಸಮಯದಲ್ಲಿ **ರಾಜಾಬಹರಮಲ್ಲ**ನು **ಜಯ ಪುರ**ದ ಅರಸನಾಗಿದ್ದನು. ಆ ಕಾಲದಲ್ಲಿ ರಜಪೂತರ ದೇಶಾಭಿಮಾನವು

ಅಳಿದುಹೋಗಿದ್ದುದರಿಂದಲೂ ಅವರಲ್ಲಿದ್ದ ಒಗ್ಗಟ್ಟು ಕಡಿಮೆಯಾದುದರಿಂದಲೂ ಈ **ಬಹರಮಲ್ಲ**ನು **ಬಾಬರ**ನ ಸಹಾಯಕನಾದನು. ಮುಂದೆ **ಹುಮಾಯೂನ**ನು ಪಟ್ಟವೇರಿದ ಬಳಿಕ ಇವನು ಮೊಗಲರ ದಂಡಿನಲ್ಲಿ ೫೦೦೦ ಸವಾರರ ಮನಸುಬ್ದಾರನಾದನು. ಈ **ಬಹರಮಲ್ಲ**ನ ಮಗನೇ **ರಾಜಾ ಭಗವಾನ್‌ದಾಸ**ನು. ಇವನೇ ಮೊದಲು **ಅಕ್ಬರ ಬಾದಷಹ**ನೊಡನೆ ಹೆಚ್ಚು ಗೆಳೆತನವನ್ನು ಮಾಡಿ, ಜಾತಿಧರ್ಮಾಭಿಮಾನವನ್ನು ತೊರೆದು, ಮೊಗಲರೊಡನೆ ಶರೀರಸಂಬಂಧವನ್ನು ಮಾಡಲಿಕ್ಕೊಡಂಬಟ್ಟನು. ಆದುದರಿಂದೆಲ್ಲ ರಜಪೂತರು ಇವನನ್ನೂ ಇವನ ವಂಶಜರನ್ನೂ ಈಗಲೂ ಹಳಿಯುತ್ತಾರೆ. ಇವನು ತನ್ನ ಮಗಳನ್ನು ಅರಸುಮಗನಾದ **ಸೆಲೀಮ**ನಿಗೆ ಮದುವೆಮಾಡಿಕೊಟ್ಟನು (೧೫೮೫). ಇದೇ ರಜಪೂತ-ಮೊಗಲರ ನಡುವೆಯಾದ ಮೊದಲನೆಯ ವಿವಾಹವು.* ಈ ವಿವಾಹದಿಂದಲೇ ಮುಂದೆ **ಅಕ್ಬರ**ನ ಅಂತ್ಯಕಾಲದಲ್ಲಿ ಆದ ಒಳಸಂಚಿನ ಕಾರಣನಾದ **ಖುಸ್ರು**ರಾಜನು ಹುಟ್ಟಿದನು.

**ಭಗವಾನ್‌ದಾಸ**ನಿಗೆ **ಸುರತ್‌ಸಿಂಗ, ಮಾಲದೇವಸಿಂಗ, ಜಗತ್‌ಸಿಂಗ**ರೆಂಬ ೩ ಮಂದಿ ತಮ್ಮಂದಿರಿದ್ದರು. ಇವರೊಳಗೆಲ್ಲರಿಗೂ ಚಿಕ್ಕವನಾದ **ಜಗತ್‌ಸಿಂಗ**ನ ಮಗನೇ **ಅಕ್ಬರ**ನ ದರಬಾರಿನಲ್ಲಿ ಹೆಸರುವಾಸಿಯಾದ **ರಾಜಾಮಾನಸಿಂಗ**ನು. ಇವನು **ಬಾದಷಹ**ನಿಗೆ ಮಾಡಿದಷ್ಟು ರಾಜಸೇವೆಯನ್ನು ಉಳಿದ ಯಾವ ರಜಪೂತಸರದಾರರೂ ಮಾಡಲಿಲ್ಲವೆನ್ನಬಹುದು. ಸಾಕಿದ ಆನೆಯು ಕಾಡಾನೆಗಳನ್ನು ತಂದು ಕಪ್ಪಿನಲ್ಲಿ ಬೀಳಿಸುವಂತೆ, ಉಳಿದ ಬೇರೆ ಬೇರೆ ರಜಪೂತ ಅರಸರನ್ನು ಕರೆದು ತಂದು ಇವನು **ಬಾದಷಹ**ನ ಸೇವಕರನ್ನು ಮಾಡಿದನು. ಮತ್ತು ಮುಂದೆ ಮೊಗಲರ ರಾಜ್ಯವನ್ನು ಎಲ್ಲ ಕಡೆಗೆ ಬೆಳಿಸಲಿಕ್ಕೆ **ಬಾದಷಹ**ನಿಗೆ ನೆರವಾದನು.

---

* ಟಾಡ್ ಸಾಹೇಬರು ಇದೇ ರಜಪೂತ-ಮೊಗಲರ ೧ನೆಯ ಶರೀರ ಸಂಬಂಧವೆಂದು ಬರೆಯುತ್ತಾರೆ. ಆದರೆ ವ್ಹಿನ್ಸೆಂಟ ಸ್ಮಿಥ್ ಸಾಹೇಬರು ೧೫೬೨ರಲ್ಲಿ ಅಕ್ಬರನು ಬಹರಮಲ್ಲನ ಹಿರಿಮಗಳನ್ನು ಮದುವೆಯಾದನೆಂತಲೂ, ಆಕೆಯಿಂದ ಸೆಲೀಮನು ಹುಟ್ಟಿದನೆಂತಲೂ, ಸತ್ತ ಬಳಿಕ ಆಕೆಗೆ ಮರಿಯುಮ್ ಝುಮಾನಿ (ಜಗ ಕಾಲದ ಮೇರಿ) ಎಂಬ ಬಿರುದು ಕೊಡಲ್ಪಟ್ಟಿತೆಂತಲೂ ಬರೆಯುತ್ತಾರೆ.



ರಾಜಾ ಮಾನಸಿಂಗ

ಇವನೇ **ಅಸಾಮ್, ಒರಿಸಾ** ಪ್ರಾಂತಗಳನ್ನು ಗೆದ್ದನು. ಇವನೇ **ಬಿಹಾರ, ಹಾಜಿಪುರ, ಪಾಟ್ನಾ, ಕಾಬೂಲು, ದಕ್ಷಿಣಪ್ರಾಂತ** ಮುಂತಾದುವುಗಳ ಅಧಿಪತಿಯಾಗಿ **ಬಾದಷಹನ** ಅಧಿಕಾರವನ್ನು ನೆಲೆಗೊಳಿಸಿದನು. **ಸಲೀಮನು** ಪಟ್ಟವೇರಿದ ಬಳಿಕ ಇವನು **ಬಂಗಾಲ** ಪ್ರಾಂತದ ಅಧಿಪತಿಯಾಗಿ ೧೬೧೫ರಲ್ಲಿ ತೀರಿಹೋದನು.

**ಬುಂದಿ-ಅಕ್ಬರನು ಡಿಲ್ಲಿಯ ಬಾದಷಹ**ನಾದಾಗ **ಸುರಜನಹರ**ನೆಂಬುವನು **ಬುಂದಿ**ಯ ಅರಸನಾಗಿದ್ದನು.* ಹಿಂದೆ ೨ನೆಯ ಅಧ್ಯಾಯದಲ್ಲಿ ಹೇಳಿದಂತೆ **ಬುಂದಿ**ಯ ಸಂಸ್ಥಾನಕ್ಕೆ ಸೇರಿದ **ರಂತಂಭರ** ಕೋಟೆಯನ್ನು **ಅಕ್ಬರ ಬಾದಷಹ**ನು ಮುತ್ತಿದನು (೧೫೬೯). ಈ ಬಲಾಢ್ಯವಾದ ಕೋಟೆಯು ಬೇಗನೆ ಮೊಗಲರ ಕಯ್ಸೇರಲಿಲ್ಲ. ಮುತ್ತಿಗೆಯು ನಡೆದಾಗ ಒಂದು ದಿನ **ಭಗವಾನ್‍ದಾಸ**ನೂ **ರಾಜಾಮಾನಸಿಂಗ**ನೂ **ಸುರಜನಹರ**ನನ್ನು ಕಾಣಲಿಕ್ಕೆ ಹೋದರು. ಆಗ **ಅಕ್ಬರ**ನು ಬೆತ್ತಹಿಡಿಯುವ ಆಳಿನ ಸೋಗು ಹಾಕಿಕೊಂಡು, ಅವರೊಡನೆ ಹೋದನು. ಎಲ್ಲರೂ ಕುಳಿತುಕೊಂಡ ಬಳಿಕ **ಸುರಜನಹರ**ನ ಕಕ್ಕನು **ಬಾದಷಹ**ನನ್ನು ಗುರುತು ಹಿಡಿದು, ಅವನ ಕಯ್ಯಿಂದ ಬೆತ್ತವನ್ನು ತೆಗೆದುಕೊಂಡು, ಅವನನ್ನು ಗಾದಿಯಮೇಲೆ ಕುಳ್ಳಿರಿಸಿದನು. ಅದನ್ನು ನೋಡಿ ಎಲ್ಲರೂ ಚಕಿತರಾದರು. ಆಗ **ಸುರಜನಹರ**ರಾಯರೆ, ಮುಂದೆ ಹೇಗೆ ಮಾಡಬೇಕೆಂದು **ಅಕ್ಬರ**ನು ಕೇಳಿದುದಕ್ಕೆ, **ರಾಜಾಮಾನಸಿಂಗ**ನು ಹೇಗೆ ಮಾಡುವದೇನಿದೆ? **ಸುರಜನ**ನು **ಚಿತ್ತೂರಿ**ನ ರಾಣನನ್ನು ಬಿಟ್ಟು **ರಂತಂಭರ**ವನ್ನು ತಮಗೊಪ್ಪಿಸಿ ತಮ್ಮ ಕಯ್ಕೆಳಗೆ ದೊಡ್ಡ ಅಧಿಕಾರವನ್ನು ಪಡೆಯುವುದೇ ಉತ್ತಮಪಕ್ಷವೆಂದನು. ಮುಂದೆ ಕೊಂಚ ವಾಗ್ವಾದ ನಡೆದು ಕೆಳಗೆ ಬರೆದ ಷರತ್ತುಗಳು ಗೊತ್ತಾದುವು:—

೧. **ಬುಂದಿ**ಯ ಅರಸರ ಮನೆತನದ ಹೆಣ್ಣು ಮಕ್ಕಳನ್ನು (ಡೋಲರನ್ನು) ತಮ್ಮ ಅರಮನೆಗೆ ಕಳುಹಬೇಕೆಂದು ಮೊಗಲರ **ಬಾದಷಹ**ನು ಹೇಳಕೂಡದು.

---

* ಇವನು ೧೫೪೪ರಲ್ಲಿ ಪಟ್ಟವೇರಿದನು. ಇವನು ಚಿತ್ತೂರಿನ ರಾಣನ ಮಾಂಡಲಿಕನಾಗಿದ್ದನು.

೨. ಅವನು **ಬುಂದಿ**ಯ ಅರಸರ ಮೇಲೆ **ಜಿಜಿಯಾ**ಯೆಂಬ ತೆರಿಗೆಯನ್ನು ಹಾಕಕೂಡದು.

೩. ಅವನು **ಬುಂದಿ**ಯ ಅರಸರಿಗೆ **ಅಟಕ್ಕಿ**ನ ಮುಂದೆ ಹೋಗಲಿಕ್ಕೆ ಹೇಳಕೂಡದು.

೪. **ನೊರೋಜಾ*** ಹಬ್ಬದೊಳಗೆ **ಡಿಲ್ಲಿ**ಯ ಅರಮನೆಯಲ್ಲಿ ನಡೆಯುವ **ಮೀನಾ** ಬಜಾರಿಗೆ **ಬುಂದಿ**ಯ ಮಾಂಡಲಿಕರು ತಮ್ಮ ಹೆಂಡಂದಿರನ್ನೂ, ಹೆಣ್ಣು ಮಕ್ಕಳನ್ನೂ ಕಳುಹಬೇಕೆಂದು ಹೇಳಕೂಡದು.

೫. **ಬುಂದಿ**ಯ ಅರಸರು ತಮ್ಮ ಶಸ್ತ್ರಾಸ್ತ್ರಗಳೊಂದಿಗೆ **ಬಾದಷಹ**ನ ದಿವಾನ ಖಾನೆಯೊಳಗೆ ಬರಲು ಅಡ್ಡಿಯಿರಬಾರದು.

೬. **ಬುಂದಿ**ಯ ಅರಸರ ಮಠಗುಡಿಗಳನ್ನು ಮೊಗಲರು ಕೆಡಿಸಬಾರದು.

೭. **ಬುಂದಿ**ಯ ಅರಸರಿಗೆ ಮೊಗಲರ **ಬಾದಷಹ**ರು ಹಿಂದೂ ದಳವಾಯಿಗಳ ಕಯ್ಕೆಳಗೆ ಕೆಲಸ ಮಾಡಲು ಎಂದೂ ಹೇಳಕೂಡದು.

೮. **ಬುಂದಿ**ಯ ಅರಸರ ಕುದುರೆಗಳಿಗೆ ಮೊಗಲರ ಡಾಗನ್ನು† ಎಂದಿಗೂ ಹಾಕಕೂಡದು.

೯. **ಬುಂದಿ**ಯ ಅರಸರಿಗೆ ತಮ್ಮ ನಕರವನ್ನು (ನಗಾರಿಯನ್ನು) ರಾಜಧಾನಿಯ ಬೀದಿಗಳಲ್ಲಿ **ಲಾಲ್‌ದರವಾಜಿ**ನ (ಕೆಂಬಾಗಿಲಿನ) ವರೆಗೆ ಹೊಡಿಸಲು ಅಡ್ಡಿಯಿರಬಾರದು; ಮತ್ತು ಅವರಿಗೆ **ಬಾದಷಹ**ನ ಮುಂದೆ ಬಂದಾಗ ಅಡ್ಡ ಬೀಳದೆ ನಿಂತು ನಮಸ್ಕಾರ ಮಾಡಲು ಅಪ್ಪಣೆ ಇರಬೇಕು.

೧೦. **ಡಿಲ್ಲಿ**ಯು ಮೊಗಲರ ರಾಜಧಾನಿಯಾಗಿದ್ದಂತೆ **ಬುಂದಿ**ಯು **ಸುರಜನಹರ**ನ ರಾಜಧಾನಿಯಾಗಿರಬೇಕು.

**ಅಕ್ಬರ**ನು ಈ ಷರತ್ತುಗಳಿಗೆ ಒಪ್ಪಿಕೊಂಡುದಲ್ಲದೆ ಹಿಂದೂ ಜನರ ಪವಿತ್ರಸ್ಥಾನವಾದ **ಕಾಶಿ**ಯಲ್ಲಿ (೮೭) ಇರಲು **ಸುರಜನಹರ**ನಿಗೆ ಅಪ್ಪಣೆ

---

* ನೊರೋಜಾ ಅಂದರೆ ವರ್ಷ ಪ್ರತಿಪದವು; ಆದರೆ ಅಕ್ಬರನ ಕಾಲದಲ್ಲಿ ಪ್ರತಿ ತಿಂಗಳಿನ ದೊಡ್ಡ ಹಬ್ಬದ ೯ನೆಯ ದಿವಸ ಅರಮನೆಯಲ್ಲೊಂದು ಜಾತ್ರೆ ಕೂಡುತ್ತಿತ್ತು. ಇದರ ವಿಶೇಷ ವರ್ಣನೆಯನ್ನು ೭ನೆಯ ಅಧ್ಯಾಯದಲ್ಲಿ ನೋಡಿಕೊಳ್ಳಬಹುದು.

† ಮೊಗಲರು ತಮ್ಮ ಎಲ್ಲಾ ಕುದುರೆಗಳ ಹಣೆಯ ಮೇಲೂ ಒಂದು ಹೂವಿನ ಮುದ್ರೆಯನ್ನು ಹಾಕುತ್ತಿದ್ದರು.

ಕೊಟ್ಟನು. ಹೀಗೆ ಆಶೆಗೊಳಗಾದ **ಸುರಜನಹರನು ಚಿತ್ತೂರಿ**ನ ರಾಣನ ಆಶ್ರಯುವನ್ನು ತೊರೆದು ಮೊಗಲರ ಆಳಾದುದು ಉಳಿದ ಕೆಲವು ರಜಪೂತರಿಗೆ ಸರಿದೋರಲಿಲ್ಲ. ಆದುದರಿಂದ ಅವನ ಮನೆತನದವನಾದ **ಸಾವಂತಹರ**ನೆಂಬುವನು ತಾನು ಸಾಯುವ ವರೆಗೆ **ರಂತಂಭರ**ವನ್ನು ಮೊಗಲರ ಕಯ್ಸೇರಗೊಡಲಿಲ್ಲ.

ಮುಂದೆ ಕೆಲವು ದಿವಸಗಳ ತರುವಾಯ **ಬಾದಷಹ**ನು **ರಾಯ ಸುರಜನಹರ**ನನ್ನು **ಗೊಂಡವನ** (೮೮) ವನ್ನು ಹಿಡಿದುಕೊಳ್ಳಲಿಕ್ಕೆ ಕಳುಹಿದನು. ಆಗ ಅವನು **ಗೊಂಡವನ**ದ ರಾಜಧಾನಿಯಾದ **ಬಾರಿ**ಯನ್ನು ಹಿಡಿದುಕೊಂಡು, ಅಲ್ಲಿ ತನ್ನ ಗೆಲವಿನ ಸ್ಮರಣಾರ್ಥವಾಗಿ **ಸುರಜನಪೋಲ**ವೆಂಬ ಮಹಾದ್ವಾರವನ್ನು ಕಟ್ಟಿಸಿ, **ಗೊಂಡವನ**ದ ಮುಖ್ಯಸ್ಥರನ್ನು ಸೆರೆಹಿಡಿದು **ಬಾದಷಹ**ನಿಗೆ ಒಪ್ಪಿಸಿದನು (೧೫೭೬). ಈ ಸಾಹಸಕ್ಕಾಗಿ **ಬಾದಷಹ**ನು ಅವನಿಗೆ **ವಾರಣಾಸಿ, ಚುನಾರ್** ಮುಂತಾದ ಏಳು ಪರಗಣೆಗಳನ್ನು ಉಂಬಳಿ ಹಾಕಿಕೊಟ್ಟನು.

ಮುಂದೆ **ಸುರಜನಹರ**ನು **ಕಾಶಿ**ಯಲ್ಲಿ ವಾಸಮಾಡಿದನು. ಅಲ್ಲಿ ಅವನು ಉತ್ತಮವಾದ ಏರ್ಪಾಡುಗಳನ್ನು ಮಾಡಿ, ಯಾತ್ರಿಕರಿಗೆ ಆಗುವ ತೊಂದರೆಗಳನ್ನು ದೂರಮಾಡಿದುದಲ್ಲದೆ, ೮೪ ಭವ್ಯವಾದ ಮಂದಿರಗಳನ್ನೂ ೨೦ ಘಾಟುಗಳನ್ನೂ ಕಟ್ಟಿಸಿದನು. ಇವನಿಗೆ ೩ ಮಂದಿ ಗಂಡುಮಕ್ಕಳಿದ್ದರು:—(೧) **ರಾಯಭೋಜ,** (೨) **ದೂಡಾ,** (೩) **ರೇಮಲ್ಲ.** ಕಡೆಯವನು **ಪಾಲಿಯಾಟಾಣ** (೮೯) ಸಂಸ್ಥಾನಕ್ಕೆ ಒಡೆಯನಾದನು. ಉಳಿದ ಇಬ್ಬರು ಮೊಗಲರು ಮಾಡಿದ ಯುದ್ಧಗಳಲ್ಲಿ ಪರಾಕ್ರಮವನ್ನು ತೋರಿಸಿ, ಹೆಸರುವಾಸಿಯಾದರೆಂದು ಹಿಂದೆಯೇ ಹೇಳಿದೆ. ಮುಂದೆ ಕೆಲವು ದಿವಸಗಳಾದ ಬಳಿಕ **ರಾಜಭೋಜ**ನ ಮೇಲಿದ್ದ **ಬಾದಷಹ**ನ ಪ್ರೀತಿಯು ಕಡಿಮೆಯಾಯಿತು. ಅದು ಹೇಗಂದರೆ:— **ಬಾದಷಹ**ನು ತನ್ನ ರಜಪೂತ ರಾಣಿಯಾದ **ಜೋಧಬಾಯಿ**ಯು ತೀರಿ ಹೋದಾಗ ಎಲ್ಲ ರಜಪೂತ, ಮುಸಲ್ಮಾನ ಸರದಾರರು ದುಃಖಪ್ರದರ್ಶನಾರ್ಥವಾಗಿ ತಂತಮ್ಮ ಗಡ್ಡಮೀಸೆಗಳನ್ನು ತೆಗಿಸಬೇಕೆಂದು ಕಟ್ಟುಮಾಡಿ, ದರಬಾರಿನ ನಾದಿಗ (ನಾಯಿಂದ)ರಿಗೆ ಅದರಂತೆಯೇ ಮಾಡಲಿಕ್ಕೆ ಅಪ್ಪಣೆಯನ್ನಿತ್ತನು. **ಬಾದಷಹ**ನ

ಜನರು ತನ್ನ ಹತ್ತಿರ ಬಂದ ಕೂಡಲೆ **ರಾಜಭೋಜನು** ತನ್ನ ಗಡ್ಡಮಿಾಸೆಗಳನ್ನು ತೆಗಿಸಿಕೊಳ್ಳಲಿಕ್ಕೊಡಂಬಡದೆ ಕಾದಲಿಕ್ಕೆ ಅನುವಾದನು. ಈ ಸುದ್ದಿಯನ್ನು ಕೇಳಿ **ಬಾದಷಹನು** ತಾನು ಮಾಡಿದ ತಪ್ಪನ್ನರಿತುಕೊಂಡು ಅದನ್ನು ತಿದ್ದಿಕೊಳ್ಳಲಿಕ್ಕೆ ತಾನೇ **ರಾಜಭೋಜನಿದ್ದೆ**ಡೆಗೆ ಹೋಗಿ, ಹೀಗೇಕೆ ಹುಚ್ಚನಂತೆ ಮಾಡುವೆ, ಎಂದು ಕೇಳಲು **ರಾಜಭೋಜನು** ತನ್ನ ತಂದೆಯೊಡನೆ **ಬಾದಷಹನು** ಮಾಡಿಕೊಂಡಿದ್ದ ಒಪ್ಪಂದದ ಕಲಮುಗಳನ್ನು ಹೇಳಿ "ನಮ್ಮಂತಹ ಹಂದಿಯ ಮಾಂಸವನ್ನು ತಿನ್ನುವ ಜನರು ರಾಣಿಯ ಸಂಬಂಧದ ದುಃಖಪ್ರದರ್ಶನವನ್ನು ಮಾಡಿದರೆ ರಾಣಿಗೆ ಅಪಮಾನವಾಗುವುದಿಲ್ಲವೇ?" ಎಂದನು. ಅದನ್ನು ಕೇಳಿ **ಬಾದಷಹನು** ಸಂತೋಷಪಟ್ಟು, ಅವನನ್ನು ತನ್ನ ಸಂಗಡ ಕರೆದುಕೊಂಡು ಅರಮನೆಗೆ ಮರಳಿ ಬಂದನು.

ಈ ಪ್ರಸಂಗ (ಸಮಯ)ದಲ್ಲಿ **ಅಕ್ಬರನು** ತೋರಿಸಿದ ಸಮಾಧಾನ ಗುಣವನ್ನು ಎಷ್ಟು ಬಣ್ಣಿಸಿದರೂ ತೀರದು. ರಾಜಾಜ್ಞೆಗಳು ಎರಡು ತರವಾಗಿರುತ್ತವೆ:—(೧) ಪ್ರಜೆಗಳ ಹಿತಕ್ಕೋಸ್ಕರ ಮಾಡುವ ಆಜ್ಞೆಗಳು. (೨) ಸ್ವೇಚ್ಛಾಚಾರದಿಂದ ಮಾಡುವ ಆಜ್ಞೆಗಳು. ಮೊದಲನೆಯ ವರ್ಗದ ಆಜ್ಞೆಗಳನ್ನು ಉಲ್ಲಂಘಿಸುವುದು ಅಪರಾಧವೇ ಸರಿ. ಏಕೆಂದರೆ, ಅವು ದೇವರ ಆಜ್ಞೆಗಳನ್ನು ಸರಿಯಾಗಿ ಅನುಕರಿಸುತ್ತವೆ. ಅವು ಸನಾತನ ಧರ್ಮದ ನೇಮಗಳು. ಆ ನಿಯಮಗಳನ್ನು ಮಿಾರು (ಮುರಿಯು)ವುದೆಂದರೆ ತಮ್ಮ ಕಾಲುಗಳ ಮೇಲೆ ತಾವೇ ಕಲ್ಲುಹಾಕಿಕೊಂಡಂತಾಗುವುದು. ಎರಡನೆಯ ವರ್ಗದ ಆಜ್ಞೆಗಳನ್ನುಲ್ಲಂಘಿಸಿದವರಿಗೆ ದೋಷವು ತಟ್ಟಲಾರದು. ಏಕೆಂದರೆ, ಅವು ಪ್ರಜೆಗಳ ಹಿತಕ್ಕೋಸ್ಕರವಾಗಿರದೆ ಕೇವಲವಾಗಿ ರಾಜರ ಸ್ವೇಚ್ಛಾಚಾರದಿಂದಲೇ ಹುಟ್ಟುತ್ತವೆ. ಇಂತಹ ಆಜ್ಞೆಗಳನ್ನು ಮಾಡುವುದು ರಾಜರ ಕರ್ತವ್ಯವಲ್ಲ; ಅವುಗಳಂತೆ ನಡೆಯುವುದು ಪ್ರಜೆಗಳ ಕರ್ತವ್ಯವೂ ಅಲ್ಲ. ಇಂತಹ ಪ್ರಸಂಗಗಳಲ್ಲಿ ಯಾರ ಬಲವು ಹೆಚ್ಚಾಗುತ್ತದೆಯೋ ಅವರ ಮಾತು ಗೆಲ್ಲುತ್ತದೆ. ಸ್ವಾತಂತ್ರ್ಯಪ್ರೀತಿಯುಳ್ಳ ಪ್ರಜೆಗಳು ರಾಜರ ಈ ತರದಾಜ್ಞೆಗಳನ್ನುಲ್ಲಂಘಿಸಿ ರಾಜರನ್ನು ದಂಡಿಸಬಹುದು. **ಇಂಗ್ಲಂಡಿನ** ಅರಸರಾದ **೧ನೆಯ ಚಾರ್ಲಸನೂ,**

೧ನೆಯ **ಜೇಮ್ಸ್‌ನೂ** ಈ ತರದ ಆಜ್ಞೆಗಳನ್ನು ಕೊಟ್ಟು ತಮ್ಮ ಪ್ರಾಣವನ್ನೂ, ರಾಜ್ಯವನ್ನೂ ಕಳೆದುಕೊಂಡರು! ತನ್ನ ರಾಜಧಾನಿಯ ಎಲ್ಲ ಜನರೂ **ದೌಲತ್ತಾಬಾದಿಗೆ** ಹೋಗಬೇಕೆಂದು ಅಪ್ಪಣೆಯನ್ನಿತ್ತ **ಮಹಮ್ಮದ್ ತೊಗಲಕನು** ತನ್ನ ರಾಜ್ಯದ ಸ್ಥಿರತ್ವವನ್ನು ಕಡಿಮೆಮಾಡಿಕೊಂಡನು. ಅದರಂತೆಯೇ **ಅಕ್ಬರನ** ವಂಶಜನಾದ **ಔರಂಗಜೇಬನು** ಸ್ವೇಚ್ಛಾಚಾರದ ಆಜ್ಞೆಗಳಿಂದ ಮೊಗಲರ ಸಾಮ್ರಾಜ್ಯದ ಅಳಿಗಾಲವನ್ನು ಬರಮಾಡಿಕೊಂಡನು. ಇತಿಹಾಸದಲ್ಲಿ ಈ ತರದ ಇನ್ನೂ ಎಷ್ಟೋ ಉದಾಹರಣೆಗಳು ದೊರೆಯುವುವು.

**ಅಕ್ಬರನು** ಇಂತಹ ಹಟಮಾರಿಯಾಗಿರಲಿಲ್ಲ. ಅವನು ತಾನು ಮಾಡಿದ ತಪ್ಪಿನಿಂದ ಅನರ್ಥವೊದಗಬಹುದೆಂದು ಅರಿತ ಕೂಡಲೆ, ಅದನ್ನು ತಿದ್ದಿಕೊಳ್ಳಲಿಕ್ಕೆ ತಕ್ಕ ಹಂಚಿಕೆಯನ್ನು ಕಯ್ಕೊಂಡನು. ಅವನಲ್ಲಿ ದುರಭಿಮಾನವು ಎಳ್ಳಷ್ಟಾದರೂ ಇರಲಿಲ್ಲ. ಈ ಗುಣದಿಂದಲೇ ಅವನ ರಾಜ್ಯವು ಸ್ಥಿರವಾಗಿ ನೆಲೆಗೊಂಡಿತೆನ್ನಲಿಕ್ಕೆ ಅಡ್ಡಿಯಿಲ್ಲ.

**ಮೇವಾಡ**—ಹಿಂದೆ ಹೇಳಿದಂತೆಯೇ **ಅಕ್ಬರನು** ಪಟ್ಟವೇರಿದ ಕೂಡಲೆ **ಮಾರವಾಡವನ್ನು** ನುಗ್ಗಿ **ಮೆರ್ತಾವನ್ನು** ಹಿಡಿದುಕೊಳ್ಳುವಷ್ಟರಲ್ಲಿ, **ಜಯಪುರದ** ಅರಸನಾದ **ಬಹರಮಲ್ಲನು** ಹೊತ್ತುಬಂದಕಡೆ ಕೊಡೆಯನ್ನು ಹಿಡಿಯುವ ಉದ್ದೇಶದಿಂದ **ಬಾದಷಹನಿಗೆ** ಶರಣುಬಂದು ನಿರಭಿಮಾನತನದಿಂದ ತನ್ನ ಮಗಳನ್ನು ಯುವರಾಜನಾದ **ಸೆಲೀಮನಿಗೆ** ಕೊಟ್ಟು ಮೊಗಲರ ಮಾಂಡಲಿಕನಾದನು. ಅಷ್ಟರಲ್ಲಿ **ಯುಜಬೆಕ್ಕರು** ಬಂಡಾಯವೆಬ್ಬಿಸಿದುದರಿಂದಲೂ **ಮಾಳವಾ, ನರ್ಮದಗಳ** ಅರಸರು ದ್ರೋಹಬಗೆದುದರಿಂದಲೂ ರಜಪೂತರಿಗೆ ಸ್ವಲ್ಪ ವಿಶ್ರಾಂತಿಯು ದೊರೆಯಿತು. ಮುಂದೆ **ಚಿತ್ತೂರಿನ** ರಾಣನು **ಮಾಳವದ** ಅರಸನಾದ **ಬಾಜಬಾಹದ್ದೂರನಿಗೆ** ಆಶ್ರಯಕೊಟ್ಟುದರಿಂದ **ಬಾದಷಹನು ಚಿತ್ತೂರಿಗೆ** ನುಗ್ಗಿದನು (೧೫೬೭).

ಈ ಕಾಲದಲ್ಲಿ **ಮೇವಾಡದಲ್ಲಿ ಉದಯಸಿಂಗನೆಂಬುವನು** ಆಳುತ್ತಿದ್ದನು. ಇವನು ಹೇಡಿಯೂ, ನಿರಭಿಮಾನಿಯೂ ಆಗಿದ್ದನು. **ಅಕ್ಬರನು** ಮೊದಲನೆಯ ಸಾರಿ **ಚಿತ್ತೂರನ್ನು** ಮುತ್ತಿದಾಗ **ಉದಯಸಿಂಗನ**

ಸೂಳೆಯು ಬಲುಗಲಿತನದಿಂದ ಮೊಗಲರ ಮೇಲೆ ನುಗ್ಗಿ ಹೋಗಿ, ಅವರನ್ನು ಓಡಿಸಿದಳೆಂತಲೂ, ಅಲ್ಲಿದ್ದ ಸರದಾರರು ಹೊಟ್ಟೆಕಿಚ್ಚಿನಿಂದ ಆಕೆಯನ್ನು ಕೊಂದುಹಾಕಿದರೆಂತಲೂ ರಜಪೂತಸಂಸ್ಥಾನಗಳ ಕಾಗದಪತ್ರಗಳಿಂದ ತಿಳಿಯುತ್ತದೆ. ಈ ಒಳಜಗಳದ ಸುದ್ದಿಯನ್ನು ಕೇಳಿ, **ಅಕ್ಬರ**ನು ಅದೇ ಸಮಯದಲ್ಲಿ ಮತ್ತೊಮ್ಮೆ ದಂಡೆತ್ತಿ ಬಂದು, **ಚಿತ್ತೂರ**ನ್ನು ಮುತ್ತಿ **ಪಾಂಡೇಲಿ** (೯೦) ಎಂಬಲ್ಲಿ ಪಾಳೆಯ ಹಾಕಿದನು (೧೫೬೮). ಆಗ ಕಯ್ಯಲ್ಲಾಗದವನಾದ **ಉದಯಸಿಂಗ**ನು ತನ್ನ ರಾಜಧಾನಿಯನ್ನು ಬಿಟ್ಟು ಓಡಿಹೋದನು. ಆದರೂ ಉಳಿದ ರಜಪೂತರು ಅವನನ್ನು ಅನುಕರಿಸಲಿಲ್ಲ. **ಸಾಹಿದಾಸ**ನೂ, **ರಾವೆತ್ತದೂದ**ನೂ, **ಜಾಲ**ನೂ, **ತರುಮಚಂದ**ನೂ, **ದುದಾಸದಾನಿ**ಯೂ, ಬೇರೆ ಕೆಲವರೂ **ಚಿತ್ತೂರಿ**ನ ಕೋಟೆಯನ್ನು ಕಾಪಾಡಲಿಕ್ಕನುವಾದರು. ಈ ಹೂಣಿಗರಲ್ಲಿ **ಕೈಲವದ ಪುಟ್ಟ**ನೂ, **ಬಿದನೂರೀನ ಜಯಮಲ್ಲ**ನೂ ಬಹಳ ಹೆಸರು ಪಡೆದರು. ಆಗ **ಪುಟ್ಟ**ನಿಗೆ ೧೬ನೆಯ ವರ್ಷವು ನಡೆಯುತ್ತಿತ್ತು. ಅವನು ತನ್ನ ತಾಯಿಯ ಬಳಿಗೆ ಹೋಗಿ ಕಾಳಗಕ್ಕೆ ಹೋಗಲು ಅಪ್ಪಣೆಯನ್ನು ಬೇಡಲು ಆ ವೀರಮಾತೆಯು ಅವನನ್ನು ಕಾದಲಿಕ್ಕೆ ಹುರಿದುಂಬಿಸಿದುದಲ್ಲದೆ ಪೂರ್ವಕಾಲದಲ್ಲಿ ಹೆಸರಾದ **ಸ್ಪಾರ್ಟಾ** (೯೧) ದ ಹೆಂಗಸರನ್ನು ನಾಚಿಸುವಂತೆ ತಾನು ಖಡ್ಗ ಧಾರಿಯಾಗಿ ತನ್ನ ಸೊಸೆಯನ್ನೂ (**ಪುಟ್ಟ**ನ ಹೆಂಡತಿಯನ್ನು) ಶಸ್ತ್ರಪಾಣಿಯನ್ನಾಗಿ ಮಾಡಿ ಬಳಿಕ ತಾವಿಬ್ಬರೂ ಕಾಳಗಕ್ಕೆ ಹೊರಟರು!* ಹೀಗೆ ಹೆಂಗಸರು ಧೈರ್ಯಶಾಲಿಗಳಾಗಿದ್ದ ನಾಡುಗಳಲ್ಲಿ ಗಂಡಸರು ಜೀವದ ಹಂಗು ದೊರೆದು ಹೋರುವುದು ಸ್ವಾಭಾವಿಕವೇ ಸರಿ. **ಪುಟ್ಟ**ನ ತಾಯಿಯೂ, ಹೆಂಡತಿಯೂ ರಣಭೂಮಿಯಲ್ಲಿ ಮಡಿದರು. **ಚಿತ್ತೂರಿ**ನ ಕೋಟೆಯ ಬಡಗಣ ಭಾಗವನ್ನು ಮೊಗಲರು ಕೆಡವಿದರು.

---

* ಕರುವನೆಳೆಗಂದಿ ತಾನರಸಿಕೊಂಡೆಯ್ತುಪ್ಪ ।
ತೆರದಿಂದ ಬಂದಪಂ ಮುರಹರಂ ಪಾರ್ಥನೆಡೆ ।
ಗರಿವೆನಿದು ನಿಶ್ಚಯಂ ಮಗನೆ ನೀನಾಹರಿಗೆ ವಿಮುಖನಾದೊಡೆ ತನ್ನನು ॥
ಜರಿವರಿಕ್ಕೆಲದ ಬಂಧಗಳಿನ್ನು ಸಮರದೊಳ್ ।
ನೆರೆಕೃಷ್ಣನಂ ಗೆಲ್ವರುಂಟೆ ಸಾಕೆನ್ನೊಡಲ ।
ಮರುಕವಮಂ ಬಿಟ್ಟೆನವನಂ ಕಂಡ ಬಳಿಕ ಹಿಮ್ಮೆಟ್ಟದಿರ್ಪೊಡೆಗೆಂದಳು ॥

ಜೈಮಿನಿಭಾರತ, ೧೧ನೆಯ ಸಂಧಿ.

ಈಗ ಭೂಮಿಗೆ ಭಾರವಾಗಿ ಹಾಗೂ ಹೀಗೂ ಹೊಟ್ಟೆಹೊರೆದು ಕೊಳ್ಳುವ ಹಿಂದೂಜನರಿಂತಹ ಪ್ರಸಂಗದಲ್ಲಿ ಹೇಗಾದರೂ ಮಾಡಿ ಶತ್ರುಗಳ ಕಯ್ಕಾಲಿಗೆ ಬಿದ್ದು ತಮ್ಮ ನಿರುಪಯೋಗಿಯಾದ ಜೀವವನ್ನುಳಿಸಿಕೊಳ್ಳಲೆಳಸುವರು. ಆದರೆ ಆಗಿನ ಕಾಲದ ರಜಪೂತಬಹದ್ದೂರರು ಹೀಗೆ ಜೀವಿಸಲಿಚ್ಛಿಸುತ್ತಿರಲಿಲ್ಲ. ಹಗೆಗಳನ್ನು ಮರೆಹೊಗಲಿಕ್ಕೆ ಅವರ ಮನಸ್ಸು ಹೇಸುತ್ತಿತ್ತು. ಆದುದರಿಂದ ಮುಂದೆ **ಚಿತ್ತೂರಿ**ನ ಕೋಟೆಯನ್ನು ಕಾಪಾಡುವುದು ಅಸಂಭವವೆಂದೆಣಿಸಿ, ಮೊಗಲರನ್ನು ಶರಣು ಹೊಗಲಿಕ್ಕೆ ಮನಸ್ಸು ಒಡಂಬಡದೆ, **ಪುಟ್ಟ**ನೂ, **ಜಯಮಲ್ಲ**ನೂ ಪಡೆಗಾರರಿಗೆ ವೀಳೆಯವನ್ನು (ಬೀರನ್ನು) ಕೊಟ್ಟು, ಕೋಟೆಯ ಬಾಗಿಲನ್ನು ತೆರೆಯಿಸಿ, ಮೊಗಲರ ಮೇಲೆ ನುಗ್ಗಿ ಹೋಗಿ, ಹೋರಾಡಿದರು. ಆ ದಿವಸ ಚೈತ್ರಶುದ್ಧ ಏಕಾದಶಿ ಭಾನುವಾರವಾಗಿತ್ತು. ಆ ದಿನದ ಕಾಳಗವನ್ನು ಬಣ್ಣಿಸಲಳವಲ್ಲ. ಪ್ರತಿಯೊಬ್ಬ ರಜಪೂತನು ಬೆನ್ನುದೋರಿಸದೇ ಸಾಯುವ ವರೆಗೆ ಕಾದಿದನು. **ಅಕ್ಬರ**ನೇ ಗುರಿಯಿಟ್ಟ ಗುಂಡು **ಜಯಮಲ್ಲ**ಗಲಿಯನ್ನು ಕೊಂದಿತು. ಆದುದರಿಂದ **ಅಕ್ಬರ**ನು ತನ್ನ ತುಪಾಕಿಗೆ '**ಸಿಂಗರಾಮ**' ಎಂಬ ಹೆಸರನ್ನಿಟ್ಟನು. ಎಲ್ಲ ರಜಪೂತರೂ ಧೈರ್ಯದಿಂದ ಕಡೆತನಕ ಕಾದಿ ವೀರಸ್ವರ್ಗವನ್ನೈದಿದರು. ಬಳಿಕ **ಅಕ್ಬರ**ನು ದಂಡಿನೊಡನೆ **ಚಿತ್ತೂರ**ನ್ನು ಹೊಕ್ಕನು (ಮಾರ್ಚ್ ೧೫೬೮). ಅವನು ಈ ಕಾಲದಲ್ಲಿ ತೋರಿಸಿದಷ್ಟು ಕ್ರೂರತೆಯನ್ನು ಮುಂದೆಂದೂ ತೋರಿಸಲಿಲ್ಲ. ಈ ಸಂಗತಿಯು ಅವನ ಗುಣಕ್ಕೆ ಕುಂದು ತರುತ್ತದೆ. **ಚಿತ್ತೂರಿ**ನ ಮುತ್ತಿಗೆಯೆಂಬ ಮಹಾಯಜ್ಞದಲ್ಲಿ ಒಟ್ಟು ೩೦,೦೦೦ ಜನರು ಮಡಿದರು!!* ಮೊಗಲರು **ಚಿತ್ತೂರಿ**ನಲ್ಲಿದ್ದ ಎಲ್ಲ ಗುಡಿಗಳನ್ನೂ, ಅರಮನೆಗಳನ್ನೂ, ರಾಜಚಿಹ್ನಗಳನ್ನೂ ಧ್ವಂಸಮಾಡಿದರು!!

ಇಷ್ಟಾದರೂ **ಅಕ್ಬರ**ನು ಗುಣ ಗ್ರಾಹಿಯೆನ್ನಬಹುದು. ಆತನು **ಜಯಮಲ್ಲ, ಪುಟ್ಟ**ರ ದೇಶಾಭಿಮಾನಕ್ಕೂ ಎದೆಗಾರಿಕೆಗೂ ಮೆಚ್ಚಿ ಅವರ ಮೂರ್ತಿಗಳನ್ನು ಕೆತ್ತಿಸಿ **ಡಿಲ್ಲಿ**ಯ ಅರಮನೆಯ ಬಾಗಿಲುಗಳಲ್ಲಿರಿಸಿದನು.

---

* ಚಿತ್ತೂರನ್ನು ಹಿಡಿದುಕೊಂಡಾಗ ರಜಪೂತ ಸರದಾರರು ಕೊರಳಲ್ಲಿ ಕಟ್ಟಿಕೊಂಡಿದ್ದ ೭೪॥ ಮಣ ತೂಕವುಳ್ಳ ಝುನಾರುಗಳು (ಸರಗಳು) ಮೊಗಲರಿಗೆ ದೊರೆತುವು. ಆದುದರಿಂದ ಈಗ ರಾಜಸ್ಥಾನದಲ್ಲಿ ೭೪॥ ಎಂಬ ಸಂಖ್ಯೆಯು ಬಹಳ ಅನಿಷ್ಟಕರವಾದುದೆಂದು ಎಲ್ಲ ಜನರೂ ತಿಳಿಯುತ್ತಾರೆ.

ಅವು ೧೭ನೆಯ ಶತಮಾನದ ಮಧ್ಯ ಭಾಗದಲ್ಲಿದ್ದುವು. **ಬರ್ನಿಯರ**ನೆಂಬ ಇಂಗ್ಲಿಷಪ್ರವಾಸಿಯು ತನ್ನ ಗ್ರಂಥದಲ್ಲಿ ಅವುಗಳನ್ನು ವರ್ಣಿಸುತ್ತಾನೆ (೧ ಜುಲೈ ೧೬೬೩). ಅದು ಹೇಗಂದರೆ:—

"ಈ ಅರಮನೆಯ ಬಾಗಿಲಲ್ಲಿ ಎರಡು ದೊಡ್ಡ ಕಲ್ಲಿನ ಆನೆಗಳ ಹೊರತು ಹೆಚ್ಚಿನದೇನೂ ಹೇಳತಕ್ಕಂತಹದಿರುವುದಿಲ್ಲ. ಒಂದು ಆನೆಯು ಮೇಲೆ **ಜಯಮಲ್ಲ**ನೂ, ಎರಡನೆಯ ಆನೆಯು ಮೇಲೆ ಅವನ ತಮ್ಮನಾದ **ಪುಟ್ಟ**ನೂ ಕುಳಿತಿರುತ್ತಾರೆ. ಇವರಿಬ್ಬರು ಕಲಿಗಳೂ ಇವರಿಗಿಂತ ಹೆಚ್ಚು ಶೂರಳಾದ ಇವರ ತಾಯಿಯೂ **ಅಕ್ಬರ**ನಿಗೆ ಬಹಳ ಶ್ರಮವನ್ನು ಕೊಟ್ಟರು. ಇವರು ಮೊಗಲರು ಮುತ್ತಿದ್ದ ಪಟ್ಟಣವನ್ನು ಬಲುಗಲಿತನದಿಂದ ಕಾದಿ ಕಟ್ಟಕಡೆಗೆ ನಿರುಪಾಯರಾಗಿ ಮೊಗಲರ ಮೇಲೆ ನುಗ್ಗಿಹೋಗಿ ರಣ ಭೂಮಿಯಲ್ಲಿ ಮಡಿದರು. ಈ ಕಲಿತನಕ್ಕೆ ಹಗೆಗಳೂ ಸಹ ಮೆಚ್ಚಿ ಇವರ ಮೂರ್ತಿಗಳನ್ನು ಮಾಡಿಸಿ ಇಟ್ಟುಕೊಂಡರು. ಈ ಎರಡು ದೊಡ್ಡ ಆನೆ ಗಳೂ, ಅವುಗಳನ್ನೇರಿದ ಮಹಾ ಪುರುಷರೂ, ಈ ಹೆಬ್ಬಾಗಿಲಲ್ಲಿ ಬರುವ ಪ್ರತಿಯೊಬ್ಬ ಮನುಷ್ಯನ ಮನಸ್ಸಿನಲ್ಲಿ ಪೂಜ್ಯ ಬುದ್ಧಿಯನ್ನೂ, ಘನ ವಿಚಾರ ಗಳನ್ನೂ ಹೆದರಿಕೆಯನ್ನೂ ಹುಟ್ಟಿಸುತ್ತಾರೆ."

ಅತ್ತ **ಉದಯಸಿಂಗ**ನು ಕೆಲವು ಸರದಾರರೊಡನೆ **ರಾಜಪಿಂಪಳ** (೯೨)ದ ಗುಡ್ಡದಲ್ಲಿ ಕೆಲವು ದಿವಸವಿದ್ದು, ಮುಂದೆ **ಆರಾವಳಿ**ಗುಡ್ಡದ ಬಳಿಯಲ್ಲಿ ಒಂದು ಊರನ್ನು ಕಟ್ಟಿಸಿ, ಅದಕ್ಕೆ **ಉದಯಪುರ**ವೆಂಬ ಹೆಸರನ್ನಿಟ್ಟನು.

**ಉದಯಸಿಂಗ**ನು **ಚಿತ್ತೂರ**ನ್ನು ಕಳೆದುಕೊಂಡ ನಂತರ ನಾಲ್ಕು ವರುಷ ಬದುಕಿ ಮೃತಪಟ್ಟನು. ಆದರೆ ಈ ರಣಗೇಡಿಯು ಸಾಯುವ ಕಾಲಕ್ಕೆ ತನ್ನ ಹಿರಿಯ ಮಗನಾದ **ಪ್ರತಾಪಸಿಂಗ**ನಿಗೆ ಪಟ್ಟವನ್ನು ಕೊಡದೆ, **ಜಗಮಲ್ಲ**ನೆಂಬ ಕಿರಿಯ ಮಗನನ್ನು ಗಾದಿಯ ಮೇಲೆ ಕುಳ್ಳಿರಿಸಿದನು. **ಉದಯಸಿಂಗ**ನು ಸತ್ತ ಕೂಡಲೆ ಒಂದು ಒಳಸಂಚಾಯಿತು. ಸಂಚುಗಾರರು ಒಂದು ದಿನ ಗಾದಿಯ ಮೇಲೆ ಕುಳಿತಿದ್ದ **ಜಗಮಲ್ಲ**ನನ್ನು ಕೆಳಗಿಳಿಸಿ, **ಪ್ರತಾಪಸಿಂಗ**ನನ್ನು ಪಟ್ಟದ ಮೇಲೆ ಕುಳ್ಳಿರಿಸಿದರು!

**ಪ್ರತಾಪಸಿಂಗ**ನು ಹುಟ್ಟುಗಲಿಯಾಗಿದ್ದನು. ಅವನಲ್ಲಿ ದೇಶಾಭಿಮಾನವೂ, ಜಾತ್ಯಭಿಮಾನವೂ, ಕುಲಾಭಿಮಾನವೂ ತುಂಬಿದ್ದುವು. **ಅಕ್ಬರ**ನಿಗೆ ಶರಣುಹೋಗಲಿಕ್ಕೆ ಅವನ ಮನಸ್ಸು ಒಡಂಬಡಲಿಲ್ಲ. **ರಾಣಸಿಂಗ**ನಿಗೂ ತನಗೂ ನಡುವೆ **ಉದಯಸಿಂಗ**ನು ಬಾರದಿದ್ದರೆ **ರಾಜಸ್ಥಾನ**ವೆಂದಿಗೂ ಮೊಗಲರ ಕಯ್ಸೇರುತ್ತಿರಲಿಲ್ಲವೆಂದು ಅವನು ಸದಾ ಹೇಳುತ್ತಿದ್ದನು. ಮೊಗಲರೊಡನೆ ಶರೀರಸಂಬಂಧವನ್ನು ಮಾಡಲಿಕ್ಕೆ ಅವನ ಮನಸ್ಸು ಅತಿಶಯವಾಗಿ ಹೇಸುತ್ತಿತ್ತು. ಆದರೆ ಆಗ ದೈವಯೋಗದಿಂದ ಈ ಎಲ್ಲಾ ಸದ್ಗುಣಗಳನ್ನು ಪರೀಕ್ಷೆಮಾಡುವ ಹೊತ್ತೇ ಬಂದಿತ್ತು. **ಪ್ರತಾಪಸಿಂಗ**ನಿಗೆ ರಾಜ್ಯವಿರಲಿಲ್ಲ, ಹಣವಿರಲಿಲ್ಲ, ದಂಡಿರಲಿಲ್ಲ, ಬೆಂಬಲವೂ ಇರಲಿಲ್ಲ. ಆದರೆ ಅವನ ಹಗೆಯಾದ **ಅಕ್ಬರಬಾದಷಹ**ನ ರಾಜ್ಯವೆಷ್ಟು? ಸೈನ್ಯವೆಷ್ಟು? ಸಿರಿಯೆಷ್ಟು? ಯುಕ್ತಿಯೆಷ್ಟು? **ಪ್ರತಾಪಸಿಂಗ**ನ ಗೆಳೆಯರೂ ಬಳಗದವರೂ ಆದ **ಅಂಬರ್, ಮಾರವಾಡ, ಬಿಕಾನೀರ್, ಬುಂದಿ** ಮುಂತಾದ ಪ್ರಾಂತಗಳ ಅರಸರನ್ನು ಮೊಗಲರ **ಬಾದಷಹ**ನು ಯುಕ್ತಿಯಿಂದ ತನ್ನಂಕಿತರನ್ನಾಗಿ ಮಾಡಿಕೊಂಡಿದ್ದನು. ಇಂತಹ ಬಲಾಢ್ಯನಾದ ಶತ್ರುವಿನೊಡನೆ **ಪ್ರತಾಪಸಿಂಗ**ನು ಕಾದುವದು ಹೇಗೆ? ಈ ರೀತಿಯು **ಪ್ರತಾಪಸಿಂಗ**ನಂತಹ ಕಲಿಗಳಿಗೆ ಗೊತ್ತಾಗುವುದೇ ಹೊರತು ಹೇಡಿಗಳಿಗೆ ತಿಳಿಯಲಾರದು. ಸೂರ್ಯನು ದೀವಿಗೆಯ ಬೆಳಕನ್ನು ಅಪೇಕ್ಷಿಸದಂತೆಯೇ ಅಪ್ರತಿಮವೀರರು ಅನ್ಯರ ಸಹಾಯವನ್ನು ಬಯಸುವುದಿಲ್ಲ.

ನಿಕೃಷ್ಟಾವಸ್ಥೆಯಲ್ಲಿದ್ದರೂ ಕಲಿಗಳೇ ಕಲಿಗಳನ್ನು ಹಿಂಬಾಲಿಸುತ್ತಾರೆ. **ಜಯಮಲ್ಲ, ಪುಟ್ಟ**ರ ಮಕ್ಕಳೂ, **ಸಾಲುಂಬರ**(೯೩)ದ ರಾಜಪುತ್ರರೂ **ಪ್ರತಾಪಸಿಂಗ**ನ ಅನುವರ್ತಿಗಳಾದರು. **ದಿಲ್ವಾರಿ**(೯೪)ನ ಅರಸನು **ಪ್ರತಾಪ**ನ ಶೌರ್ಯಕ್ಕೆ ಮೆಚ್ಚಿ ಅವನಿಗೆ ಬೆಂಬಲವಾದನು. **ಚಿತ್ತೂರು** ತಿರುಗಿ ರಜಪೂತರ ಕಯ್ಸೇರುವವರೆಗೆ ತನಗೂ ತನ್ನ ಸಂಗಡಿಗರಿಗೂ ಉಪಭೋಗ ದ್ರವ್ಯಗಳು ನಿಷಿದ್ಧವಾದವುಗಳೆಂದು ಗೊತ್ತುಮಾಡಿ, **ಪ್ರತಾಪ**ನು ಚಿನ್ನ ಬೆಳ್ಳಿಗಳ ಪಾತ್ರೆಗಳನ್ನು ತ್ಯಜಿಸಿ, ಪತ್ರಾವಳಿಯಲ್ಲಿ ಊಟಮಾಡಲುಪಕ್ರಮಿಸಿದ್ದಲ್ಲದೆ ಹುಲ್ಲುಹಾಸಿಗೆಯ ಮೇಲೆ ಮಲಗುತ್ತಿದ್ದನು;

ಗಡ್ಡವನ್ನು ಬೆಳಿಸ ತೊಡಗಿದನು.* ಕಾಳಗದ ಸಮಯದಲ್ಲಿ ಜೂಣಿಯಲ್ಲಿರಿಸುವ ನಕರವನ್ನು (ನಗಾರಿಯನ್ನು) ದಂಡಿನ ಹಿಂಭಾಗದಲ್ಲಿರಿಸಬೇಕೆಂದು ಕಟ್ಟುಮಾಡಿದನು. ಈ ನಿಯಮಗಳು ಈಗಲೂ ಆ ಸಂಸ್ಥಾನದಲ್ಲಿ ನಡೆಯುತ್ತವೆ. ಈ ಹೊತ್ತಿಗೂ **ಪ್ರತಾಪಸಿಂಗನ** ವಂಶದವರು ತಾವು ಉಣ್ಣುವ ತಟ್ಟೆಯ ಕೆಳಗೆ ಬಿಡಿಯೆಲೆಯನ್ನೂ, ತಾವು ಮಲಗುವ ಹಾಸಿಗೆಯ ಕೆಳಗೆ ಹುಲ್ಲು ಕಡ್ಡಿಯನ್ನೂ ತಪ್ಪದೆ ಇಟ್ಟುಕೊಳ್ಳುತ್ತಾರೆ.

ಈ ಕಾಲದಲ್ಲಿ **ಅಕ್ಬರನು ಅಜಮೀರ**ದಲ್ಲಿದ್ದನು. ಅವನು **ಪ್ರತಾಪ**ನಿದ್ದೆಡೆಗೆ ದಂಡೆತ್ತಿ ಬರುವ ಸಂಭವವಿದ್ದುದರಿಂದ **ಪ್ರತಾಪ**ನು ಸುಮ್ಮನೆ ಕುಳ್ಳಿರದೆ **ಕೋಮಲ್ಮೆರ**ನ್ನು ತನ್ನ ರಾಜಧಾನಿಯನ್ನಾಗಿ ಮಾಡಿ, ಆ ಕೋಟೆಯನ್ನೂ, **ಗೋಗುಂದ**ದ (೯೫) ಕೋಟೆಯನ್ನೂ ಗಟ್ಟಿಮಾಡಿಸಿದನು; ಮತ್ತು ಬಯಲು ಪ್ರದೇಶದಲ್ಲಿದ್ದ ತನ್ನ ಪ್ರಜೆಗಳು ಆ ಸ್ಥಳವನ್ನು ಬಿಟ್ಟು **ಆರಾವಳಿ** ಗುಡ್ಡದಲ್ಲಿ ಮನೆಕಟ್ಟಿಸಿಕೊಂಡಿರಬೇಕೆಂದು ಕಟ್ಟುಮಾಡಿ, ಅವರು ತನ್ನಪ್ಪಣೆಯಂತೆ ನಡೆಯುತ್ತಾರೋ ಇಲ್ಲವೋ ಎಂಬುದನ್ನು ತಾನು ಆಗಿಂದಾಗ್ಗೆ ಅಲ್ಲಿಗೆ ಹೋಗಿ ನೋಡುತ್ತಿದ್ದನು.† ಬಳಿಕ **ಪ್ರತಾಪ**ನು, **ಬುಂದಿ**ಯ ಅರಸುಮನೆತನದವರ ಹೊರತು ಉಳಿದ ಎಲ್ಲ ರಜಪೂತರೂ ಮೊಗಲರೊಡನೆ ಶರೀರ ಸಂಬಂಧವನ್ನು ಮಾಡಿದುದರಿಂದ **ಧಾರ, ಡಿಲ್ಲಿ, ಮಾರವಾಡ**ಗಳ ಮೊದಲಿನ ರಾಜರ ವಂಶದವರೂ, **ಪುಟ್ಟ**ನ ಮನೆತನದವರೂ ತನ್ನ ಮನೆತನದವರೊಡನೆ ಶರೀರ ಸಂಬಂಧವನ್ನು ಮಾಡಲು ಯೋಗ್ಯರೆಂದು ನಿರ್ಣಯಿಸಿದನು. ಅವನು ತನ್ನ ಕುಲದ ಪವಿತ್ರತೆಯನ್ನು ರಕ್ಷಿಸಿಕೊಳ್ಳಲಿಕ್ಕೆ ಮಾಡಿದ ದೃಢನಿಶ್ಚಯವನ್ನು ತೋರಿಸುವದೊಂದು ದಂತಕಥೆಯುಂಟು. ಅದೇನಂದರೆ—

---

* ಭುವಿಯೊಳ್ ನಿದ್ರಿಪರೊರ್ಮೆಯೊರ್ಮೆ ಮಣಿಪರ್ಯಂಕಾಗ್ರದೊಳ್ ನಿದ್ರಿಪರ್ |
ಸವಿವರ್ಶಾಕವನೊರ್ಮೆಯೊರ್ಮೆ ಸವಿವರ್ ಶಾಲ್ಯನ್ನಮಂ ಜೀರ್ಣವ ||
ಸ್ತ್ರವನಾಚ್ಛಾದಿಪರೊರ್ಮೆಯೊರ್ಮೆ ಧರಿಪರ್ದಿವ್ಯದ್ದುಕೂಲಂಗಳಂ |
ತವೆದುಃಖಮ್ ಸುಖಮೆಂಬುದಂ ಗಣಿಪರೇಂ ಕಾರ್ಯಾರ್ಥಿಗಳ್ ಚಿತ್ತದೊಳ್ ||

ಭ. ನೀತಿಶತಕ.

† ಒಂದು ದಿನ ಒಬ್ಬ ಕುರುಬನು ಈ ಬಯಲು ಪ್ರದೇಶದಲ್ಲಿ ತನ್ನ ಕುರಿಗಳನ್ನು ಮೇಯಿಸುತ್ತಿದ್ದನಂತೆ. ಅದನ್ನು ನೋಡಿ ಪ್ರತಾಪನು ಸಿಟ್ಟಾಗಿ ಆ ಕುರುಬನನ್ನು ಒಂದು ಗಿಡಕ್ಕೆ ತೂಗುಹಾಕಿಸಿ ಕೊಲ್ಲಿಸಿದನಂತೆ.

**ರಾಜಮಾನಸಿಂಗನು** **ಶಹಾಪುರವನ್ನು** (೯೬) ಹಿಡಿದುಕೊಂಡು ತಿರುಗಿ ಬರುವಾಗ **ಪ್ರತಾಪಸಿಂಗನು** **ಕೋಮಲ್ಮೆರಿನಲ್ಲಿ**ರುತ್ತಾನೆಂಬ ಸುದ್ದಿಯನ್ನು ಕೇಳಿ, ಅವನನ್ನು ಕಾಣಲಿಕ್ಕೆ ತಾನು ಬರುತ್ತೇನೆಂದು ಹೇಳಿ ಕಳುಹಿದನು. ಅದನ್ನು ಕೇಳಿ **ಪ್ರತಾಪನು** **ಉದಯುಸಾಗರ**ಕ್ಕೆ ಬಂದು ಅಲ್ಲಿ ಊಟದ ವ್ಯವಸ್ಥೆಯನ್ನು ಮಾಡಿಸಿದನು. ಎಲ್ಲವೂ ಸಿದ್ಧವಾದ ಬಳಿಕ **ರಾಜಮಾನಸಿಂಗ**ನು ತಟ್ಟೆಯ ಮುಂದೆ ಕುಳಿತು ಉಣ್ದೇವನಿಗೆ* ಆಹುತಿ ಯನ್ನು ಕೊಟ್ಟು **ರಾಣ**ನೆಲ್ಲಿದ್ದಾನೆಂದು ಕೇಳಲು, ಅವನ ಮಗನಾದ **ಉಮರಸಿಂಗ**ನು, "ಅವನಿಗೆ ತಲೆಶೂಲೆಯಾದುದರಿಂದ ಬರುವಂತೆಯಿಲ್ಲ; ತಾವು ಏತಕ್ಕೂ ಸಂಕೋಚ ಮಾಡಿಕೊಳ್ಳದೆ ಸಾವಕಾಶವಾಗಿ ಭೋಜನ ಮಾಡಬೇಕು" ಎಂದು ಪ್ರಾರ್ಥಿಸಿದನು. ಅದಕ್ಕೆ **ರಾಜಮಾನ**ನು, "**ರಾಣ**ನ ತಲೆಶೂಲೆಯ ಕಾರಣವು ನನಗೆ ಗೊತ್ತಾಯಿತು; ಅವನು ಬಂದ ಹೊರತು ನಾನು ಊಟಮಾಡಲಾರೆನು" ಎಂದು ಹಟ ಮಾಡಿದುದರಿಂದ **ಪ್ರತಾಪಸಿಂಗ**ನಲ್ಲಿಗೆ ಬಂದು "ತುರುಕರೊಡನೆ ಶರೀರ ಸಂಬಂಧವನ್ನೂ, ಊಟವನ್ನೂ ಮಾಡಿದ ರಜಪೂತರೊಡನೆ ನಾನು ಊಟ ಮಾಡಲಾರೆನು; ದಯುಮಾಡಿ ಕ್ಷಮಿಸಿರಿ" ಎಂದು ಸ್ಪಷ್ಟವಾಗಿ ಹೇಳಿದನು. ಇದರಿಂದ **ರಾಜಮಾನ**ನು ಚಿತ್ರಾಹುತಿಯನ್ನಿಟ್ಟ ಅಗುಳುಗಳನ್ನು ತನ್ನ ರುಮಾಲಿನಲ್ಲಿ ಕಟ್ಟಿಕೊಂಡು, ಒಂದು ತುತ್ತನ್ನಾದರೂ ಬಾಯಿಯಲ್ಲಿ ಹಾಕಿಕೊಳ್ಳದೆ, ಹಾಗೇ ಎದ್ದು "ನಿನ್ನ ಮಾನವನ್ನು ಕಾಯುಲಿಕ್ಕೆ ನಾವೆಲ್ಲರೂ ನಮ್ಮ ಮಕ್ಕಳನ್ನೂ ಅಕ್ಕತಂಗಿಯರನ್ನೂ ತುರುಕರಿಗೆ ಕೊಟ್ಟೆವು; ನೀನು ಕಷ್ಟದಿಂದ ಕಾಲ ಕಳೆಯಬೇಕೆಂದು ನಿಶ್ಚಯ ಮಾಡಿದ್ದರೆ ಹಾಗೇ ಆಗಲಿ; ಆದರೆ ಇನ್ನು ಮುಂದೆ ಈ ಸ್ಥಳವು ನಿನ್ನನ್ನು ಇಲ್ಲಿರಗೊಡಲಾರದು. ನಿನ್ನ ಸೊಕ್ಕನ್ನು ಮುರಿಯದಿದ್ದರೆ ನಾನು **ಮಾನಸಿಂಗ**ನಲ್ಲ," ಎಂದು ನುಡಿದು, ಕುದುರೆಯನ್ನೇರಿದನು. ಅದಕ್ಕೆ **ಪ್ರತಾಪ**ನು "ಒಳ್ಳೆಯದು, ಆವಾಗಲೂ ನಾನು ಸಂತೋಷದಿಂದ ನಿನಗೆ ಕಾಣಿಸಿಕೊಳ್ಳುವೆನು" ಎಂದು ಹೇಳಿ, ಅವನು ಕುಳಿತಿದ್ದ ಸ್ಥಳವನ್ನು ಶುದ್ಧಿ ಮಾಡಿಸಿದನು.

---

* ರಜಪೂತರು ಬ್ರಾಹ್ಮಣರಂತೆ ಚಿತ್ರಾಹುತಿಯನ್ನು ಇಡುತ್ತಾರೆ. ಉಣ್ದೇವನೆಂದರೆ ಊಟದ ಅಧಿದೇವತೆಯು. ಈ ಶಬ್ದವು ಕನ್ನಡ ನುಡಿಯ ಉಣ್ ಧಾತುವಿನಿಂದ ಹುಟ್ಟಿರುತ್ತದೆ.

**ಉದಯಸಾಗರ**ದಲ್ಲಿ ನಡೆದ ಈ ಎಲ್ಲ ವೃತ್ತಾಂತವು **ಬಾದಷಹ**ನ ಕಿವಿ ವರೆಗೆ ಮುಟ್ಟಿತು. ಅವನು ಅದನ್ನು ಕೇಳಿ ಬಹಳ ಕೋಪ ಹೊಂದಿ ತನ್ನ ಹಿರಿಯ ಮಗನಾದ **ಸೆಲೀಮ**ನನ್ನೂ, **ಮಾನಸಿಂಗ**ನನ್ನೂ, **ಪ್ರತಾಪ**ನ ತಮ್ಮನ ಮಗನಾದ **ಮೊಹಬತ್‌ಖಾನ**ನನ್ನೂ ದೊಡ್ಡ ದಂಡಿನೊಡನೆ **ರಾಣಾ**ನ ಸೊಕ್ಕು ಮುರಿಯಲು ಕಳುಹಿದನು. **ಪ್ರತಾಪಸಿಂಗ**ನು ೨೨,೦೦೦ ರಜಪೂತರೊಡನೆ **ಹುದಲಿಗಟ್ಟ**ವೆಂಬಲ್ಲಿ ಮೊಗಲರಿಗೆ ಎದುರಾದನು. (ಶ್ರಾವಣ ಶುದ್ಧ ೭ ಶಕೆ ೧೬೩೨). ಆ ಕಾಳಗದಲ್ಲಿ **ಪ್ರತಾಪಸಿಂಗ**ನು **ರಾಜಮಾನಸಿಂಗ**ನನ್ನು ಕೆಣಕಬೇಕೆಂದು ಬಹಳ ಪ್ರಯತ್ನಿಸಿದನು; ಆದರೆ ದುರ್ದೈವದಿಂದ ಆ ಪ್ರಯತ್ನವು ನಿಷ್ಫಲವಾಯಿತು. ಆಗ ಅವನು **ಸೆಲೀಮ**ನಿದ್ದೆಡೆಗೆ ಹೋಗಿ, ಅವನ ಕಾವಲುಗಾರರನ್ನು ಕಡಿದು ಅವನ ಮಾಹುತನನ್ನು ಕೊಂದನು. ಮೊಗಲರ ಸರದಾರರೆಲ್ಲರೂ **ಸೆಲೀಮ**ನ ರಕ್ಷಣಕ್ಕೆ ಅಲ್ಲಿಗೆ ಬಂದರು. ರಜಪೂತ ಸರದಾರರೂ ತಮ್ಮ ಅರಸನನ್ನು ಕಾಪಾಡಲಿಕ್ಕೆ ಬಹಳವಾಗಿ ಹಾರೈಸಿದರು (ಹಾತೊರೆದರು). **ಝಾಲಾ**ದ ಅರಸನೂ, **ಮಾನಾ**ಯೆಂಬ ಮತ್ತೊಬ್ಬ ಸರದಾರನೂ, ನಿಸ್ಸೀಮವಾದ ಸ್ವಾಮಿ ಭಕ್ತಿಯನ್ನು ತೋರಿಸಿ ಕಾಳಗದಲ್ಲಿ ಮಡಿದರು. ಈ ಕಲಿತನದಿಂದ ಅವರ ವಂಶದವರು ಆ ಹೊತ್ತಿನಿಂದ ರಾಜರೆಂಬ ಬಿರುದನ್ನೂ, ರಾಜಚಿಹ್ನಗಳನ್ನೂ, **ರಾಣಾ**ನ ಬಲಭಾಗದಲ್ಲಿ ಕುಳ್ಳಿರುವ ಅಧಿಕಾರವನ್ನೂ ಹೊಂದಿರುತ್ತಾರೆ.

ಈ **ಹುದಲಿಗಟ್ಟ**ದ ಕಾಳಗದಲ್ಲಿ **ಪ್ರತಾಪಸಿಂಗ**ನಿಗೆ, ಬರ್ಜಿಯಿಂದ ೩, ಗುಂಡಿನಿಂದ ೧, ಕತ್ತಿಯಿಂದ ೩, ಹೀಗೆ ೭ ಪೆಟ್ಟುಗಳು ತಾಗಿದವು. ರಜಪೂತರು ಜೀವದ ಹಂಗು ದೊರೆದು ಎಷ್ಟು ಹೋರಾಡಿದರೂ ಮೊಗಲರ ದೊಡ್ಡ ದಂಡಿಗೆ ಸರಿಯಾಗಲಿಲ್ಲ. ಕಾಳಗಕ್ಕೆ ನಿಂತ ೨೨,೦೦೦ ರಜಪೂತರಲ್ಲಿ ೧೪,೦೦೦ ಜನರು ರಣದಲ್ಲಿ ಮಡಿದರು!! ಕಟ್ಟಕಡೆಗೆ **ಪ್ರತಾಪಸಿಂಗ**ನು ತನ್ನ **ಚಿತುಕ್ಕ**ವೆಂಬ ಕುದುರೆಯನ್ನೋಡಿಸಿಕೊಂಡು ರಣಭೂಮಿಯನ್ನು ಬಿಟ್ಟು ನಡೆದನು. ಮೂರು ನಾಲ್ಕು ಮಂದಿ ಮೊಗಲರ ಸರದಾರರು ಅವನನ್ನು ಬೆನ್ನಟ್ಟಿದರು. ಹಾದಿಯಲ್ಲಿ ಅಡ್ಡವಾಗಿದ್ದ ಒಂದು ದೊಡ್ಡ ಹಳ್ಳವನ್ನು **ಚಿತುಕ್ಕ**ವು ಒಮ್ಮೆಯೇ ಹಾರಿದುದರಿಂದ, ಮೊಗಲರು

ಸ್ವಲ್ಪ ಹಿಂದೆ ಬಿದ್ದರು. ಆದರೆ ಅಷ್ಟರಲ್ಲಿ ಆ ಮಹಾಪ್ರಾಣಿಯಾದ **ಚಿತುಕ್ಕಿನ** ಅವಸಾನವು ಒದಗಿ ಸತ್ತುಬಿದ್ದಿತು. ಆ ಕ್ಷಣವೇ "ಎಲೋ ನೀಲಿಯ ಕುದುರೆಯ ಸವಾರನೇ" ಎಂಬ ಶಬ್ದಗಳು **ಪ್ರತಾಪನ** ಹಿಂದಿನಿಂದ ಉಚ್ಚರಿಸಲ್ಪಟ್ಟವು. ಆ ಕಾಲದಲ್ಲಿ ಅವನಿಗಾದ ಭಯವಿಸ್ಮಯವನ್ನು ವಾಚಕರೇ ಊಹಿಸಬಹುದು. ಕುದುರೆಯು ಮಡಿದುದರಿಂದ ತಪ್ಪಿಸಿಕೊಂಡು ಹೋಗುವ ಆಶೆಯೇ ಅವನಿಗೆ ಇರಲಿಲ್ಲ. ಶತ್ರುಗಳು ದೂರವಾಗಿದ್ದರೆ ಒಂದು ಕ್ಷಣ ವಿಶ್ರಾಂತಿಯನ್ನಾದರೂ ತೆಗೆದುಕೊಳ್ಳಬಹುದಾಗಿತ್ತು; ಅಥವಾ ಬೇರೆ ಕಡೆಗೆ ಹೋಗಲಿಕ್ಕಾದರೂ ಅನುಕೂಲವಾಗುತ್ತಿತ್ತು. ಆದರೆ ಹತ್ತಿರದಲ್ಲಿಯೇ ಅವರ ಶಬ್ದಗಳು ಕೇಳಬಂದುವು. ಆಗ ಅವನು ತನ್ನ ಮನಸ್ಸಿನಲ್ಲಿ ವಿಚಾರ ಮಾಡಿದುದೇನಂದರೆ:—"ಇನ್ನು **ಅಕ್ಬರನಿಗೆ** ತಲೆ ಬಾಗಿಸುವುದಿಲ್ಲವೆಂಬ ಪಂಥವನ್ನು ಸಾಧಿಸುವುದು ಹೇಗೆ? ತುರುಕರೊಡನೆ ಶರೀರ ಸಂಬಂಧವನ್ನು ಮಾಡಿ ಭ್ರಷ್ಟರಾದ **ಮಾನಸಿಂಗ** ಮುಂತಾದ ಬೇರೆ ರಜಪೂತರಿಗೆ ಮೋರೆಯನ್ನು ಹೇಗೆ ತೋರಿಸಬೇಕು? ಈಗವರ ಕಯ್ಕಾಲು ಕಟ್ಟಿಕೊಳ್ಳಬೇಕಾಯಿತಲ್ಲಾ! ಸದ್ಗುಣಗಳಿಗೆ ದೇವರು ನೆರವಾಗುತ್ತಾನೆಂಬ ಮಾತು ಸುಳ್ಳೇ? ಮೊಗಲರಿಗೆ 'ನಮೊ' ಎನ್ನ ಬಾರದೆಂದು ಹುಟ್ಟಿದ ನಾಡನ್ನು ಬಿಟ್ಟು, ಕಾಳಗದಲ್ಲಿ ಸಾವಿರಾರು ಮಂದಿ ಶೂರರಾದ ಸರದಾರರ ಪ್ರಾಣಹಾನಿಯನ್ನು ಮಾಡಿಸಿ, ಈಗ ಆ ಮೊಗಲರ ದಾಸನಾಗಿರಬೇಕೇ? ಛೀ! ಈ ಪ್ರಾಣವನ್ನು ಧರಿಸಕೂಡದು. ಆದರೆ ಆತ್ಮಹತ್ಯವನ್ನಾದರೂ ಮಾಡಿಕೊಳ್ಳಲಿಕ್ಕವಕಾಶವೆಲ್ಲಿದೆ? ಆತ್ಮಹತ್ಯವು ದೋಷವಲ್ಲವೇ? ಅಯ್ಯೋ, ಹಾಗೆ ಮಾಡಕೂಡದು. ಹಾಗಾದರೆ ಮತ್ತೇನು ಮಾಡಬೇಕು? **ಅಕ್ಬರನ** ಕೂಡ ಭೋಜನಮಾಡಿದ ಜನರೊಡನೆ ಊಟ ಮಾಡಲಿಕ್ಕಾದರೂ ಒಡಂಬಡದೆ ಈಗ ಅವನಿಗೆ ಶರಣುಹೋಗಿ, ಅವನೊಡನೆ ಶರೀರ ಸಂಬಂಧಮಾಡಲಿಕ್ಕೆ ಒಪ್ಪಿಕೊಳ್ಳಬೇಕೇ? ಛೀ, ಇಂತಹ ಮಾತೆಂದಿಗೂ ಆಗದು!! **ಪ್ರತಾಪಸಿಂಗನು** ಈ ತರದ ಕಲ್ಪನಾ ತರಂಗಗಳಲ್ಲಿ ಮುಳುಗಿರುವಾಗೊಂದು ವಿಚಿತ್ರವಾದ ಕೌತುಕವು ಸಂಭವಿಸಿತು. ಅದೇನೆಂದರೆ:—

"ದೇವರ ಒಲುಮೆಯೊಂದಿದ್ದರೆ ಗುಡ್ಡವು ಹೋಗಿ ಕಡ್ಡಿಯಾಗುತ್ತದೆ" ಎಂಬ ನಾಣ್ಣುಡಿಯು ದಿಟವೇ ಸರಿ.* ಸರ್ವ ಶಕ್ತಿವಂತನಾದ ದೇವರ ಮಹಿಮೆಯು ಅಗಾಧವಾಗಿರುತ್ತದೆ. ಅವನು ಸತ್ಯಪಕ್ಷಪಾತಿಯೂ, ಸದ್ಧರ್ಮಾಭಿಮಾನಿಯೂ, ಸದ್ಗುಣಪರಿಪಾಲಕನೂ, ಸದಾಚಾರ ಸಂಪನ್ನರ ರಕ್ಷಕನೂ, ಭಕ್ತವತ್ಸಲನೂ ಆಗಿರುತ್ತಾನೆಂದು ಹಿರಿಯರೂ, ಬಲ್ಲವರೂ ಹೇಳುವ ಮಾತು ಸುಳ್ಳಲ್ಲ. ಆ ಕಾಲದಲ್ಲಿ ಈ ಮಾತು **ಪ್ರತಾಪಸಿಂಗ**ನಿಗೆ ಪ್ರತ್ಯಕ್ಷವಾಗಿ ಅನುಭವಕ್ಕೆ ಬಂತು. "ಎಲೋ ನೀಲಿಯ ಕುದುರೆಯ ಸವಾರನೇ" ಎಂಬ ಶಬ್ದಗಳು ಅವನ ಕಿವಿಗೆ ಬಿದ್ದ ಸ್ವಲ್ಪ ಹೊತ್ತಿನಲ್ಲೇ ಅವನ ಮಲತಮ್ಮನಾದ **ಸುಕ್ತ**ನು ಮುಂದೆ ಬಂದು ನಿಂತನು.

ಈ **ಸುಕ್ತ**ನಿಗೂ **ಪ್ರತಾಪ**ನಿಗೂ ಗೃಹಕೃತ್ಯದ ವಿಷಯದಲ್ಲಿ ವಿರೋಧ ಬಂದಿದ್ದುದರಿಂದ, **ಸುಕ್ತ**ನು ಮೊಗಲರ ಆಶ್ರಯದಲ್ಲಿ ಇದ್ದನು. **ಹುದಲಿಗಟ್ಟ**ದ ರಣಭೂಮಿಯಿಂದ **ಪ್ರತಾಪಸಿಂಗ**ನೊಬ್ಬನೇ ಹೋಗುವುದನ್ನೂ, ೨-೩ ಮಂದಿ ಮೊಗಲರ ದಂಡಿನವರು ಅವನನ್ನು ಬೆನ್ನಟ್ಟುವುದನ್ನೂ ನೋಡಿ, ಅವನ ಮನಸ್ಸು ಕರಗಿತು; ಅಂತಃಕರಣವು ಹೆಚ್ಚಿತು; ಭ್ರಾತೃವಾತ್ಸಲ್ಯವು ಉಕ್ಕೇರಿತು. ಅವನು ಕೂಡಲೇ ತನ್ನ ಕುದುರೆಯನ್ನೋಡಿಸಿ, ತನ್ನಣ್ಣನನ್ನು ಬೆನ್ನಟ್ಟಿದ ಸರದಾರರನ್ನು ಹಾದಿಯಲ್ಲಿ ಸಂಹರಿಸಿ, ಮೇಲೆ ಹೇಳಿದಂತೆ **ಪ್ರತಾಪಸಿಂಗ**ನ ಮುಂದೆ ಬಂದು ನಿಂತನು. ಆಗ ಅವರಿಬ್ಬರಿಗಾದ ಸಂತಸವನ್ನುಬಣ್ಣಿಸಲಳವಲ್ಲ. ಅವರು ಒಬ್ಬರನ್ನೊಬ್ಬರು ಗಟ್ಟಿಯಾಗಿ ಅಪ್ಪಿಕೊಂಡರು. ಮತ್ತು ಕಣ್ಣಿನಿಂದ ಆನಂದಬಾಷ್ಪಗಳನ್ನು ಸುರಿಸಿದರು. **ಸುಕ್ತ**ನು ವಿನೋದದಿಂದ "ಮನುಷ್ಯನು ಜೀವವನ್ನುಳಿಸಿಕೊಳ್ಳಲಿಕ್ಕೆ ಓಡುವಾಗೇನು ವಿಚಾರಮಾಡುತ್ತಾನೆ?' ಎಂದು ಕೇಳಿದನು. ಅದಕ್ಕೆ ವೀರನಾದ **ಪ್ರತಾಪ**ನು "ನಾನು ಜೀವವನ್ನು ಉಳಿಸಿಕೊಳ್ಳಲಿಕ್ಕೆ ಓಡಲಿಲ್ಲ; ಉಪಾಯಾಂತರದಿಂದ ಮೊಗಲರನ್ನು ಮುರಿಬಡಿದು ರಜಪೂತರ

* ಉಡುರಾಜಂ ಕಳೆಗುಂದಿ ಪೆರ್ಚದಿಹನೇ ನ್ಯಗ್ರೋಧಬೀಜಂ ಕೆಲಂ।
ಸಿಡಿದುಂ ಪೆರ್ಮರವಾಗದೇ ಎಳೆಗರುಂ ಎತ್ತಾಗದೇ ಲೋಕದೊಳ್ ॥
ಮಿಡಿ ಪಣ್ಣಾಗದೆ ದೇವರೊಲ್ಮೆಯಿರಲಾ ಕಾಲಾನುಕಾಲಕ್ಕೆ ತಾಂ।
ಬಡವಂ ಬಲ್ಲಿದನಾಗನೇ ಹರಹರಾ ಶ್ರೀಚೆನ್ನ ಸೋಮೇಶ್ವರಾ ॥

ಸೋಮೇಶ್ವರಶತಕ.

ಕುಲಧರ್ಮಗಳನ್ನು ಕಾಪಾಡಲು ಓಡಿದೆನು" ಎಂದು ಉತ್ತರಕೊಟ್ಟನು. ಆಗ ಅವರೀರ್ವರಿಗೂ ಹೆಚ್ಚು ಮಾತಾಡಲಿಕ್ಕೆ ಹೊತ್ತು ಇರಲಿಲ್ಲ. ಏಕೆಂದರೆ, ಮೊಗಲರ ಸರದಾರರು ಬೆನ್ನಟ್ಟಿ ಬರುವ ಭಯವಿತ್ತು. ಆದುದರಿಂದ **ಸುಕ್ತ**ನು ತನ್ನ "**ಉಂಕಾರೊ**" ಎಂಬ ಕುದುರೆಯನ್ನು **ಪ್ರತಾಪಸಿಂಗ**ನಿಗೆ ಕೊಟ್ಟು, ಮರಳಿ ಮೊಗಲರ ಪಾಳೆಯಕ್ಕೆ ಬಂದನು. **ಸೆಲೀಮ**ನು ಏನಾಯಿತೆಂದು ಕೇಳಿದುದಕ್ಕೆ **ಸುಕ್ತ**ನು—"**ಪ್ರತಾಪ**ನು ಕಡುಗಲಿಯಾಗಿದ್ದಾನೆ; ಅವನು ಉಳಿದ ನಮ್ಮ ಸರದಾರರನ್ನೂ, ನನ್ನ ಕುದುರೆಯನ್ನೂ ಕೊಂದುದರಿಂದ ಹೇಗಾದರೂ ಮಾಡಿ ನಾನೊಬ್ಬನು ಜೀವವುಳಿಸಿಕೊಂಡು ಬಂದೆನು" ಎಂದು ಹೇಳಿದನು.

ಮುಂದೆ **ಸೆಲೀಮ**ನು ಅಭಯ ಕೊಟ್ಟು ನಿಜವಾದ ಸಂಗತಿಯನ್ನು ಕೇಳಿದುದಕ್ಕೆ; **ಸುಕ್ತ**ನು ಎಲ್ಲವನ್ನು ಹೇಳಿದನು. ಆಗ **ಸೆಲೀಮ**ನು ಅವನ ಜೀವಕ್ಕೇನೂ ಅಪಾಯ ಮಾಡದೆ, ಅವನನ್ನು ಕೆಲಸದಿಂದ ತೆಗೆದುಹಾಕಿದನು. ಕೂಡಲೆ **ಸುಕ್ತ**ನು ಉಪಾಯದಿಂವ **ಭಿನ್‌ಸ್ರೋರ** ಪ್ರಾಂತ್ಯವನ್ನು ಹಿಡಿದುಕೊಂಡು **ಉದಯಪುರ**ಕ್ಕೆ ಬಂದನು. ಬಳಿಕ **ಪ್ರತಾಪ**ನು ಆ ಪ್ರಾಂತವನ್ನು ಅವನಿಗೆ ಉಂಬಳಿ ಹಾಕಿಕೊಟ್ಟನು.

ಮುಂದೆ ಮಳೆಗಾಲವು ತೀರಿದ ಬಳಿಕ **ಸೆಲೀಮ**ನು ಮತ್ತೆ ದಂಡೆತ್ತಿ ಬಂದು **ಕೋಮಲ್ಮೀರ**ನ್ನು ಮುತ್ತಿದನು. ಅದನ್ನು ರಜಪೂತರು ಬಹಳ ದಿವಸಗಳ ವರೆಗೆ ಕಾಪಾಡಿದರು. ಕಡೆಗೆ **ಆಬು**(೯೭)ವಿನ ರಜಪೂತ ಸರದಾರನು ಬಾವಿಯ ನೀರಿನಲ್ಲಿ ವಿಷಪದಾರ್ಥಗಳನ್ನು ಹಾಕಿದುದರಿಂದ, **ಪ್ರತಾಪಸಿಂಗ**ನು **ಚೌಂದ**ಕ್ಕೆ (೯೮) ಹೋದನು. **ಕೋಮಲ್ಮೀರ**ವು ಮೊಗಲರ ಕಯ್ಸೇರಿದ ಬಳಿಕ **ರಾಜಾಮಾನಸಿಂಗ**ನು **ಗೋಗುಂದ** ಮುಂತಾದ ಊರುಗಳನ್ನು ಮುತ್ತಿದನು. **ಅಕ್ಬರ**ನನ್ನು ಕೂಡಿದ **ಸಗರ್ಜಿ** ಎಂಬ **ಪ್ರತಾಪಸಿಂಗ**ನ ಮಲತಮ್ಮನ ಮಗನಾದ **ಮೊಹಬತ್ತಖಾನ**ನು **ಉದಯಪುರ**ವನ್ನು ಹಿಡಿದುಕೊಂಡನು, ಮತ್ತು **ಖಾನ ಫೇರಿದ್** ಎಂಬ ಸರದಾರನು **ಚಪ್ಪಣ**ಕ್ಕೆ ಒಳನುಗ್ಗಿದನು.

ತರುವಾಯ ಎಂದಿನಂತೆ ಕಾಳಗಗಳಾಗಲಿಲ್ಲ. ಮುಂದೆ ೧೦೦ ವರ್ಷಗಳ ಮೇಲೆ **ಶಿವಾಜಿ** ಮುಂತಾದ ಮರಾಟರು ಮಾಡಿದ ಕಾಯಕವನ್ನು

**ಪ್ರತಾಪಸಿಂಗ**ನೂ ಮಾಡತೊಡಗಿದನು; ಮೊಗಲರ ದಂಡು ಬಂದಾಗ ಕಣ್ಣುಮರೆಯಾಗಿ, ಇಕ್ಕಟ್ಟನಲ್ಲಿ ಸಿಕ್ಕಿದಾಗ ಅವರನ್ನು ನಾಶಮಾಡುತ್ತಿದ್ದನು. ಅವನು ಒಮ್ಮೆ **ಫೇರಿದ್‌ಖಾನ**ನ ದಂಡನ್ನು ಚೂರು ಚೂರು ಮಾಡಿ ಬಿಟ್ಟನು. ಸಂಬಳಕ್ಕೆ ದುಡಿಯುವ ಮೊಗಲರು ಈತೆರದ ಬಡಿದಾಟಕ್ಕೆ ಬೇಸತ್ತು, **ಪ್ರತಾಪಸಿಂಗ**ನನ್ನು ಹಿಡಿಯಲಿಕ್ಕೆ ವಿಶ್ವಪ್ರಯತ್ನ ಮಾಡಿದರು. ಆದರೆ ಸದಭಿಮಾನಿಗಳ ಪಕ್ಷಪಾತಿಯಾದ **ದೇವರ** ಕೃಪೆಯಿಂದ ಅವರ ಪ್ರಯತ್ನಗಳೆಲ್ಲ ನಿಷ್ಫಲವಾದವು. ಈತೆರದ ಬಡಿದಾಟದಲ್ಲಿ **ಪ್ರತಾಪಸಿಂಗ**ನು ಒಂದು ಗುಡ್ಡದಿಂದ ಮತ್ತೊಂದು ಗುಡ್ಡಕ್ಕೂ, ಒಂದು ಹಳ್ಳಿಯಿಂದ ಮತ್ತೊಂದು ಹಳ್ಳಿಗೂ, ಒಂದು ಗವಿಯಿಂದ ಮತ್ತೊಂದು ಗವಿಗೂ ಹೆಂಡರು ಮಕ್ಕಳೊಡನೆ ಓಡಿಹೋಗಬೇಕಾಯಿತು. ಒಮ್ಮೆ ಒಂದು ಹಳ್ಳಿಯ ಭಿಲ್ಲರು ಅವರ ಹೆಂಡರುಮಕ್ಕಳನ್ನು **ಜಾವೂರ್** (೯೯) ಎಂಬ ಗ್ರಾಮದ ಕಣಿಗಳಲ್ಲಿ ಬಚ್ಚಿಟ್ಟು ಕಾಪಾಡಿದರು. ಇಂತಹ ಸ್ಥಿತಿಯಲ್ಲಿಯೂ **ಪ್ರತಾಪ**ನು ತನ್ನ (ಪಂಥವ) ಹೇವನ್ನು* ಬಿಡಲಿಲ್ಲ. **ಅಕ್ಬರ**ನಿಗೆ ಒಬ್ಬ ಬೇಹುಗಾರನು **ಪ್ರತಾಪ**ನು ತನ್ನ ಸರದಾರರೊಡನೆ ಕಂದಮೂಲಗಳ ಭೋಜನವನ್ನು ರಾಜಪದ್ಧತಿಯಂತೆ ಮಾಡುತ್ತಿದ್ದನೆಂದು ತಿಳಿಸಿದನು. ಆ ವರ್ಣನೆಯನ್ನು ಕೇಳಿ, ಎಲ್ಲರೂ ಬೆರಗಾದರು. ದರಬಾರಿನಲ್ಲಿದ್ದ ಪ್ರತಿಯೊಬ್ಬ ಸರದಾರನ ಮನಸ್ಸಿನಲ್ಲಿ **ಪ್ರತಾಪ**ನ ವಿಷಯದಲ್ಲಿ ಪೂಜ್ಯಬುದ್ಧಿಯು ಹುಟ್ಟಿತು. **ಬಾದಷಹ**ನ ಮುಖ್ಯ ಸರದಾರನಾದ **ಖಾನಖಾನ**ನು ಪಾರ್ಸಿನುಡಿಯಲ್ಲಿ ಕೆಲವು ಶ್ಲೋಕಗಳನ್ನು ಮಾಡಿ **ರಾಣ**ನಿಗೆ ಕಳುಹಿದನು. ಅವುಗಳ ತಾತ್ಪರ್ಯವೇನೆಂದರೆ—ಈ ಜಗತ್ತಿನೊಳಗಿನ ಎಲ್ಲಾ ವಸ್ತುಗಳು ಅಶಾಶ್ವತವಾದವುಗಳು; ಹೊಲಮನೆಗಳೂ, ಬದುಕೂ ಕೆಲವು ದಿವಸಗಳ ಬಳಿಕ ಇಲ್ಲದಂತಾಗುವುವು. ಆದರೆ ದೊಡ್ಡ ಮನುಷ್ಯನ ಸದ್ಗುಣಗಳು ಮಾತ್ರ ಆಚಂದ್ರಾರ್ಕವಾಗಿರುವುವು. **ಪುಟ್ಟುವು** ( **ಪ್ರತಾಪ**ನು) ಭೂಮಿಯನ್ನೂ, ಸಿರಿಯನ್ನೂ

---

* ನಿಂದಿಕೆ ಮೇಣ್ ನಯವಿದರಭಿ ।
ನಂದಿಕೆ ಸಿರಿಯೊರ್ಮೆ ಬರ್ಕೆ ಪೋಕೆ ಯಥೇಚ್ಛಂ ॥
ಇಂದೇ ಮೃತಿಯೆಯ್ದುಗೆ ಮೇಣ್ ।
ಮುಂದೆಯ್ದುಗೆ ನೀತಿಪಥವನುಳಿಯಂ ಧೀರಂ ॥

ಭ. ನೀತಿಶತಕ.

ತೊರೆದನೇ ಹೊರತು **ಬಾದಷಹ**ನಿಗೆ ತನ್ನ ತಲೆಯನ್ನು ಬಾಗಿಸಲಿಲ್ಲ; **ಹಿಂದೂಸ್ಥಾ**ನದ ಎಲ್ಲಾ ಅರಸರಲ್ಲಿ ಇವನು ಮಾತ್ರ ತನ್ನ ಕುಲಾಭಿಮಾನವನ್ನು ಪಾಲಿಸಿದನು.

ಇಂತಹ ಶತ್ರುಗಳ ಸ್ತುತಿಗಳು, **ಪ್ರತಾಪಸಿಂಗ**ನನ್ನು ಧೈರ್ಯಗೊಳಿಸಿದವೆನ್ನಲಿಕ್ಕೇನೂ ಅಡ್ಡಿಯಿಲ್ಲ. ಆದರೆ ಒಣ ಹೊಗಳಿಕೆಯಿಂದ ಹೊಟ್ಟೆ ತುಂಬುವದಿಲ್ಲವೆಂಬ ಮಾತು ಎಲ್ಲರಿಗೂ ಗೊತ್ತುಂಟು. ಈ ಕಾಲಕ್ಕೆ **ಪ್ರತಾಪಸಿಂಗ**ನು ಪಟ್ಟ ಕಷ್ಟವನ್ನು ಬಣ್ಣಿಸಲಳವಲ್ಲ. ನಿರ್ದಯರಾದ ಮುಸಲ್ಮಾನರು ಅವನನ್ನೆಡೆಬಿಡದೆ ಬೆನ್ನಟ್ಟ ಗೋಳಾಡಿಸಿ ಬಿಟ್ಟರು. ಒಮ್ಮೆ ಮಾಡಿಟ್ಟ ಅಡಿಗೆಯನ್ನು ಬಿಟ್ಟು ಅವನು ಹೆಂಡರುಮಕ್ಕಳೊಡನೆ ಓಡಿ ಹೋಗಬೇಕಾಯಿತು. ತಾನು ಉಪವಾಸವಿದ್ದುದಕ್ಕೆ ಅವನಿಗೆ ದುಃಖವಾಗುತ್ತಿರಲಿಲ್ಲ. ಆದರೆ ರಾಜಭೋಗಗಳನ್ನುಪಭೋಗಿಸಿದ ತನ್ನ ಹೆಂಡರು ಮಕ್ಕಳು ಅನ್ನನೀರಿಲ್ಲದೆ ಬಳಲುವುದನ್ನು ನೋಡಿ, ಅವನು ಮನಸ್ಸಿನಲ್ಲಿ ಮಮ್ಮಲ ಮರುಗುತ್ತಿದ್ದನು. ಒಂದು ದಿನ ಅವನ ಹೆಂಡತಿಯೂ, ಸೊಸೆಯೂ ಒಂದು ಗಿಡದ ಬುಡದಲ್ಲಿ ಕೆಲವು ರೊಟ್ಟಿಗಳನ್ನು ಸುಟ್ಟು, ಎಲ್ಲರಿಗೂ ಊಟಕ್ಕೆ ಬಡಿಸಿ, ಉಳಿದ ರೊಟ್ಟಿಗಳನ್ನು ಹುಡುಗರಿಗೆ ಮುಚ್ಚಿಟ್ಟು, ಪಾತ್ರೆಗಳನ್ನು ತೊಳೆಯಲಿಕ್ಕೆ ನೆರೆಯಲ್ಲಿದ್ದ ಹೊಳೆಗೆ ಹೋಗಿದ್ದರು; **ಪ್ರತಾಪ**ನು ಆ ಗಿಡದ ಬುಡದಲ್ಲಿ ಸ್ವಲ್ಪ (ಮರೆಯಾಗಿ) ಮಲಗಿ ತನ್ನ ಸ್ಥಿತಿಯ ವಿಷಯವಾಗಿ ವಿಚಾರ ಮಾಡುತ್ತಿದ್ದನು. ಆಗ ಇದ್ದುದಕ್ಕೆ ಇದ್ದಹಾಗೆ ಅವನ ಚಿಕ್ಕ ಮಗಳು ಚಿಟ್ಟನೆ ಚೀರಿದಳು; ಅವನು ಎದ್ದು ನೋಡಲು, ಮುಚ್ಚಿಟ್ಟದ್ದ ರೊಟ್ಟಿಗಳನ್ನು ಒಂದು ಕಾಡು ಬೆಕ್ಕು ಎಳೆದು ಕೊಂಡು ಹೋಗುತ್ತಿತ್ತು; ಅವನು ಬರುವಷ್ಟರಲ್ಲಿ ಆ ಬೆಕ್ಕು ಮಾಯವಾಯಿತು. ಆಗ ತಾನು ತಿನ್ನಬೇಕೆಂದಿಟ್ಟ ರೊಟ್ಟಿಯು ಕಳೆದುಹೋದುದರಿಂದ, ಆ ಕೂಸು ಮಾಡಿದ ಪ್ರಲಾಪವನ್ನು ಕೇಳಿ **ಪ್ರತಾಪಸಿಂಗ**ನು ಎದೆಗುಂದಿದನು; ಅವನ ಧೈರ್ಯವು ಕರಗಿತು; ದೃಢನಿಶ್ಚಯವು ಅಳಿಯಿತು; ಸ್ವಾಭಿಮಾನವು ಹಿಮ್ಮೆಟ್ಟಿತು; ಮೊಗಲರ ಮೇಲಿನ ದ್ವೇಷವು ತಗ್ಗಿತು; ಸ್ವಕುಲಾಭಿಮಾನವು ಹಿಂಜರಿಯಿತು; ವಿಚಾರವು ಕುಗ್ಗಿತು; ಬಲವು ಕುಂದಿತು. ಆಗ ಅವನು ದುಃಖದ ಆವೇಶದಲ್ಲಿ ಒಂದು ಕಾಗದವನ್ನು

**ಅಕ್ಬರ ಬಾದಷಹ**ನಿಗೆ ಬರೆದನು. ಅದರಲ್ಲಿ ತನಗಿನ್ನುಮುಂದೆ ಹೆಚ್ಚಿನ ಉಪದ್ರವ ಕೊಡಬಾರದೆಂದು ಬೇಡಿಕೊಂಡಿದ್ದನು.

ಆ ಕಾಗದವು ಬಂದ ಕೂಡಲೆ **ಅಕ್ಬರ**ನಿಗಾದ ಸಂತೋಷವನ್ನು ಹಿಡಿಯಲು ಆಗಲಿಲ್ಲ. ಆ ದಿವಸ ಅವನು ದರಬಾರಿಗೆ ರಜವನ್ನು ಕೊಟ್ಟು ತನ್ನ ರಾಜ್ಯದ ಜನರೆಲ್ಲರು ಸಂತೋಷಪ್ರದರ್ಶನವನ್ನು ಮಾಡಬೇಕೆಂದು ಕಟ್ಟುಮಾಡಿ, ಆ ಕಾಗದವನ್ನು **ಬಿಕಾನೇರಿ**ನ ಅರಸನ ತಮ್ಮನಾದ **ಪೃಥ್ವೀರಾಜ**ನಿಗೆ ಅತ್ಯಾನಂದದಿಂದ ತೋರಿಸಿದನು. ಈ **ಪೃಥ್ವೀ ರಾಜ**ನು ಸ್ವಕುಲಾಭಿಮಾನಿಯೂ, ಶೂರನೂ, ಕವಿಯೂ ಆಗಿದ್ದನು. **ಬಾದಷಹ**ನು ತನಗೆ ತೋರಿಸಿದ ಕಾಗದವನ್ನು ನೋಡಿ, ಅವನು ಅಂದು ದೇನಂದರೆ:—"**ಪ್ರತಾಪ**ನನ್ನು ನಾನು ಪೂರಾ ಬಲ್ಲೆನು; ಅವನು ಎಂದಿಗೂ ಹೀಗೆ ಬರೆಯಲಿಕ್ಕಿಲ್ಲ; ತಮ್ಮ ಸಿಂಹಾಸನವನ್ನು ಅವನಿಗೆ ಕೊಟ್ಟರೂ ಅವನು ತಮ್ಮ ಷರತ್ತುಗಳಿಗೆ ಒಡಂಬಡುವವನಲ್ಲ; ಅವನ ಹಗೆಗಳಾರೊ ಈ ಸುಳ್ಳು ಕಾಗದವನ್ನು ಹುಟ್ಟಿಸಿರುತ್ತಾರೆ; ಅಪ್ಪಣೆಯಾದರೆ ಅವನಿಗೆ ಒಂದು ಪತ್ರ ವನ್ನು ಕಳುಹಿ ನಿಜವಾದ ಸಂಗತಿಯನ್ನು ಅರಿಕೆ ಮಾಡುವೆನು." ಅದಕ್ಕೆ **ಬಾದಷಹ**ನು ಒಪ್ಪಿದುದರಿಂದ **ಪೃಥ್ವೀರಾಜ**ನು ತಾನು **ಬಾದಷಹ**ನ ಮುಂದೆ ಹೇಳಿದಂತೆ ಬರೆಯದೆ, ಕೆಲವು ಕವಿತ್ವ*ಗಳನ್ನು ಮಾಡಿ **ಪ್ರತಾಪಸಿಂಗ**ನಿಗೆ ಕಳುಹಿದನು.

"ಅಂಜಬೇಡವೆಂದರೆ ಆನೆಯು ಬಲವು" ಎಂಬ ಗಾದೆಯ ಮಾತು ಈ ಕಾಲಕ್ಕೆ **ಪ್ರತಾಪಸಿಂಗ**ನಿಗೆ ಪ್ರತ್ಯಕ್ಷಾನುಭವವಾಯಿತು. **ಅಕ್ಬರ**ನ ಆಶ್ರಯವನ್ನು ಹೊಂದಿ, ಸಿರಿಯಿಂದ ಮೆರೆಯುತ್ತಿದ್ದ ಸ್ವಜಾತೀಯ ಸರ ದಾರರು ತಂತಮ್ಮ ಸ್ಥಿತಿಯನ್ನು ಹೀಯಾಳಿಸಿಕೊಂಡು, ತನ್ನ ಧೈರ್ಯ ಶೌರ್ಯಾಭಿಮಾನಗಳನ್ನು ಹೊಗಳುತ್ತಾರೆಂದು ಪತ್ರದಲ್ಲಿ ಬರೆದುದನ್ನು

---

* ಈ ಕವಿತೆಗಳು ರಜಪೂತರ ಬಾಯಲ್ಲೀಗಲೂ ಇರುತ್ತವೆ. ಅವುಗಳ ತಾತ್ಪರ್ಯವೇನಂ ದರೆ:——ಎಲ್ಲಾ ಹಿಂದೂ ಜನರ ಆಶೆಯೂ ಒಬ್ಬ ಹಿಂದುವಿನಲ್ಲಿ ಮಾತ್ರ ಇರುತ್ತದೆ. ಆದರೂ ರಾಣನು ಅವರನ್ನು ನಿರಾಶರಾಗಿ ಮಾಡುತ್ತಾನಲ್ಲ! ನಮ್ಮ ಎಲ್ಲ ಸರದಾರರೂ ಬಲಗುಂದಿರುತ್ತಾರೆ, ಮತ್ತು ಸಾಧಾರಣವಾಗಿ ಎಲ್ಲ ಹೆಂಗಸರೂ ತಂತಮ್ಮ ಪಾತಿವ್ರತ್ಯವನ್ನು ಕಳೆದುಕೊಂಡಿರುತ್ತಾರೆ; ಆದುದರಿಂದ ಪ್ರತಾಪನೊಬ್ಬನು ಕಯ್ವಶನಾದರೆ ಅಕ್ಬರನು ಎಲ್ಲರನ್ನೂ ಒಂದೇಸಮನಾಗಿ ಎಣಿಸುವನು.

ಕಂಡು, ಅವನ ಕಣ್ಣಿನಿಂದ ಹರ್ಷಬಾಷ್ಪಗಳು ಉದುರಿದುವು: ತನ್ನ ಹಗೆಗಳಾದ ಮುಸಲ್ಮಾನ ಸರದಾರರೂ ತನ್ನ ಸ್ವಾವಲಂಬನವನ್ನೂ, ದೃಢ ನಿಶ್ಚಯವನ್ನೂ, ಸಾಹಸಶಕ್ತಿಯನ್ನೂ ಕೊಂಡಾಡುತ್ತಾರೆಂಬುದನ್ನು ಕೇಳಿ ಅವನ ಆನಂದವು ಮೇರೆದಪ್ಪಿತು. **ಪೃಥ್ವೀರಾಜ**ನು ಕಳುಹಿಸಿದ ಕವಿತೆಗಳಿಂದ ಅವನಿಗೆ ಸಾವಿರ ದಂಡಾಳುಗಳು ಬೆಂಬಲವಾದಷ್ಟು ಧೈರ್ಯವು ಬಂತು; ತನ್ನ ಪಂಥವನ್ನು ಏನಾದರೂ ನಡಿಸಬೇಕೆಂಬ ಲವಲವಿಕೆಯು ಅವನಲ್ಲಿ ಬಲಗೊಂಡಿತು. ತಾನು ಹಿಡಿದ ಮಾರ್ಗವು ಸರಿಯಾದುದೆಂದು ಎಲ್ಲರೂ ಒಪ್ಪಿಕೊಂಡುದರಿಂದ ಪ್ರಾಣವು ಹೋದರೂ ಅದನ್ನು ಬಿಡಬಾರದೆಂದು ಅವನಲ್ಲಿ ಹುರುಪು ಹುಟ್ಟಿತು.*

ಹಗೆಗಳ ಹೊಗಳಿಕೆಯಿಂದಲೂ, ಗೆಳೆಯರ ಸ್ತುತಿಯಿಂದಲೂ **ಪ್ರತಾಪಸಿಂಗ**ನ ದೃಢನಿಶ್ಚಯವು ಹೆಚ್ಚು ಬಲಗೊಂಡರೂ, ತಾನಿರುವ **ಆರಾವಳಿ** ಗುಡ್ಡವನ್ನು ಬಿಟ್ಟು, **ಸಿಂಧು** ಹೊಳೆಯ ಮೇಲಿರುವ **ಸೋಗಡ** (೯೦) ವೆಂಬಲ್ಲಿಗೆ ಹೋಗಿ, ಮೊಗಲರ ಕಾಟವನ್ನು ತಪ್ಪಿಸಿಕೊಳ್ಳುವುದು ಹೆಚ್ಚು ಪ್ರಶಸ್ತವಾದುದೆಂದು ಅವನಿಗೆ ತೋರಿತು. ಹೀಗೆ ಯೋಚಿಸುತ್ತಿರುವಾಗ ಒಂದುದಿನ **ಚಿತ್ತೂರಿ**ನ ವಂಶಪರಂಪರಾಗತಮಂತ್ರಿಯಾದ **ಭಾಮುಷಹ**ನು **ರಾಣ**ನ ಬಳಿಗೆ ಬಂದು ನಮಸ್ಕರಿಸಿ ಕಯ್ಗಳನ್ನು ಜೋಡಿಸಿಕೊಂಡು ಅಂದುದೇನಂದರೆ:—"ಸ್ವಾಮಿ, ತಮ್ಮ ಬಡ ಸೇವಕನದೊಂದು ಅರಿಕೆಯುಂಟು. ದೊರೆಗಳು ಅದನ್ನು ಚಿತ್ತಯಿಸಿ, ಬಳಿಕ ತಮ್ಮ ಮನಸ್ಸಿಗೆ ಸರಿದೋರಿದಂತೆ ಆಜ್ಞಾಪಿಸಲಿಕ್ಕೆ ಸಮರ್ಥರೇ ಆಗಿದ್ಧೀರಿ. ಮೊನ್ನೆ ಇಲ್ಲಿಂದ ಹೊರಟು **ಸೋಗಡ**ಕ್ಕೆ (೧೦೦) ಹೋಗಬೇಕೆಂದು ಪ್ರಭುಗಳ ಆಜ್ಞೆಯಾಯಿತಷ್ಟೆ; ಅದರಂತೆ ಈಗೆಲ್ಲ ಜೋಡಣೆಯನ್ನು ಮಾಡಿಸುತ್ತಿರುತ್ತೇನೆ. ಇನ್ನು ಮೂರು ನಾಲ್ಕು ದಿವಸಗಳಲ್ಲೆ ಎಲ್ಲ ಸಿದ್ಧತೆಯು ಆಗುವುದು. ಆದರೆ ಈ ವಿಷಯದಲ್ಲಿ ತಮ್ಮ ಭೃತ್ಯನದೊಂದು ಬಿನ್ನಹ ಉಂಟು. ತಮ್ಮ ಕಲಿತನವನ್ನೂ, ಸ್ವಜಾತಿ ಸ್ವಕುಲಾಭಿಮಾನಗಳನ್ನೂ,

---

* ಹರಣಮೆ ಪೋದೊಡಂ ದುರಿತಕೃತ್ಯವ ಗೆಯ್ಯದೆ ನೀತಿನಿಷ್ಠೆಗೋ।
ಸರಿಸದೆ ಬೇಡದಲ್ಪಧನರೆಂದೆನಿಪಾಪ್ತರುಮಂದುರಾತ್ಮರಂ॥
ಎರೆಯದೆ ಕಷ್ಟದಲ್ಲಿ ಧೃತಿಗುಂದದೆ ಸತ್ಪುರುಷಾನುಕೂಲವಾ।
ಗಿರುವ ಸದುಷ್ಕರವ್ರತವನಾರ್ ಸುಜನಗ್ಗುಪದೇಶವಿತ್ತರೋ॥ ಭ. ನೀತಿಶತಕ.

ದೃಢನಿಶ್ಚಯವನ್ನೂ ಜಗತ್ತೆಲ್ಲ ಕೊಂಡಾಡುತ್ತದೆ. ತಮ್ಮ ಕೀರ್ತಿಯು ಪ್ರಪಂಚದಲ್ಲಿ ಹಬ್ಬಿರುತ್ತದೆ. ಬಹಳ ಮಾತೇಕೆ? ತಮ್ಮ ಕಡುಹಗೆಯಾದ **ಅಕ್ಬರನೂ** ಕೂಡ ತಮ್ಮ ಗುಣಗಳನ್ನು ಹೊಗಳುತ್ತಾನೆ. ತಮ್ಮ ಕಟ್ಟ ಭಿಮಾನವನ್ನು ನೋಡಿ ಮುಸಲ್ಮಾನರು ಆಶ್ಚರ್ಯಪಡುತ್ತಾರೆ. ಆದರೆ ಮಾಡುವುದೇನು? ಈ ಕಲಿಯುಗದಲ್ಲೆಲ್ಲ ವಿಪರೀತವೇ; ಉಚ್ಚವು ನೀಚ ವಾಗುತ್ತದೆ; ನೀಚವು ಉಚ್ಚವಾಗುತ್ತದೆ. ಈಗ ಜನರು ಕತ್ತೆ ಕುದುರೆ ಗಳನ್ನು ಸಮನಾಗಿ ತಿಳಿಯುತ್ತಾರೆ; ದೇಶಾಭಿಮಾನವು ಅಳಿಯುತ್ತ ಬಂದಿದೆ; ಧರ್ಮಾಭಿಮಾನವು ಕಡಿಮೆಯಾಯಿತು. ದೀರ್ಘದೃಷ್ಟಿಯು ಲೋಪಹೊಂದುತ್ತಲಿದೆ; ಜನರಿಗೆ ತಮ್ಮವರಾರು? ಹೆರವರಾರು? ತಮಗೆ ಸಂಕಟಬಂದ ಸಮಯದಲ್ಲಿ ಉಪಯೋಗಕ್ಕೆ ಬರುವರಾರು? ವಿರೋಧಿ ಗಳಾಗುವರಾರು? ಈ ವಿಷಯದ ತಿಳಿವಳಿಕೆಯೇ ಇಲ್ಲ. ಎಲ್ಲರೂ ಸದ್ಯ ದಲ್ಲಿ ಸ್ವಾರ್ಥವನ್ನು ನೋಡುತ್ತಲಿದ್ದಾರೆ. ಹಿಂದಿನವರ ಅಭಿಮಾನವಿಲ್ಲ; ಮುಂದಿನವರ ಪರಿಣಾಮದ ಎಚ್ಚರಿಕೆಯಿಲ್ಲ. ಮೊದಲು ತಮ್ಮ ಪೂರ್ವ ಜರು ದೇಶಾಭಿಮಾನ, ಕುಲಾಭಿಮಾನದಿಂದ ಎಷ್ಟು ಹೋರಾಡಿದರು? ತಮ್ಮ ಹೆಂಗಸರು ಎರಡನೆಯವರ ಕಯ್ಯಲ್ಲಿ ಬೀಳಬಾರದೆಂದು ಅವರು ಎಷ್ಟು ಭಗೀರಥ ಪ್ರಯತ್ನವನ್ನು ಮಾಡಿದರು? ಸೋಲು ಬರುವ ಸಂಭ ವವು ಕಂಡ ಕೂಡಲೆ ಅವರು ತಮ್ಮ ಹೆಂಡರುಮಕ್ಕಳನ್ನು ಅಗ್ನಿನಾರಾಯ ಣನಿಗರ್ಪಿಸುತ್ತಿರಲಿಲ್ಲವೇ? ಇಂತಹ ಮಹಾನುಭಾವರ ವಂಶದವರೆನ್ನಿಸಿ ಕೊಳ್ಳುವ ಈಗಿನ ಸರದಾರರನ್ನು ನೋಡಿರಿ! ಅವರು ತಮ್ಮ ಹೆಣ್ಣುಮಕ್ಕ ಳನ್ನು ಮೊಗಲರಿಗೆ ಮದುವೆಮಾಡಿ ಕಳುಹಲಿಕ್ಕೆ ಮೇಲಾಡುತ್ತಾರೆ; ಇಷ್ಟೇ ಅಲ್ಲ; ಅವರು ತಮ್ಮ ಹೆಂಗಸರ ಪಾತಿವ್ರತ್ಯವನ್ನು ಹರಣಮಾಡುವವರ ಒಲುಮೆಯನ್ನು ಸಂಪಾದಿಸುವುದೇ ತಮ್ಮ ಜನ್ಮಸಾಫಲ್ಯವೆಂದು ಎಣಿಸುತ್ತಾರೆ. ಇವರು ಹೆಂಗಸರೇ ಅಲ್ಲವೇ? ಇವರಿಗೆ ನಾಚಿಕೆ ಹೇಗೆ ಬರುತ್ತಿರಲಿಲ್ಲ? ಇವರು ನಪುಂಸಕರೋ, ಮೀಸೆಹೊತ್ತಂತಹ ಗಂಡಸರೋ? ಇಂತು ಶ್ವಾನ ವೃತ್ತಿಯಿಂದಿರಲಿಕ್ಕೆ ಇವರ ಮನಸ್ಸು ಹೇಗೆ ಒಡಂಬಡುತ್ತದೋ ದೇವರೇ ಬಲ್ಲನು. ನಮ್ಮ ಜನರ ಸ್ವಾಭಿಮಾನವನ್ನು ಹೀರಿಕೊಳ್ಳುವಂತಹ ಆಮ್ಲೇಂ ಛನಾದ **ಅಕ್ಬರನಲ್ಲಿ** ಎಂತಹ ಅಮಾನುಷಗುಣವಿರಬಹುದು!! ಈ

ಕಾಲಕ್ಕೆ ತಾವೊಬ್ಬರು ಮಾತ್ರ ರಜಪೂತಕುಲದ ಅಭಿಮಾನವನ್ನು ಹಿಡಿದು ಕೊಂಡು ಬಡಿದಾಡುತ್ತೀರಿ. ತಾವೇ ಕುಲದೀಪಕರು. ತಮಗೆ ಜಯ ವಾಗಲೆಂದು ಪ್ರತಿದಿನವು ನಾನು ದೇವರನ್ನು ಬೇಡಿಕೊಳ್ಳುತ್ತೇನೆ; ಅದೆಂತಿರಲಿ. ಈಗ ತಾವು ಈ ಸ್ಥಳವನ್ನು ಬಿಟ್ಟು **ಸಿಂಧು** ನದೀ ತೀರಕ್ಕೆ ಹೋಗಬೇಕೆಂದು ಮಾಡಿದಾಲೋಚನೆಯು ನನ್ನ ಅಲ್ಪಮತಿಗಂತೂ ಸರಿದೋರುವುದಿಲ್ಲ. ತಾವು ಹಾಗೆ ಮಾಡಿದರೆ ಆ ಹೂಣನಿಗೆ ಹೆದರಿದಂತೆ ಆಗುವುದಿಲ್ಲವೇ? ತಮ್ಮ ಭೀಷ್ಮ ಪ್ರತಿಜ್ಞೆಯು ಸುಳ್ಳಾಗಲಿಕ್ಕಿಲ್ಲವೇ? ತನ್ನ ಕಡುಹಗೆಯು ಓಡಿಹೋದನೆಂದು ಆ ಯವನನು ಹಿಗ್ಗಲಿಕ್ಕಿಲ್ಲವೇ? ತಮ್ಮ ಪಂಥಕ್ಕೆ ಸ್ವಲ್ಪ ಕುಂದಕ ಬಂದಂತಾಗುವುದಿಲ್ಲವೇ? ತಾವು ಹೀಗೇಕೆ ಮಾಡಬೇಕು? ತಮಗೆ ಹಣವಿಲ್ಲವೆಂಬ ದುಗುಡವಿದ್ದರೆ, ಅದನ್ನು ಎಳ್ಳ ಷ್ಟಾದರೂ ಮನಸ್ಸಿನಲ್ಲಿ ತರಕೂಡದು. ಆ ವಿಷಯದಲ್ಲಿ ತಮ್ಮ ಬಡ ದಾಸನು ಸ್ವಾಮಿ ಸೇವೆಯನ್ನು ಮಾಡಲಿಕ್ಕೆ ತತ್ಪರನಾಗಿರುತ್ತಾನೆ. ನನ್ನ ಪೂರ್ವಜರು ತಮ್ಮ ಸಂಸ್ಥಾನದ ಸೇವೆಯನ್ನು, ಮಾಡಿ ಗಳಿಸಿಟ್ಟ ಹಣವು ತಮ್ಮದೇ ಆಗಿರುತ್ತದೆಂದು ಹೇಳಲಾವಶ್ಯಕವಿಲ್ಲ. ನನ್ನಲ್ಲಿರುವ ಪಿತ್ರಾರ್ಜಿ ತದ ಹಣವು ೨೫,೦೦೦ ದಂಡಾಳುಗಳಿಗೆ ೧೨ ವರುಷಗಳವರೆಗೆ ಸಾಲು ವಷ್ಟಿರುತ್ತದೆ. ಒಡೆಯರು ಅಲ್ಪನ ಕಾಣಿಕೆಯೆಂದು ಅದನ್ನು ಧಿಕ್ಕರಿಸದೆ ದಯಮಾಡಿ ಸ್ವೀಕರಿಸಿ, ಆ ರಾಜಪುತ್ರ ಹೆಂಗಸರ ಮರ್ಯಾದೆಯನ್ನು ಕದಿಯುವ ಆ ನಾಡುಗಳ್ಳನನ್ನು ಮುರಿಯಬಡಿದರೆ ತಮಗೂ, ತಮ್ಮ ಪಾದ ಸೇವಕನಿಗೂ ಪರಮ ಸಂತೋಷವಾಗುವುದು. ಹೇಗಾದರೂ ಮಾಡಿ, ಬಡವನ ಕಾಣಿಕೆಯನ್ನು ತೆಗೆದುಕೊಂಡು, ಮೊಗಲರನ್ನೋಡಿಸುವ ಎತ್ತು ಗಡೆಯನ್ನು ಮಾಡಬೇಕೇ ಹೊರತು, ಅವರಿಗೆ ಬೆನ್ನು ತೋರಿಸುವ ವಿಚಾ ರವನ್ನು ಮನಸ್ಸಿನಲ್ಲಿ ತರಕೂಡದೆಂದು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ."

**ಭಾಮುಷಹನ** ಈಧೀರೋದಾರ ವಚನಗಳನ್ನು ಕೇಳಿ **ಪ್ರತಾಪ ಸಿಂಗನ** ಸಂತೋಷ ಸಮುದ್ರವು ಉಕ್ಕೇರಿತು, ಕಣ್ಣುಗಳಲ್ಲಿ ನೀರು ತುಂಬಿತು, ಕಂಠವು ಗದ್ಗದಿತವಾಯಿತು. ಮೆಯ್ಯೆಲ್ಲ ಬೆವತಿತು, ಕೂದಲು ಗಳು ನೆಟ್ಟಗಾದವು. ವಿಚಾರಶಕ್ತಿಯು ಕುಗ್ಗಿತು. ತಾನು ನಿದ್ರಾವಸ್ಥೆ ಯಲ್ಲಿರುತ್ತೇನೋ, ಜಾಗ್ರುದವಸ್ಥೆಯಲ್ಲಿರುತ್ತೇನೋ ಎಂಬ ಸಂಶಯವು ಅವ

ನಿಗೆ ಬಂತು. ತನ್ನ ಮುಂದೆ ಕಯ್ಜೋಡಿಸಿ ಕೊಂಡಿರುವವನು **ಭಾಮುಷಹ** ನಾಗಲಿಕ್ಕಿಲ್ಲೆಂಬ ಭ್ರಮೆಯು ಅವನಲ್ಲಿ ಹುಟ್ಟಿತು. ತಾನು ಕೇಳಿದ ಶಬ್ದಗಳು ಕರ್ಣೇಂದ್ರಿಯದ ವಿಕಾರದ ಪರಿಣಾಮವಾಗಿರಬಹುದೆಂದು ಅವನಿಗೆ ಸಂದೇಹವುಂಟಾಯಿತು. ಸಾರಾಂಶವೇನಂದರೆ, ಅವನು ಕೇಳಿದುದೆಲ್ಲ ಕನಸಿನಂತೆ ಅವನಿಗೆ ತೋರಿತು.

ಬಳಿಕ ಸ್ವಲ್ಪ ಹೊತ್ತಿನ ಮೇಲೆ **ಭಾಮುಷಹ**ನ ಅಪೂರ್ವಸ್ವಾಮಿಭಕ್ತಿಯ ವಚನಗಳಿಂದ ಉಲ್ಲೋಲಕಲ್ಲೋಲವಾದ **ಪ್ರತಾಪಸಿಂಗ**ನ ಮನಸ್ಸು ಸ್ವಾಸ್ಥ್ಯವನ್ನೈದಿತು. ಆಗ ಅವನು ತನ್ನ ಸ್ಥಳದಿಂದೆದ್ದು **ಭಾಮುಷಹ**ನನ್ನು ಬಿಗಿದಪ್ಪಿಕೊಂಡು, ಅವನ ರಾಜಸೇವೆಯನ್ನೂ, ಸ್ವಕುಲಾಭಿಮಾನವನ್ನೂ, ದೇಶಾಭಿಮಾನವನ್ನೂ, ಪರಾರ್ಥಬುದ್ಧಿಯನ್ನೂ ಮತ್ತೆ ಮತ್ತೆ ಹೊಗಳಿ, ಕೊಂಡಾಡಿ! ಅವನನ್ನು ತನ್ನ ಹತ್ತಿರದಲ್ಲಿ ಕುಳ್ಳಿರಿಸಿಕೊಂಡು, ಅಂದುದೇನಂದರೆ:—“ನಾವು ಈಹೊತ್ತು ಧನ್ಯರಾದೆವು. ನಮ್ಮ ಪೂರ್ವಜರ ಪುಣ್ಯವು ಈಹೊತ್ತು ಫಲಿಸಿತು. ನೀವು ಮಾಡಿದ ಸ್ತುತಿಗೆ ನಾನು ಎಷ್ಟು ಮಾತ್ರವೂ ಪಾತ್ರನಲ್ಲವು. ನೀವು ಈ ದುರ್ಘಟ ಸಂದರ್ಭದಲ್ಲಿ ಮಾಡಿದ ಸಹಾಯವನ್ನೆಂದಿಗೂ ನಾವು ಮರೆಯಲಾರೆವು. ಹೊರಲಾರದಷ್ಟು ಉಪಕಾರವನ್ನು ನೀವು ಮಾಡಿದಂತಾಯಿತು. ಅದನ್ನು ತೀರಿಸುವದಂತೂ ಅಸಂಭವವೇ ಸರಿ. ಆದರೂ ನಾವು ನಮ್ಮ ಕಯ್ಯಿಂದಾದಷ್ಟು ಕೃತಜ್ಞತೆಯನ್ನು ತೋರಿಸುವ ಉದ್ದೇಶದಿಂದ, ತಮಗೂ, ತಮ್ಮ ವಂಶದವರಿಗೂ ೩ ಹಕ್ಕುಗಳನ್ನು ಕೊಡುತ್ತೇವೆ. ಅವು ಯಾವುವೆಂದರೆ:—(೧) ನಮ್ಮ ವಂಶದವರು ರಾಜ್ಯವಾಳುವವರೆಗೆ ನಿಮ್ಮ ವಂಶದವರೇ ಮುಖ್ಯ ಪ್ರಧಾನರಾಗಬೇಕು; (೨) ನಮ್ಮ ರಾಜ್ಯದಲ್ಲಿ ನಿಮಗೂ ನಿಮ್ಮ ವಂಶದವರಿಗೂ ಮಾತ್ರ ಅಡ್ಡಪಲ್ಲಕ್ಕಿಯಲ್ಲಿ ಕೂಡ್ರುವ ಅಧಿಕಾರವಿರಬೇಕು; (೩) ನಮ್ಮ ಬಿರುದಾವಳಿಯಲ್ಲಿ ಈ ಹೊತ್ತಿನಿಂದ “**ಭಾಮುಷಹ**ನಿಂದ ಸಹಾಯ ಹೊಂದಿದ” ಎಂಬ ಶಬ್ದಗಳನ್ನು ಸೇರಿಸಬೇಕು. ನಿಮ್ಮ ಅರಿಕೆಯನ್ನು ಮಾನ್ಯಮಾಡಿ ನಾವು ಇಲ್ಲಿಂದ ಹೋಗುವ ವಿಚಾರವನ್ನು ಬಿಟ್ಟುಬಿಟ್ಟೆವು. ತಾವು ಕೊಡಲಿಚ್ಛಿಸುವ ಹಣವನ್ನು ನಾವು ಸಾಲದಂತೆ ತೆಗೆದುಕೊಳ್ಳಲಿಕ್ಕೆ ಸಿದ್ಧರಾಗಿದ್ದೇವೆ. ಅದನ್ನು ಬಂಡಾರಕ್ಕೆ ಸೇರಿಸಿ ಹೊಸ ದಂಡಿ

ನವರನ್ನು ಇಟ್ಟುಕೊಳ್ಳಲಿಕ್ಕೆ ಷುರುಮಾಡಿರಿ. ಸಾಕಾದಷ್ಟು ದಂಡು ಕೂಡಿದ ತತ್ಕ್ಷಣವೇ ಮೊಗಲರ ಮೇಲೆ ನುಗ್ಗಿ ಹೋಗುವೆವು."

ಈ ಸಂವಾದವಾದ ಕೆಲವು ದಿವಸದಲ್ಲೇ **ಪ್ರತಾಪಸಿಂಗ**ನ ದಂಡು ಬೆಳೆಯಿತು.' ಆ ಕಾಲಕ್ಕೆ ಮೊಗಲರ ದಳವಾಯಿಯಾದ **ಷಹಬಾಜ ಖಾನ**ನು **ದವೇರ**(೧೦೧) ವೆಂಬಲ್ಲಿ ಪಾಳೆಯ ಹಾಕಿಕೊಂಡಿದ್ದನು. **ಪ್ರತಾಪಸಿಂಗ**ನು ತನ್ನ ದಂಡಿನೊಡನೆ ಅವನ ಮೇಲೆ ನುಗ್ಗಿಹೋಗಿ, ಆ ಪಾಳೆಯುವನ್ನು ಮುತ್ತಿ, ಅದರಲ್ಲಿದ್ದ ದಂಡಾಳುಗಳನ್ನು ಚೂರು ಚೂರು ಮಾಡಿದನು. **ಷಹಬಾಜಖಾನ**ನಿಗೆ ಜೀವವುಳಿಸಿಕೊಂಡು **ಉಮೇಟ**(೧೦೨) ವೆಂಬಲ್ಲಿಗೆ ಹೋಗಬೇಕಾದರೆ ಸಾಕುಸಾಕಾಯಿತು. ಬಳಿಕ **ಪ್ರತಾಪಸಿಂಗ**ನು ಗೆಲವಿನಿಂದುಬ್ಬದೆ ಅವನನ್ನು ಬೆನ್ನಟ್ಟ **ಉಮೇಟ**ಕ್ಕೆ ಹೋಗಿ ಅಲ್ಲಿದ್ದ ಮೊಗಲರ ದಂಡನ್ನೂ ಪುಡಿಪುಡಿ ಮಾಡಿಬಿಟ್ಟನು. ತರುವಾಯ ಅವನು ಹೊತ್ತುಗಳೆಯದೆ **ಕೋಮಲ್ಮೀರ**ನ್ನೂ ಮೊಗಲರು ಹಿಡಿದು ಕೊಂಡಿದ್ದ ಉಳಿದ ೩೨ ಕೋಟೆಗಳನ್ನೂ ತೆಗೆದುಕೊಂಡು ಅವುಗಳಲ್ಲಿದ್ದ ಮೊಗಲರ ದಂಡಿನವರನ್ನು ಕ್ರೂರತನದಿಂದ ಕೊಲ್ಲಿಸಿ ಬಿಟ್ಟನು. ೧೫೮೦ನೆಯ ವರ್ಷವು ಮುಗಿಯುವುದರೊಳಗೆ **ಚಿತ್ತೂರು, ಅಜಮೀರ, ಮಂಡಲಗಡ**(೧೦೩) ಈ ಮೂರು ಸ್ಥಳಗಳು ಹೊರತು ಎಲ್ಲ **ಮೇವಾಡ**ವು **ರಾಣ**ನ ಕಯ್ವಶವಾಯಿತು. ದೇವರು **ಪ್ರತಾಪಸಿಂಗ**ನ ಸದ್ಗುಣಗಳನ್ನು ಇಷ್ಟು ದಿವಸ ಪರೀಕ್ಷಿಸಿ, ಅವು ನಿಜವಾದುವೆಂದು ಮನಗಂಡು, ಅವನ ದೇಶಾಭಿಮಾನಕ್ಕೆ ಮೆಚ್ಚಿ, ಅವನ ರಾಜ್ಯವನ್ನು ಈ ಕಾಲಕ್ಕೆ ತಿರುಗಿ ಕೊಟ್ಟನೆಂದರೆ ಅತಿಶಯೋಕ್ತಿಯಾಗಲಾರದು.

**ಪ್ರತಾಪಸಿಂಗ**ನು ಅಲ್ಪ ಸಂತೋಷಿಯಾಗಿರಲಿಲ್ಲ. ತನ್ನ ರಾಜ್ಯದ ದೊಡ್ಡ ಭಾಗವು ಮತ್ತೆ ದೊರಕಿತೆಂಬ ಸಂತೋಷದಿಂದ ಅವನು ಸುಮ್ಮನೇ ಕುಳಿತುಕೊಳ್ಳಲಿಲ್ಲ. ತನ್ನ ಕುಲಾಭಿಮಾನವನ್ನು ಬಿಟ್ಟು, ಮೊಗಲರ ಪಕ್ಷವನ್ನು ಹಿಡಿದು, ದೊಡ್ಡವರ ಸೂಳೆಯಂತೆ ತನ್ನ ಬಡಿವಾರ*ವನ್ನು ಕೊಚ್ಚುತ್ತಿದ್ದ **ರಾಜಾಮಾನಸಿಂಗ**ನ ಸೊಕ್ಕನ್ನು ಮುರಿಯಬೇಕೆಂಬ ವಿಚಾರವು ಅವನ ಮನಸ್ಸಿನಲ್ಲಿ ಯಾವಾಗಲೂ ಕುದಿಯುತ್ತಿತ್ತು. ಆ ಉದ್ದೇಶದಿಂದ

* ಜಂಬ.

ಅವನು **ರಾಜಾಮಾನಸಿಂಗನ** ಸಂಸ್ಥಾನವಾದ **ಅಂಬರ**ವನ್ನೊಳನುಗ್ಗಿ ಅಲ್ಲಿ ದೊಡ್ಡ ವ್ಯಾಪಾರದ ಸ್ಥಳವಾದ **ಮಾಳಪುರ**ವನ್ನು (೧೦೪) ಸುಲಿದನು.

**ಪ್ರತಾಪಸಿಂಗನ** ಈ ಹಾವಳಿಯ ಸುದ್ದಿಯು **ಬಾದಷಹ**ನಿಗೆ ತಿಳಿಯಿತು. ಆಗ ಮತ್ತೆ ಯಾವ ಯುದ್ಧಗಳೇನೂ ಇರಲಿಲ್ಲ. **ಬಾದಷಹನ** ಮುಖ್ಯ ಮಂತ್ರಿಯಾದ **ಖಾನಖಾನ**ನು **ರಾಣನ** ಕಲಿತನದ ಕೃತ್ಯಗಳನ್ನು ಕೇಳಿ, ಅವನನ್ನು ಹೊಗಳತೊಡಗಿದನು. ಉಳಿದ ಸರದಾರರೂ ಅವನನ್ನೇ ಹಿಂಬಾಲಿಸಿದರು. **ಪ್ರತಾಪಸಿಂಗನ** ವಿಷಯದಲ್ಲಿ **ಬಾದಷಹ**ನು ಕನಿಕರಪಟ್ಟುದರಿಂದಲೂ, ಸರದಾರರೆಲ್ಲರು ಅವನಿಗೆದುರಾಗಲಿಕ್ಕೆ ಒಡಂಬಡದುದರಿಂದಲೂ, **ಸಲೀಮ**ನು **ರಾಣನ** ದಾಳಿಗಳನ್ನು ನಿಲ್ಲಿಸಲಿಕ್ಕೆ ದಂಡಿನೊಡನೆ ಕಳುಹಲ್ಪಟ್ಟನು. ಹಿಂದಿನ ಅಧ್ಯಾಯದಲ್ಲಿ ಹೇಳಿದಂತೆ* ಅವನು ದುಂದುಗಾರಿಕೆಯಲ್ಲಿ ಕಾಲ ಕಳೆದನು.

ಬಳಿಕ **ಅಕ್ಬರ ಬಾದಷಹ**ನು ಕನಿಕರದಿಂದ **ಪ್ರತಾಪಸಿಂಗ**ನನ್ನು ಹೆಚ್ಚಾಗಿ ಬಾಧಿಸಲಿಲ್ಲ. **ರಾಣನ** ಮನಸ್ಸಿನಲ್ಲಿ **ಚಿತ್ತೂರ**ನ್ನು ತಿರುಗಿ ಹಿಡಿದು ಕೊಳ್ಳಬೇಕೆಂದಿತ್ತು. ಆದರೆ ಆ ಉದ್ದೇಶವು ಸಾಧಿಸುವ ಬಗೆ ಯಾವುದು? ಮೊಗಲರ ದಂಡು ಸರ್ಪವು ಕಾದಂತೆ ಅವನನ್ನು ಕಾಯುತ್ತಿತ್ತು. ಮೊಗಲರ ಮೇಲೆ ನುಗ್ಗಿ ಹೋಗಿ, ಅವರನ್ನೆದುರಿಸುವಷ್ಟು ತ್ರಾಣವಾದರೂ **ಪ್ರತಾಪಸಿಂಗ**ನಲ್ಲಿರಲಿಲ್ಲ. ಆದುದರಿಂದವನು ಮೊಗಲರ ದಯೆಗೆ ಪಾತ್ರನಾದೆನೆಂಬ ವಿಚಾರದಿಂದಲೂ, ತನ್ನ ಮನೆತನದ ರಾಜಧಾನಿಯಾದ **ಚಿತ್ತೂರು** ದೊರೆಯಲಿಲ್ಲವೆಂಬ ದುಗುಡದಿಂದಲೂ, ದಿವಸ ದಿವಸಕ್ಕೆ ಸವೆಯುತ್ತಾ ಬಂದನು. ಅವನಿಗೆ ಹೃದ್ರೋಗವೇ ಹತ್ತಿತು. ಚಿಂತೆಯೇ ಮುಪ್ಪು ಸಂತೋಷವೇ ಯೌವನವೆಂಬ ಗಾದೆಯಂತೆ ಅವನ ಹರೆಯವೆಲ್ಲ ಹರಿದು ಹೋಯಿತು. ಬರಬರುತ್ತಾ ಅವನ ಪ್ರಕೃತಿಯು ಹೆಚ್ಚು ಕೆಡುತ್ತಾ ಬಂತು. ಅವನಿಗೆ ತಾನಿನ್ನು ಹೆಚ್ಚು ದಿವಸ ಬದುಕುವುದಿಲ್ಲವೆಂದು ಗೊತ್ತಾಯಿತು. ಆಗ ಅವನು ತನ್ನ ಎಲ್ಲ ಸರದಾರರನ್ನು ಕರಿಸಿ ಹೇಳಿದುದೇನಂದರೆ—"ಗೆಳೆಯರೇ ನಮ್ಮ ದಿವಸಗಳು ಸಮೀಪಿಸಿದುವು. ನಾವಿನ್ನು ಬಹಳ ದಿವಸ ಬದುಕುವುದಿಲ್ಲ. ಮೊಗಲರಿಗೆ ಶರಣು

* ಹಿಂದೆ ೭೯ನೆಯ ಪುಟ ನೋಡಿರಿ.

ಹೋಗುವುದಿಲ್ಲವೆಂಬ ನಮ್ಮ ಪಂಥವು ಇಂದಿನ ವರೆಗೆ ದೇವರ ದಯೆಯಿಂದ ನಡೆಯಿತು. ಅದನ್ನು ಮುಂದೆಯೂ ನಡಿಸುವುದು ನಿಮ್ಮ ಕೈಯಲ್ಲಿ ರುತ್ತದೆ. ನಾವು ಈ ಹೊತ್ತಿನ ವರೆಗೆ ಮೊಗಲರೊಡನೆ ಶರೀರಸಂಬಂಧ ವನ್ನು ಮಾಡಲಿಲ್ಲ; ಇಷ್ಟೇ ಅಲ್ಲ; ಆದರೆ ಇಂತಹ ಸಂಬಂಧವನ್ನು ಮಾಡಿದವರೊಡನೆ ಒಂದೇ ಪಙ್ತಿಯಲ್ಲಿ ಕುಳಿತು ಊಟವನ್ನೂ ಸಹ ಮಾಡ ಲಿಲ್ಲ. ಈ ಶಪಥಕ್ಕೆ ಕಟ್ಟು ಬಿದ್ದು ನಾವು ಪಟ್ಟ ದುಃಖವೂ ಅನುಭೋಗಿಸಿದ ತಾಪತ್ರಯವೂ ನಿಮ್ಮೆಲ್ಲರಿಗೆ ಗೊತ್ತೇ ಇರುತ್ತದೆ. ಮಹತ್ಕಾರ್ಯಗಳು ಅಲ್ಪಶ್ರಮಸಾಧ್ಯವಲ್ಲವೆಂಬ ನಾಣ್ಣುಡಿಯನ್ನು ನೀವೆಲ್ಲರೂ ಕೇಳಿರುತ್ತೀ ರಷ್ಟೆ; ತನ್ನ ಸ್ವಾತಂತ್ರ್ಯವನ್ನೂ ದೇಶಸ್ವಾತಂತ್ರ್ಯವನ್ನೂ ಕಾಯ್ದು ಕೊಳ್ಳುವ ಕೆಲಸವು ಮಹಾಕಾರ್ಯಗಳಲ್ಲಿ ಒಂದಾಗಿರುತ್ತದೆ ಆದ ಕಾರಣ ನಾವು ಸ್ವಾತಂತ್ರ್ಯ, ಕುಲಾಭಿಮಾನ, ದೇಶಪ್ರೀತಿಗಳ ಸಂಬಂ ಧದಿಂದ ಹೊಂದಿದ ದುಃಖಗಳಿಗೋಸುಗ ಎಳ್ಳಷ್ಟಾದರೂ ಪಶ್ಚಾತ್ತಾಪ ಪಡುವುದಿಲ್ಲ. ಆದರೆ ಒಂದು ವಿಚಾರವು ಮಾತ್ರ ನಮ್ಮನ್ನು ಬಹಳ ನೋಯಿಸುತ್ತದೆ. ಅದಾವುದೆಂದರೆ, ನಮ್ಮ ಹಿರಿಯ ಮಗನೂ ಯುವ ರಾಜನೂ ಆದ **ಉಮ್ರ**ನು ನಾವು ಮಾಡಿದ ಪಂಥವನ್ನು ಕಯ್ಕೊಳ್ಳುವಂತೆ ತೋರುವುದಿಲ್ಲ. ಅವನು ಸುಖಕ್ಕೆ ಮೆಚ್ಚಿ, ನಮ್ಮ ರಾಜ್ಯವನ್ನು ಮೊಗ ಲರಿಗೊಪ್ಪಿಸಿ, ನಮ್ಮ ಕುಲಕ್ಕೆ ಕಳಂಕತರುವನೆಂದು ತೋರುತ್ತದೆ. ಏಕಂದರೆ, ಅವನಲ್ಲಿ ದೇಶಾಭಿಮಾನ, ಸ್ವಾತಂತ್ರ್ಯ, ಪ್ರೀತಿಗಳಿಗಿಂತ ಸ್ವಸು ಖಾಭಿಲಾಷೆಯು ಹೆಚ್ಚಾಗಿರುವಂತೆ ಕಂಡು ಬಂದಿದೆ. ನಮ್ಮ ಊಹೆಗೆ ಆಧಾರವಾದುದೊಂದು ಮಾತನ್ನು ನಿಮಗೆ ಹೇಳುತ್ತೇನೆ. ಕೆಲವು ದಿವಸಗಳ ಹಿಂದೆ ನಾವೆಲ್ಲರೂ **ಪೆಶಲ**(೧೦೫) ಸರೋವರದ ತೀರದಲ್ಲಿ ಕೆಲವು ಹುಲ್ಲು ಗುಡಿಸಲುಗಳನ್ನು ಕಟ್ಟಿಕೊಂಡು ಇದ್ದೆವಷ್ಟೇ. ಆಗ ಒಂದು ದಿನ ನಮ್ಮ **ಉಮ್ರ**ನು ಗುಡಿಸಲಿನೊಳಕ್ಕೆ ಬರುವಾಗ ಅವನ ರುಮಾಲಿನ ಚುಂಗು ಸೂರಿನ ಗಳಕ್ಕೆ ಸಿಕ್ಕಿ, ತಲೆಯಿಂದ ಕೆಳಕ್ಕೆ ಬಿತ್ತು. ಆಗ ಇವನು ತನ್ನ ಸ್ಥಿತಿಯನ್ನು ವಿಚಾರಿಸದೆ ಸಿಟ್ಟಾಗಿ ಆ ಗಳುವನ್ನು ಕಿತ್ತುಹಾಕುವುದಕ್ಕೆ ಹೋದನು. ಇದರಿಂದ ಅವನಿಗೆ ತನ್ನನ್ನು ಮಳೆ ಚಳಿಗಳಿಂದ ಕಾಪಾ ಡುವ ಗುಡಿಸಲಿನ ಅಭಿಮಾನವಿಲ್ಲವೆಂತಲೂ, ಅವನು ಸುಖಕ್ಕೆ ಆಶಿಸಿ

ನಮ್ಮ ಪಂಥವನ್ನು ನಡಿಸದೆ ಮೊಗಲರ ದಾಸತ್ವವನ್ನು ಕಯ್ಕೊಳ್ಳುವ ನೆಂತಲೂ ನಾವು ಊಹಿಸುತ್ತೇವೆ.* ಆದುದರಿಂದ ನಿಮ್ಮೆಲ್ಲರಿಗೂ ನಮ್ಮದೊಂದು ಬಿನ್ನಹವುಂಟು. ಅದೇನಂದರೆ—ನಮ್ಮ ಅಥವಾ ನಮ್ಮ ವಂಶದ ವಿಷಯದಲ್ಲಿ ನಿಮಗೇನಾದರೂ ಪೂಜ್ಯಬುದ್ಧಿಯು ಇದ್ದರೆ, ನೀವು ನಮ್ಮ ಹೆಸರಿಗೆ ಕುಂದು ತರುವಂತಹ ಕೆಲಸವನ್ನು **ಉಮ್ರ**ನಿಂದ ಮಾಡಿಸಬೇಡಿರಿ. ನಾಚಿಕೆಗೆಟ್ಟ ಉಳಿದ ರಜಪೂತರಂತೆಯೇ ನಮ್ಮ **ಉಮ್ರ**ನು ಮೊಗಲರೊಡೆತನಕ್ಕೂ, ಶರೀರ ಸಂಬಂಧಕ್ಕೂ ಒಡಂಬಡದಂತೆ ನೀವು ಎಚ್ಚರಪಡಿಸಿರಿ. ನಮ್ಮ ಪ್ರಾರ್ಥನೆಗೆ ನೀವು ಕಿವಿಗೊಡುವಂತಿದ್ದರೆ, ನನ್ನ ಈ ಕಠಾರಿಯನ್ನು ಮುಟ್ಟಿ ಆಣೆಮಾಡಿರಿ. ನೀವು ಹೀಗೆ ಮಾಡಿದ ಹೊರತು ನಾನು ನಿರಾತಂಕದಿಂದ ಪ್ರಾಣ ಬಿಡಲಾರೆನು. ಸತ್ತರೂ ನನ್ನ ಆತ್ಮಕ್ಕೆ ತೃಪ್ತಿಯಿರದು."

ಮರಣೋನ್ಮುಖನಾದ **ಪ್ರತಾಪಸಿಂಗನ** ಈ ಮಾತುಗಳನ್ನು ಕೇಳಿ, ಎಲ್ಲರು ಚಕಿತರಾದರು; ಅವರ ದುಃಖವು ಉಕ್ಕೇರಿ ಬಂತು; ಪೂಜ್ಯಬುದ್ಧಿಯು ಹೆಚ್ಚಿತು; ಸ್ವಕುಲಾಭಿಮಾನವು ಬೆಳೆಯಿತು; ಮೊಗಲರ ಮೇಲೆ ಇದ್ದ ದ್ವೇಷವು ತುಂಬಿ ತುಳುಕಿತು. **ಉಮ್ರ**ನಂತೂ ಅಳತೊಡಗಿದನು. ತನ್ನ ತಂದೆಯು ಹೇಳಿದ ಮಾತಿನಿಂದ ಅವನಲ್ಲಿ ಪಶ್ಚಾತ್ತಾಪಬುದ್ಧಿಯು ಹುಟ್ಟಿತು. ಅವನು ಕಣ್ಣೀರನ್ನು ಸುರಿಸುತ್ತ ತಂದೆಯಡಿಗೆರಗಿ ತಾನು ಮೊಗಲರೊಡನೆ ಎಂದೂ ಶರೀರಸಂಬಂಧವನ್ನು ಮಾಡುವದಿಲ್ಲವೆಂತಲೂ, ಆದಷ್ಟು ಪ್ರಯತ್ನ ಮಾಡಿ ಅವರನ್ನು ಪೀಡಿಸುವೆನೆಂತಲೂ ತಂದೆಯ ಪಾದ ಮುಟ್ಟಿ ಹೇಳಿದನು.† ಎಲ್ಲ ಸರದಾರರು ತಾವು ವಿಶ್ವಪ್ರಯತ್ನ ಮಾಡಿ **ಉದಯಪುರ** ಸಂಸ್ಥಾನದ ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳುವೆವೆಂತಲೂ ಮೊಗಲರನ್ನು ಎದುರಿಸಲು ಎಂದೂ ಹಿಂಜರಿಯಲಿಕ್ಕಿಲ್ಲವೆಂತಲೂ ಆಣೆ

---

* ಕರ್ಮಧರ್ಮ ಸಂಯೋಗದಿಂದ ಪ್ರತಾಪಸಿಂಗನ ಈ ಭವಿಷ್ಯವು ೧೬೧೪ರಲ್ಲಿ ಸರಿಯಾಯಿತು. ಅವನು ಆ ವರುಷ ಜಹಂಗೀರನೊಡನೆ ಒಪ್ಪಂದವನ್ನು ಮಾಡಿಕೊಂಡನು. ಆದರೆ ಪ್ರತಾಪಸಿಂಗನ ವಂಶದವರಿಗೂ, ಮೊಗಲರಿಗೂ ಕಡೆತನಕ ಶರೀರ ಸಂಬಂಧವಾಗಲಿಲ್ಲ.

† ಪೂರ್ವಕಾಲದಲ್ಲಿ ಹೆಸರು ಪಡೆದ ಕಾರ್ಥೇಜಿನ ದಳವಾಯಿಯಾದ ಹ್ಯಾನಿಬಾಲನು ಚಿಕ್ಕವನಾಗಿದ್ದಾಗ ಅವನ ತಂದೆಯಾದ ಹ್ಯಾಮಿಲ್ಕರೆನು ಅವನಿಂದ ಇದೇ ತರದ ಆಣೆಯನ್ನು ತೆಗೆದುಕೊಂಡನು. ಚರಿತ್ರ ಸಂಗ್ರಹ ೩ನೆಯ ಭಾಗ, ೧೫೭ನೆಯ ಪುಟ ನೋಡಿರಿ.

ಯಿಟ್ಟುಕೊಂಡರು. ಬಳಿಕ ಸ್ವಲ್ಪ ಹೊತ್ತಿನ ಮೇಲೆ **ಪ್ರತಾಪಸಿಂಗನು** ಸ್ವರ್ಗಸ್ಥನಾದನು (೧೫೯೭).

ಈ **ಪ್ರತಾಪಸಿಂಗನು** ಶೌರ್ಯದ ಸಾಗರದಂತಿದ್ದನು; ದೇಶಾಭಿಮಾನ, ಕುಲಾಭಿಮಾನಗಳ ಮೂರ್ತಿಯಾಗಿದ್ದನು; ಸಾಹಸ, ಸ್ವಾವಲಂಬನಗಳ ತವರ್ಮನೆಯಾಗಿದ್ದನು. ಅವನು ಸತ್ತುದರಿಂದ **ಭರತಖಂಡ**ದ ಒಂದು ಬೆಲೆಯಿಲ್ಲದ ರತ್ನವೇ ಹೋದಂತಾಯಿತು. ಅವನು ಸತ್ತು ಅನೇಕ ವರ್ಷಗಳಾದರೂ ರಜಪೂತರು ಅವನ ಸದ್ಗುಣಗಳನ್ನು ಪ್ರತಿದಿನವೂ ನೆನೆನೆನೆದು ಈಗಲೂ ಅವನನ್ನು ಹೊಗಳುತ್ತಿರುತ್ತಾರೆ. ಅವನು ಸತ್ತರೂ ಅವನ ಚರಿತ್ರೆಯೂ, ಸದ್ಗುಣಗಳೂ ಜನರ ತುದಿನಾಲಿಗೆಯ ಮೇಲೆ ನಲಿದಾಡುತ್ತಿರುತ್ತವೆ. ಇಂತಹ ಜನರೇ ದೇಶದ ಬಲವುಳ್ಳ ಕೋಟೆಗಳೂ, ಜನಸೌಖ್ಯದ ಮೂಲ ಕಾರಣಗಳೂ, ದೇಶಾಭಿಮಾನದ ಧ್ವಜಸ್ತಂಭಗಳೂ, ಅನುಕರಣ ಮಾಡಲಿಕ್ಕೆ ಯೋಗ್ಯರೂ ಆಗಿರುತ್ತಾರೆ.

**ಪ್ರತಾಪಸಿಂಗನು** ಪರಲೋಕವನ್ನೈದಿದ ಬಳಿಕ **ಉಮ್ರ**ನು ಪಟ್ಟವೇರಿದನು. ತನ್ನ ತಂದೆಯ ಆಶೆಯನ್ನು ಪೂರ್ಣಮಾಡಬೇಕೆಂಬ ವಿಚಾರವು ಅವನ ಮನಸ್ಸಿನಲ್ಲಿ ಯಾವಾಗಲೂ ಕೊರೆಯುತ್ತಿತ್ತು. ದೈವಯೋಗದಿಂದ **ಅಕ್ಬರಬಾದಷಹ**ನೂ ದಕ್ಷಿಣದೇಶವನ್ನು ಗೆಲ್ಲುವದರಲ್ಲಿ ತೊಡಗಿದುದರಿಂದ, ಅವನನ್ನು ಹೆಚ್ಚಾಗಿ ಪೀಡಿಸಲಿಲ್ಲ. ಮುಂದೆ **ಜಹಂಗೀರ**ನು ಪಟ್ಟವೇರಿದ ಬಳಿಕ **ಮೇವಾಡ**ದ **ರಾಣ**ನನ್ನು ಜಯಿಸಬೇಕೆಂಬ ಉದ್ದೇಶದಿಂದ ದೊಡ್ಡ ದಂಡನ್ನು ಅಲ್ಲಿಗೆ ಕಳುಹಿದನು (೧೬೦೮). ಅಷ್ಟರಲ್ಲಿ **ಪ್ರತಾಪಸಿಂಗ**ನು ಮುಂಗಂಡು ಮಾತನಾಡಿದ್ದಂತೆ **ಉಮ್ರ**ನು ಸುಖಾಭಿಲಾಷಿಯಾಗಿದ್ದನು. ಮೊಗಲರ **ಬಾದಷಹ**ನಿಗೆ ಮರೆಹೊಕ್ಕು ಬಾಳಬೇಕೆಂಬ ಎಣಿಕೆಗಳು ಅವನ ಮನಸ್ಸಿನಲ್ಲಿ ಕಾಲುಹಾಕಿದ್ದುವು. ಅವನು ತನ್ನ ತಂದೆಯು ಹೇಳಿದ ಮಾತುಗಳನ್ನೂ, ಅವನ ಅಂತ್ಯಕಾಲದಲ್ಲಿ ತಾನು ಕೊಟ್ಟ ಭಾಷೆಯನ್ನೂ ಮರೆತು, ಮೊಗಲರೊಡನೆ ಒಪ್ಪಂದಮಾಡಿ ಸುಖದಿಂದಿರಬೇಕೆಂಬ ವಿಚಾರತರಂಗಗಳಿಗೆ ಎಡೆಗೊಟ್ಟನು. ಆದರೆ **ಉದಯಪುರ**ದ ಭಾಗ್ಯದಿಂದಲೋ ರಜಪೂತರ ಸುದೈವದಿಂದಲೊ, ದೇಶಾಭಿಮಾನಿಗಳ ವತ್ಸಲನಾದ ಪರಮಾತ್ಮನ ಕರುಣಾಕಟಾಕ್ಷದಿಂದಲೋ **ಪ್ರತಾಪಸಿಂಗ**ನ ಸರದಾರರು

ತಾವು ಕೊಟ್ಟ ವಚನವನ್ನು ಮರೆಯಲಿಲ್ಲ. ಇಷ್ಟೇ ಅಲ್ಲ. ಆದರೆ ಅವರು **ಉಮ್ರ**ನನ್ನು ಮೊಗಲರೊಡನೆ ಕಾದಲಿಕ್ಕೆ ಬಿಡಬೇಕೆಂದು ದೃಢನಿಶ್ಚಯವನ್ನು ಮಾಡಿದರು. ಮೊಗಲರು ದಾಳಿಯಿಟ್ಟ ಕೂಡಲೆ ಅವರೊಳಗೆ ಹೆಚ್ಚಿನವನಾದ **ಸಾಲುಂಬರ**ದ ಮುಖ್ಯಸ್ಥನು **ಉಮ್ರ**ನ ಬಳಿಗೆ ಹೋಗಿ ಅವನನ್ನು ಕೈ ಹಿಡಿದು ಸಿಂಹಾಸನದಿಂದ ಎಬ್ಬಿಸಿ, ಕುದುರೆಯ ಮೇಲೆ ಕುಳ್ಳಿರಿಸಿ, ದಂಡಿನೊಡನೆ ಕಾಳಗಕ್ಕೆ ಹೋದನು. **ದವೇರ**ದ ಕಣಿವೆಯಲ್ಲಿ ಪುನಃ ಎರಡು ದಂಡುಗಳಿಗೂ ಕಾಳಗವಾಯಿತು. ಮೊಗಲರ ದಳವಾಯಿಯಾದ **ಖಾನ್‌ಖಾನ**ನು ಸೋತನು (೧೬೦೯). ಈ ಕಾಳಗದಲ್ಲಿ **ರಾಣ**ನ ಚಿಕ್ಕಪ್ಪನಾದ **ಕಾಣ**ನು ಬಹು ಶೌರ್ಯವನ್ನು ತೋರಿಸಿದನು. ಮರುವರುಷ ರಜಪೂತರು **ರಾಮಪುರ**(೧೧೬)ವೆಂಬಲ್ಲಿ ಮೊಗಲರ ದಳವಾಯಿಯಾದ **ಅಬ್ದುಲ್‌ಖಾನ**ನನ್ನು ಮುರಿಬಡಿದರು. ಅವರ ದಂಡು ದಿಕ್ಕು ಪಾಲಾಯಿತು. ಆದರೆ **ದೂದೊ, ಸೂರಜಮಲ್ಲ, ಹರಿದಾಸ** ಮುಂತಾದ ರಜಪೂತ ಕಲಿಗಳು ಆ ಕಾಳಗದಲ್ಲಿ ಮಡಿದರು (೧೬೧೦).

ಹೀಗೆ ಪುನಃ ಪುನಃ ಸೋಲಾದುದನ್ನು ನೋಡಿ, **ಜಹಂಗೀರ ಬಾದಷಹ**ನು ಹೆದರಿ, ತೊಗರಿಕಡ್ಡಿಯಿಂದ ತೊಗರಿಯನ್ನು ಜಾಡಿಸಿ ವರವನ್ನು ಪಡೆದುಕೊಳ್ಳಬೇಕೆಂಬ ಗಾದೆಯಂತೆ, ರಜಪೂತರೊಳಗೆ ಒಡಕು ಹುಟ್ಟಿಸಿ, **ಉಮ್ರರಾಣ**ನನ್ನು ಹಣ್ಣಿಗೆ ತರಬೇಕೆಂಬ ಆಲೋಚನೆಯನ್ನು ಮಾಡಿದನು. ಅದಕ್ಕೋಸ್ಕರ ಅವನು ತನ್ನ ದರಬಾರಿನಲ್ಲಿದ್ದ **ಪ್ರತಾಪಸಿಂಗ**ನ ಮಲತಮ್ಮನಾದ **ಸುಗ್ರ**ನನ್ನು **ಚಿತ್ತೂರಿ**ನ ಅರಸನನ್ನಾಗಿ ಮಾಡಿ, ಅಲ್ಲಿ ಆವನ ಸಂರಕ್ಷಣಕ್ಕೆ ಮೊಗಲರ ದಂಡನ್ನಿಟ್ಟನು. ಮುಂದೆ ೬-೭ ವರುಷ ಈ ಮಾನಗೇಡಿಯು ಹೆಸರಿಗೆ ಮಾತ್ರ **ಚಿತ್ತೂರಿ**ನ ಅರಸನಾಗಿದ್ದನು. ಈ ಕಾಲದಲ್ಲಿ ಒಬ್ಬ ರಜಪೂತ ಸರದಾರನಾದರೂ ಅವನ ಪಕ್ಷಕ್ಕೆ ಸೇರಲಿಲ್ಲ. ತನ್ನ ಪೂರ್ವಜರು ದೇಶಾಭಿಮಾನದಿಂದ ಮಾಡಿದ ಕೃತ್ಯದ ಕುರುಹುಗಳನ್ನು ನೋಡಿ ಅವನ ಮನಸ್ಸು ರಾಜ್ಯಪದಕ್ಕೆ ಹೇಸಿತು; ಅರಸುತನವು ಬೇಸರವಾಯಿತು. ಆದುದರಿಂದ ಅವನು ತನ್ನ ಅಣ್ಣನ ಮಗನಾದ **ಉಮ್ರರಾಣ**ನನ್ನು ಕರಿಸಿ, ಅವನಿಗೆ **ಚಿತ್ತೂರ**ನ್ನು ಒಪ್ಪಿಸಿ, **ಜಹಂಗೀರ**ನ ದರಬಾರಿಗೆ ಮರಳಿ ಬಂದನು. ಆಗ **ಬಾದಷಹ**ನು

ಅವನ ಮೇಲೆ ಸಿಟ್ಟುಮಾಡಲು, **ಸುಗ್ರ**ನು ಪಶ್ಚಾತ್ತಾಪ ಪಟ್ಟು **ಬಾದಷಹ**ನ ಎದುರಿಗೇ ಕಠಾರಿಯಿಂದ ಇರಿದುಕೊಂಡು ಸತ್ತುಬಿದ್ದನು. ಈ ದೆಸೆಗೇಡಿಗೆ ಆದ ಶಿಕ್ಷೆಯು ನ್ಯಾಯವಾದುದೇ ಸರಿ. **ಪ್ರತಾಪಸಿಂಗ**ನ ಅಭಿಮಾನ ಮುಂತಾದ ಸದ್ಗುಣಗಳಿಗೆ ಮೆಚ್ಚಿ, ದೇವರು ಅವನ ಮಗನಿಗೆ ಅವನ ಪೂರ್ವಜರ ರಾಜಧಾನಿಯಾದ **ಚಿತ್ತೂರ**ನ್ನು ಕೊಡಿಸಿದನೆಂದರೂ ಸಲ್ಲುವುದು. ಈ ಕಾಲದಲ್ಲಿ **ಪ್ರತಾಪಸಿಂಗ**ನು ಜೀವಂತನಾಗಿದ್ದಿದ್ದರೆ ಅವನಿಗೆಷ್ಟು ಸಂತೋಷವಾಗಬಹುದಾಗಿತ್ತು!

---

# ೬ನೆಯ ಅಧ್ಯಾಯ

## ಅಕ್ಬರನ ರಾಜ್ಯಭಾರಕ್ರಮ

ಮೊಗಲರ ವಂಶವನ್ನು ನಿಜವಾಗಿ ನೆಲೆಗೊಳಿಸಿದವನು **ಅಕ್ಬರ**ನೇ ಸರಿ. **ಬಾಬರ**ನು ಸ್ಥಾಪಿಸಿದ ರಾಜ್ಯವು ಅವನು ಸತ್ತ ೧೦-೧೨ ವರ್ಷಗಳಲ್ಲಿಯೇ ಹೆಸರು ಹೇಳದೆ ಹೋಯಿತು. **ಬೈರಾಮ್‌ಖಾನ**ನ ಕಲಿತನದಿಂದಲೂ ರಾಜನಿಷ್ಠೆಯಿಂದಲೂ ಮತ್ತೆ ದೊರಕಿದ ರಾಜ್ಯವು ಮರಳಿ ನಾಶಹೊಂದಬಾರದೆಂಬ ವಿಚಾರವು **ಅಕ್ಬರ**ನ ಮನಸ್ಸಿನಲ್ಲಿ ಯಾವಾಗಲೂ ಸ್ಥಿರವಾಗಿ ನಿಂತಿತ್ತು.

ರಾಜ್ಯವನ್ನು ಬೆಳಿಸಲಿಕ್ಕೆ ಮುಖ್ಯ ಸಾಧನವು ಕಲಿತನವು. ರಾಜ್ಯವನ್ನು ನೆಲೆಗೊಳಿಸಲಿಕ್ಕೆ ಮುಖ್ಯ ಸಾಧನವು ಪ್ರಜಾನುರಂಜನವು. ಇವೆರಡು ಗುಣಗಳೂ **ಅಕ್ಬರ**ನಲ್ಲಿದ್ದುದರಿಂದ ಅವನ ಉದ್ದೇಶವು ಸಫಲವಾಯಿತು. ಅವನು ಪಟ್ಟವೇರಿದಾಗ ಬೇರೆ ಬೇರೆ **ಪಠಾಣ**ಜಾತಿಯ ಅರಸರು, ಉತ್ತರ ಹಿಂದುಸ್ಥಾನದ ಬೇರೆ ಬೇರೆ ಭಾಗಗಳಲ್ಲಿ ಆಳುತ್ತಿದ್ದರು. ಅವನ ರಾಜ್ಯದ ನೆರೆಯಲ್ಲಿದ್ದ ರಾಜಸ್ಥಾನದಲ್ಲಿ, ಸಣ್ಣಸಣ್ಣ ರಜಪೂತ ಅರಸರು ಆಳುತ್ತಿದ್ದರು. ಇವರೊಳಗೆ ಕೆಲವರನ್ನು ತನ್ನ ಪಕ್ಷಕ್ಕೆ ಸೇರಿಸಿಕೊಂಡ ಹೊರತು **ಅಕ್ಬರ**ನ ಉದ್ದೇಶವು ನೆರವೇರುವಂತಿರಲಿಲ್ಲ. ಅಫ

ಗಾನರು ಮೊಗಲರ ಪ್ರತಿಸ್ಪರ್ಧಿಗಳಾದುದರಿಂದ ಅವರು ತನಗೆಂದೂ ಅನುಕೂಲರಾಗಿ ನಡೆಯಲಿಕ್ಕಿಲ್ಲವೆಂದು ಅವನು ತಿಳಿದಿದ್ದನು. ಇದಲ್ಲದೆ ಮುಸಲ್ಮಾನರಲ್ಲಿ ಮೊದಲಿದ್ದ ಒಕ್ಕಟ್ಟು ಈ ಕಾಲದಲ್ಲಿ ಇಲ್ಲದಂತಾಗಿತ್ತು. ಮೊಗಲರು ಷೀಯಾಮತಕ್ಕೆ ಸೇರಿದ್ದರು. ಆದರೆ ಅಫಗಾನರು **ಸುನ್ನಿ***ಮತದವರಾಗಿದ್ದರು. ೧೬ನೆಯ ಶತಮಾನದ ಮಧ್ಯಭಾಗದಲ್ಲಿ ಈ ಎರಡು ಮತದವರಿಗೂ ಹಗೆತನವು ಬಹಳ ಬೆಳೆದಿತ್ತು. ಮತ್ತು ಇಷ್ಟು ದಿವಸ ಸ್ವತಂತ್ರವಾಗಿ ಆಳಿದ ಅಫಗಾನರು ಈಗ ತನಗೆ ಶರಣುಬಂದು ಮನಃಪೂರ್ವಕವಾಗಿ ನೆರವಾಗುವುದು ಅಸಂಭವವೆಂದು **ಅಕ್ಬರ**ನಿಗೆ ತೋರಿತು. ಆದುದರಿಂದ ಅವನು ರಜಪೂತರನ್ನೊಲಿಸಿಕೊಳ್ಳಲಿಕ್ಕೆ ಭಗೀರಥ ಪ್ರಯತ್ನ ಮಾಡಿದನು.

ಆದರೆ ಈ ಪ್ರಯತ್ನವು ಸಫಲವಾಗುವ ಬಗೆ ಹೇಗೆ? ೧೨ನೆಯ ಶತಮಾನದ ಕಡೆಯ ಭಾಗದಿಂದ ೧೬ನೆಯ ಶತಮಾನದ ಆರಂಭದವರೆಗೆ ರಜಪೂತರು ಮುಸಲ್ಮಾನರನ್ನು ಭರತಖಂಡದೊಳಗೆ ಬರಗೊಡಬಾರದೆಂದು ಹೋರಾಡಿದರು. ಆದರೆ ಅವರ ಯತ್ನಗಳೆಲ್ಲ ನಿಷ್ಫಲವಾದವು. **ಸಂಗರಾಜ**ನ ಮರಣದಿಂದ ಅವರಲ್ಲಿದ್ದ ಒಕ್ಕಟ್ಟು ಕಡಿಮೆಯಾಗಿತ್ತು; ಅವರ ದೇಶಾಭಿಮಾನವು ಅಳಿಯ ತೊಡಗಿತ್ತು. ಆದುದರಿಂದ ಅವರೊಡನೆ ಒಪ್ಪಂದವನ್ನು ಮಾಡಿ, ಅವರಿಗೆ ದೊಡ್ಡದೊಡ್ಡ ಅಧಿಕಾರಗಳನ್ನೂ, ಬೆಲೆಯುಳ್ಳ ಉಂಬಳಿಗಳನ್ನೂ ಕೊಟ್ಟು, ಅವರನ್ನು ತನ್ನ ಪಕ್ಷಕ್ಕೆ ಸೇರಿಸಿಕೊಳ್ಳುವುದು ಸಾಧ್ಯವೆಂದು **ಅಕ್ಬರ**ನು ಎಣಿಸಿದ್ದನು. ಅವರು ಶೂರರಾದುದರಿಂದ ಅವರಿಂದ ತನಗೆ ಉಪಯೋಗವಾಗುವುದೆಂದು ಅವನು ಮನಗಂಡಿದ್ದನು. ಆದರೆ ಈ ಉಪಾಯಗಳಿಂದ ರಜಪೂತರು

---

* ಮುಹಮ್ಮದ ಪೈಗಂಬರನು ಹೋದ ಬಳಿಕ ಅವನ ಶಿಷ್ಯರಲ್ಲಿ ಯಾರು ಮುಸಲ್ಮಾನರ ಮುಖ್ಯರಾಗಬೇಕೆಂಬ ವಿಷಯದಲ್ಲಿ ಬಡಿದಾಟ ಹುಟ್ಟಿತು. ಕಟ್ಟಕಡೆಗೆ (೧) ಅಬುಜೀಕರ ಸಿದ್ದಿಕಾ, (೨) ಉಮರಫರುಖಾ, (೩) ಉಸ್ಮಾನ, (೪) ಅಲ್ಲಿ, ಇವರು ಅನುಕ್ರಮವಾಗಿ ಮುಖ್ಯ ಧರ್ಮಗುರುಗಳಾಗಬೇಕೆಂದು ಗೊತ್ತಾಯಿತು. ಆದರೆ ಷಿಯಾಮತದವರು ಈ ನಿರ್ಣಯಕ್ಕೆ ಒಪ್ಪಲಿಲ್ಲ. ಕಡೆಯವನಾದ ಅಲ್ಲಿಯು ಮುಹಮ್ಮದ ಪೈಗಂಬರನ ಅಳಿಯನಾದುದರಿಂದ ಅವನೇ ಉಳಿದವರಿಗಿಂತ ಮೊದಲು ಧರ್ಮ ಗುರುವಾಗತಕ್ಕದ್ದಿತ್ತೆಂದು ಅವರು ವಾದಿಸುತ್ತಾರೆ. ಇದಲ್ಲದೆ ಅವರು ಕುರಾನಿನಿಂದ ಎಷ್ಟೋ ಭಾಗಗಳನ್ನು ಸುನ್ನಿ ಮತದವರು ಬಿಟ್ಟಿರುತ್ತಾರೆಂದು ಅವರನ್ನು ಹಳಿಯುತ್ತಾರೆ. ಸುನ್ನಿ-ಷಿಯಾಮತದವರೊಳಗೆ ಶರೀರಸಂಬಂಧವಾಗುವುದಿಲ್ಲ.

ಮೊಗಲರ ಹಿತಚಿಂತಕರಾಗುವ ಸಂಭವವಿರಲಿಲ್ಲ. ತಾನು ಅವರೊಡನೆ ಪ್ರೀತಿಯಿಂದ ನಡೆಯುವವರೆಗೆ ಅವರು ಅನುಕೂಲರಾಗಿದ್ದು, ಮುಂದೆ ಮೊಗಲರಿಗೆ ವಿರೋಧಿಗಳಾಗಬಹುದೆಂಬ ವಿಚಾರವು ಅವನಿಗೆ ತಿಳಿದಿತ್ತು. ಅವರನ್ನು ಮೊಗಲರ ವಂಶದ ಹಿತಚಿಂತಕರನ್ನು ಮಾಡಲಿಕ್ಕೆ* ಶರೀರ ಸಂಬಂಧದ ಹೊರತು ಎರಡನೆಯ ಯಾವ ಉಪಾಯವೂ ಅವನಿಗೆ ತೋಚಲಿಲ್ಲ. ಆದರೆ ಶರೀರಸಂಬಂಧಕ್ಕೆ ಅವರನ್ನು ಒಡಂಬಡಿಸುವ ಬಗೆಯಾವುದು? ಅದಕ್ಕೆ ಮತಸಂಬಂಧವಾದ ಅಡ್ಡಿಯೊಂದಿತ್ತು. ಈ ದೊಡ್ಡ ಪ್ರತಿಬಂಧವನ್ನು ಸಾಮ, ದಾನ, ಭೇದ, ದಂಡೋಪಾಯಗಳಿಂದ ದೂರ ಮಾಡಿ ಅವರೊಡನೆ ಶರೀರ ಸಂಬಂಧಮಾಡಿದುದು, **ಅಕ್ಬರ**ನ ಬುದ್ಧಿಯ ಉತ್ಕರ್ಷತೆಯನ್ನು ತೋರಿಸುವುದು.

ಈ ವಿಷಯದಲ್ಲಿ **ಅಕ್ಬರ**ನಿಗೆ ಒಂದು ಅನುಕೂಲ ಇತ್ತು. ಹಿಂದೆ **ಹುಮಾಯೂನ ಬಾದಷಹ**ನು ರಜಪೂತರಿಗೆ ಒಂದು ದೊಡ್ಡ ಉಪಕಾರ ಮಾಡಿದ್ದನು. ಅದು ಹೇಗಂದರೆ:—**ಗುಜರಾಥಿನ ಸುಲ್ತಾನ**ನಾದ **ಬಹದ್ದೂರಷಹ**ನು ೧೫೩೨ರಲ್ಲಿ **ಚಿತ್ತೂರ**ನ್ನು ಮುತ್ತಿ ಹಿಡಿದುಕೊಂಡನು. ೧೪,೦೦೦ ರಜಪೂತರು ಆ ಮುತ್ತಿಗೆಯಲ್ಲಿ ಮಡಿದರು. ಆಗ **ಸಂಗರಾಜನ** ಹೆಂಡತಿಯಾದ **ಕರ್ಣಾವತಿ** ರಾಣಿಯು ತನ್ನ **ರಾಖಿಬಂದ**ನಾದ **ಹುಮಾಯೂನ**ನ ಸಹಾಯವನ್ನು ಬೇಡಿದಳು. ಕೂಡಲೆ ಅವನು **ಬಂಗಾಲ**ದಲ್ಲಿ ತಾನು ನಡಿಸುತ್ತಿದ್ದ ಯುದ್ಧವನ್ನು ನಿಲ್ಲಿಸಿ, ಅಲ್ಲಿಗೆ ಬಂದು, **ಬಹದ್ದೂರಷಹ**ನನ್ನು ಓಡಿಸಿ, ಅವನನ್ನು ಕೂಡಿದ **ಮಾಂಡವ**ದ ಅರಸನನ್ನು ದಂಡಿಸಿ, **ಕರ್ಣಾವತಿ**ಯ ಮಗನಾದ **ವಿಕ್ರಮಜಿತ**ನನ್ನು ತಿರುಗಿ **ಚಿತ್ತೂರಿ**ನ ಗಾದಿಯ ಮೇಲೆ ಕುಳ್ಳಿರಿಸಿದನು. ಈ ಉಪಕಾರವನ್ನು ರಜಪೂತರು ಮರೆತಿರಲಿಲ್ಲ.

ರಾಜ್ಯಸೂತ್ರವನ್ನು ತನ್ನ ಕಯ್ಯಲ್ಲಿ ತೆಗೆದುಕೊಂಡ ಬಳಿಕ **ಅಕ್ಬರ**ನು ಯುಕ್ತಿಯಿಂದಲೂ, ಶಕ್ತಿಯಿಂದಲೂ, ನಯದಿಂದಲೂ, ಭಯದಿಂದಲೂ, ಬೇರೆ ಬೇರೆ ರಜಪೂತ ಅರಸರನ್ನು ಶರಣಾಗತರಾಗಿ ಮಾಡಿಕೊಂಡು, ಅವರೊಡನೆ ಶರೀರಸಂಬಂಧವನ್ನು ಮಾಡಿದನೆಂದು ಹಿಂದಿನ ಅಧ್ಯಾಯದಲ್ಲಿ

---

* ಈ ಪದ್ಧತಿಯ ಸಂಬಂಧದಿಂದ ಹಿಂದೆ ಪುಟ ೧೦೬-೧೦೭ ಅಡಿ ಟಿಪ್ಪಣಿಯನ್ನು ನೋಡಿರಿ.

ಹೇಳಿರುತ್ತೇವೆ. ಜಯಪುರದ ಅರಸುಮಗಳನ್ನೂ **ಮಾರವಾಡ**ದ ರಾಜಕನ್ನಿಕೆಯನ್ನೂ ತಾನೇ ಮದುವೆಯಾದನು. ಜಯಪುರದ ಅರಸುಮನೆತನದ ಮತ್ತೊಂದು ಹುಡುಗಿಯನ್ನು ತನ್ನ ಹಿರಿಯ ಮಗನಾದ **ಸೆಲೀಮ**ನಿಗೆ ಮದುವೆಮಾಡಿದನು. **ಚಿತ್ತೂರು, ಬುಂದಿ** ಸಂಸ್ಥಾನಗಳ ಅರಸರು ಮಾತ್ರ ಮೊಗಲರೊಡನೆ ಶರೀರ ಸಂಬಂಧಮಾಡಲಿಲ್ಲ. **ಚಿತ್ತೂರಿ**ನ ಅರಸನಾದ **ಪ್ರತಾಪಸಿಂಗ**ನು ಹಿಂದೆ ವಿವರಿಸಿದಂತೆ **ಅಕ್ಬರ**ನ ಕೂಡ ಕಲಿತನದಿಂದ ಕಾದಿದನು. **ಬುಂದಿ**ಯ ಅರಸನು ಅವನಿಗೆ ಶರಣುಬಂದರೂ, ಮೊಗಲರೊಡನೆ ಶರೀರ ಸಂಬಂಧಮಾಡಲಿಕ್ಕೆ ಒಡಂಬಡಲಿಲ್ಲ. ಉಳಿದ ಎಲ್ಲ ಅರಸರು ಮೊಗಲರ ರಾಜ್ಯದಲ್ಲಿ ದೊಡ್ಡ ದೊಡ್ಡ ಅಧಿಕಾರಗಳನ್ನು ಹೊಂದಿ ಹೆಸರು ಪಡೆದರು. ಜಯಪುರದ ಅರಸನ ಮಗನಾದ **ಭಗವಾನ್‌ದಾಸ**ನು **ಪಂಜಾಬಿ**ನ ಸುಭೇದಾರನಾಗಿದ್ದನು. **ಭಗವಾನ್‌ದಾಸ**ನ ತಮ್ಮನ ಮಗನಾದ **ರಾಜಾಮಾನಸಿಂಗ**ನು **ಕಾಬೂಲಿ**ನಿಂದ **ಒಡಿಸಾ**ದವರೆಗೆ ದಿಗ್ವಿಜಯಮಾಡಿ, **ಅಕ್ಬರ**ನ ಕೀರ್ತಿಯನ್ನು ಹೆಚ್ಚಿಸಿದನು. **ತೋಡರಮಲ್ಲರಾಜ**ನು **ಅಕ್ಬರ**ನ ಕಂದಾಯದ ಪದ್ಧತಿಯನ್ನು ಕ್ರಮಪಡಿಸಿದನು. **ಅಕ್ಬರ**ನ ಕಾಲದಲ್ಲಿದ್ದ ೧೪೫ ಮಂದಿ ಮನಸುಬ್ದಾರರ (ಸವಾರರ ಮೇಲಧಿಕಾರಿಗಳ)ಲ್ಲಿ ೫೧. ಮಂದಿ ಹಿಂದೂಜನರಾಗಿದ್ದರು. ಈ ರಜಪೂತರು ಮೊಗಲರ ಸಿಂಹಾಸನದ ಸ್ತಂಭಗಳಂತೆಯೂ, ಅವರ ರಾಜಸಭೆಯಲಂಕಾರಗಳಂತೆಯೂ ಇದ್ದರೆಂದು ಒಬ್ಬ ಮುಸಲ್ಮಾನ ಇತಿಹಾಸಕರ್ತನು ಬರೆಯುತ್ತಾನೆ.*

ಹಿಂದಿನ ಅಧ್ಯಾಯದಲ್ಲಿ ಹೇಳಿದಂತೆ **ಅಕ್ಬರ**ನು ಕಠಾರಿಯ ಗೆಳೆಯನಾಗಿದ್ದನು. ಆದರೆ ಅವನ ಬುದ್ಧಿಯು ಬಹಳ ಚುರುಕಾಗಿತ್ತು. **ಯುರೋಪ್‌ಖಂಡ**ದಲ್ಲಿ ಹೆಸರಾದ **ನೆಪೋಲಿಯನ್ ಬೊನಾಪಾರ್ಟ**ನ

---

* ಅಕ್ಬರನು ತನ್ನ ಮನೆತನದ ಹೆಣ್ಣುಮಕ್ಕಳನ್ನು ಹಿಂದೂ ಅರಸರಿಗೆ ಕೊಡುತ್ತಿದ್ದನೆಂತಲೂ ಡಿಲ್ಲಿಯ ಒಬ್ಬ ಬಾದಷಹನ ಮಗಳನ್ನು ಕರ್ನಾಟಕದ ಒಬ್ಬ ಅರಸನಿಗೆ ಕೊಟ್ಟಿತ್ತೆಂದು ಜನವಾರ್ತೆಯಿತ್ತೆಂತಲೂ ಕಟ್ರಾವೆಂಬ ಪಾದರಿಯು ತನ್ನ ಗ್ರಂಥದಲ್ಲಿ ಬರೆದಿರುತ್ತಾನೆ. ಆದರೆ ಮುಸಲ್ಮಾನ ಇತಿಹಾಸಕರ್ತರು ಈ ವಿಷಯವಾಗಿ ಏನೂ ಬರೆಯುವುದಿಲ್ಲ. ಸೆಲೀಮನು ತನ್ನ ಸ್ವಚರಿತ್ರದಲ್ಲಿ ತನ್ನ ತಾಯಿಯಾದ ಜೋಧಬಾಯಿಯ ಹೆಸರನ್ನೇ ಬರೆದಿಲ್ಲ !!

ಟಾಲ್ಬಾಯ್ಸ್ ಹ್ವೀಲರ ಸಾಹೇಬರ ಹಿಂದೂಸ್ಥಾನದ ಇತಿಹಾಸವು.

ಬುದ್ಧಿಯಷ್ಟು ಅವನ ಬುದ್ಧಿಯು ಸಂಸ್ಕೃತವಾಗದಿದ್ದರೂ ಅದು ಅಷ್ಟೇ ತೀಕ್ಷ್ಣವಾಗಿತ್ತೆನ್ನಬಹುದು. ಅವನು ಬಲು ಬೇಗನೆ ಮನುಷ್ಯರ ಪರೀಕ್ಷೆಯನ್ನು ಮಾಡುತ್ತಿದ್ದನು. ತಾನೇ ಶ್ರೇಷ್ಠನು, ತಾನೇ ಬುದ್ಧಿವಂತನು, ತಾನೆಂದುದೇ ಪೂರ್ವದಿಶೆಯೆಂಬ ವಿಚಾರಗಳು ಅವನಲ್ಲಿ ಮನೆಮಾಡಿಕೊಂಡಿರಲಿಲ್ಲ. ಸಿರಿಯು ಅವನ ಕಣ್ಣುಗಳನ್ನು ಕಳೆದಿರಲಿಲ್ಲ. ಸೇವಕರ ಸ್ತುತಿಗಳು ಅವನ ಕಿವಿಗಳನ್ನು ಕಿವುಡುಮಾಡಿರಲಿಲ್ಲ. ಧರ್ಮಾಭಿಮಾನವೂ, ವಿಷಯಾಸಕ್ತತೆಯೂ ಅವನ ವಿಚಾರಶಕ್ತಿಯನ್ನು ಮಲಿನಮಾಡಿರಲಿಲ್ಲ. ತನ್ನ ತಂದೆಯ ಕಾಲದಲ್ಲಿದ್ದಂತೆ ತನ್ನ ರಾಜ್ಯವು ಅಸ್ಥಿರವಾಗಬಾರದೆಂಬ ವಿಚಾರವು ಅವನ ಮನಸ್ಸಿನಲ್ಲಿ ಯಾವಾಗಲೂ ಬರುತ್ತಿತ್ತು. ಅವನು ಮೊಗಲರಿಗಿಂತ ಮೊದಲು ಈ ದೇಶದಲ್ಲಿ ಆಳುತ್ತಿದ್ದ ಮತ್ತು ಸುನ್ನಿ ಮತಕ್ಕೆ ಸೇರಿದ ಅಫಗಾನರು ತನಗೆ ಅನುಕೂಲರಾಗರೆಂಬುದನ್ನು ಮನಗಂಡು, ಅವರಿಗೆ ಪ್ರತೀಕಾರ ಮಾಡಲಿಕ್ಕೂ, ತನ್ನ ರಾಜ್ಯವೈಭವವನ್ನು ಬೆಳಿಸಲಿಕ್ಕೂ ತಕ್ಕವರಾದ ರಜಪೂತರನ್ನು ಒಲಿಸಿಕೊಳ್ಳಲೆಳಸಿ, ಆ ಪ್ರಯತ್ನವು ಬಹಳವಾಗಿ ಸಫಲವಾಯಿತೆಂದು ಉಬ್ಬದೆ, ರಾಜ್ಯಸ್ಥೈರ್ಯವನ್ನುಂಟುಮಾಡಲಿಕ್ಕೆ ಬಲಕ್ಕಿಂತ ಹೆಚ್ಚು ಪ್ರಬಲಕಾರಣವಾದ ಪ್ರಜಾನುರಂಜನದ ಏರ್ಪಾಡುಗಳನ್ನು ಕಯ್ಕೊಂಡನು.

ಆ ಕಾಲದಲ್ಲಿ ಮೊಗಲರ ರಾಜ್ಯಪದ್ಧತಿಯು ರಾಜಸತ್ತಾತ್ಮಕವೇ ಸರಿ. ಪ್ರಜಾಸತ್ತಾತ್ಮಕರಾಜ್ಯಪದ್ಧತಿಯು ಪಾಶ್ಚಾತ್ಯರಲ್ಲಿ ಅಂಕುರಿಸಿ ಬೆಳೆದು ದೊಡ್ಡ ಮರವಾದಂತೆ ಈ ಭರತಖಂಡದಲ್ಲಿ ಬೆಳೆಯಲಿಲ್ಲ. ೧೬ನೆಯ ಶತಮಾನದಲ್ಲಿ **ಏಷಿಯಾಖಂಡ**ದಲ್ಲೆಲ್ಲಾ ಈ ಪದ್ಧತಿಯ ಸುದ್ದಿಯೇ ಇರಲಿಲ್ಲವೆಂದು ಹೇಳಬಹುದು. ಈ ಭರತಖಂಡದಲ್ಲಂತೂ ಬಹಳ ದಿವಸದಿಂದ ಅರಸನೇ ಪ್ರಜೆಗಳ ತಂದೆತಾಯಿಯೆಂಬ ತಿಳಿವಳಿಕೆಯು ಹಬ್ಬಿರುತ್ತದೆ. ಆದುದರಿಂದ **ಅಕ್ಬರ**ನ ಕಾಲದಲ್ಲಿ ಪ್ರಜಾಸತ್ತಾತ್ಮಕ ರಾಜ್ಯಪದ್ಧತಿಯು ಜನರ ಮನಸ್ಸಿನಲ್ಲಿರಲಿಲ್ಲವೆಂದರೂ ಸಲ್ಲುವುದು.

ಆ ಕಾಲದಲ್ಲಿ ರಾಜಸ್ಥಾನದಲ್ಲಿದ್ದಂತೆ ಮೊಗಲರ ರಾಜ್ಯದಲ್ಲಿ ಜಮೀದಾರಿಯ ಪದ್ಧತಿಯು ಇರಲಿಲ್ಲ. **ಅಕ್ಬರ**ನ ರಾಜ್ಯದಲ್ಲಿ ಪ್ರಮುಖಜನರೆಂದರೆ **ಅಮೀರರು.** ಇವರು ಬಹುಶಃ **ಬಾದಷಹ**ನ ಮನೆತನಕ್ಕೆ

ಸೇರಿದವರು. ಇವರೇ ಪ್ರಾಂತಗಳ ಅಧಿಪತಿಗಳೂ, ಮಂತ್ರಿಗಳೂ, ಸುಭೇದಾರರೂ ಆಗುತ್ತಿದ್ದರು. ಇವರಿಗೆ **ಬಾದಷಹ**ನು ಕೊಟ್ಟ ಹೊಲಮನೆಗಳು ಇವರ ಜೀವಮಾನವಿರುವ ವರೆಗೆ ನಡೆಯುತ್ತಿದ್ದುವೇ ಹೊರತು, ಇವರ ಪಶ್ಚಾತ್ ನಡೆಯುತ್ತಿರಲಿಲ್ಲ. ಇವರು ತೀರಿಹೋದ ಬಳಿಕ **ಬಾದಷಹ**ನ ಮನಸ್ಸಿಗೆ ಬಂದರೆ ಇವರ ಹೆಂಡರು ಮಕ್ಕಳಿಗೆ ಜೀವನಾಂಶವು ದೊರೆಯುತ್ತಿತ್ತು. **ಬಾದಷಹ**ನು ವಂಶಪರಂಪರೆಯಾಗಿ ಬಹುಶಃ ಉಂಬಳಿ ಕೊಡುತ್ತಿರಲಿಲ್ಲ.

ಆ ಕಾಲದಲ್ಲಿ ಅರಸರು ತಿಪ್ಪಲುಗಾರರು (ಜುಲುಮೆಯಿಂದ ಆಳುವವರು). ಆದರೆ ಅವರಿಗೆ ಬುದ್ಧಿವಾದ ಹೇಳುವುದಕ್ಕೆ ಧರ್ಮೋಪದೇಶಕರು ಮಾತ್ರ ಇದ್ದರು. **ಅಕ್ಬರ ಬಾದಷಹ**ನು ಈ ಧರ್ಮೋಪದೇಶಕರ ಅಧಿಕಾರವನ್ನು ಕಡಿಮೆಮಾಡಿದರೂ, ಸರಕು ಕಟ್ಟಿದರೂ, ರಾಜ್ಯಪರಿಪಾಲನೆಯನ್ನು ಚೆನ್ನಾಗಿ ಮಾಡಿದನೆನ್ನಬಹುದು. ರಾಜ್ಯವೆಂಬ ವೃಕ್ಷದ ಮುಖ್ಯ ಶಾಖೆಗಳಾದ (೧) ನ್ಯಾಯದ ಇಲಾಖೆ, (೨) ಸೈನ್ಯದ ಇಲಾಖೆ (ಲಷ್ಕರ್ ಖಾತೆ), (೩) ಸಿವಿಲ್ ಇಲಾಖೆ (ಮುಲ್ಕಿ ಖಾತೆ)ಗಳ ವ್ಯವಸ್ಥೆಯನ್ನು ಅವನು ಹೇಗೆ ಮಾಡಿದನೆಂಬುದನ್ನು ಕೆಳಗೆ ವಿವರಿಸುತ್ತೇವೆ.

**ನ್ಯಾಯದ ಇಲಾಖೆ (ನ್ಯಾಯ ಖಾತೆ):—ಅಕ್ಬರ**ನು ಪಟ್ಟವೇರುವದಕ್ಕಿಂತ ಮೊದಲು ಹಿಂದೂಜನರ ದ್ವೇಷಿಗಳಾದ ಕಾಜಿಗಳು ನ್ಯಾಯಾಧೀಶರಾಗಿದ್ದರು. ಇವರಿಗೆ ಕುರಾನಿನ ಹೊರತು ಮತ್ತೇನೂ ಗೊತ್ತಿರಲಿಲ್ಲ. ಇವರು ಮನಸ್ಸಿಗೆ ಬಂದಂತೆ ನ್ಯಾಯದ ತೀರ್ಪು ಮಾಡುತ್ತಿದ್ದುದರಿಂದ ಜನರು ಇವರ ಎದುರಿಗೆ ಫಿರ್ಯಾದು ಮಾಡಲಿಕ್ಕೆ ಹೆದರುತ್ತಿದ್ದರು. ಇದಲ್ಲದೆ ಇವರು **ಸುನ್ನಿ** ಮತದವರಾದುದರಿಂದ **ಷಿಯಾ** ಮತದವರನ್ನು ಪರಿಪರಿಯಿಂದ ಹಿಂಸೆ ಪಡಿಸುತ್ತಿದ್ದರು. **ಅಕ್ಬ**ರನು **ಷಿಯಾ** ಮತದವನೂ, ಎಲ್ಲ ಪ್ರಜೆಗಳನ್ನು ಸರಿಯಾಗಿ ನೋಡಿಕೊಳ್ಳಬೇಕೆಂಬ ಇಚ್ಛೆಯುಳ್ಳವನೂ ಆದುದರಿಂದ ಈ ನ್ಯಾಯ ಪದ್ಧತಿಯಲ್ಲಿ ಕೆಲವು ಹೆಚ್ಚುಕಡಿಮೆಗಳನ್ನು ಮಾಡಿದನು. ಅವನು ಮತಸಂಬಂಧವಾದ ದುರಭಿಮಾನವುಳ್ಳ **ಉಲ್ಮೆ**ಯವರನ್ನು ನ್ಯಾಯಸ್ಥಾನಗಳಿಂದ

ಕಿತ್ತುಹಾಕಿ,* ಅನುಭವವುಳ್ಳ ವಿದ್ವಾಂಸರನ್ನು **ಮೀರ್-ಈ-ಅದಿಲ್ಲ**ರನ್ನು (ಮುಖ್ಯ ನ್ಯಾಯಾಧೀಶರನ್ನು) ನೇಮಿಸಿದನು; ಅವರ ಕಯ್ಕೆಳಗೆ ವಿಶೇಷ ಮತಾಭಿಮಾನವಿಲ್ಲದ ಕಾಜಿಗಳು ಕೆಲಸ ಮಾಡತಕ್ಕದ್ದೆಂದು ಗೊತ್ತು ಮಾಡಿದನು. ದೊಡ್ಡ ದೊಡ್ಡ ಊರುಗಳಲ್ಲಿ **ಕೊತವಾಲ**ರೆಂಬ ಅಧಿಕಾರಿಗಳನ್ನು ನಿಯಮಿಸಿದನು. ಊರಲ್ಲಿ ಯಾವ ತಪ್ಪುಗಳೂ ಆಗದಂತೆ ವ್ಯವಸ್ಥೆಮಾಡುವುದೇ ಇವರ ಕರ್ತವ್ಯವು.† ಸಣ್ಣ ಸಣ್ಣ ಹಳ್ಳಿಗಳಲ್ಲಿ ಗೌಡ ಕುಲಕರ್ಣೀಕರು ತಮ್ಮ ತಮ್ಮ ಹಳ್ಳಿಗಳ ಬಂದೋಬಸ್ತನ್ನು ಮಾಡುತ್ತಿದ್ದರು.

**ಲಷ್ಕರ ಖಾತೆ (ಮಿಲಿಟರಿ ಇಲಾಖೆ):—ಅಕ್ಬರನು ಬಾದಷಹ**ನಾಗುವದಕ್ಕಿಂತ ಮೊದಲು ಈ ಖಾತೆಗೆ ಸೇರಿದ ಎಲ್ಲ ಉದ್ಯೋಗಸ್ಥರಿಗೆ ಅವರವರ ಯೋಗ್ಯತೆಯಂತೆ ಭೂಮಿಗಳಿದ್ದುವು. ಅವರ ಕೆಲಸಗಳು ವಂಶಪರಂಪರೆಯಾಗಿ ಇದ್ದುವು. **ಅಕ್ಬರ**ನು ಈ ಪದ್ಧತಿಯನ್ನು ತೆಗೆದು ಹಾಕಿ ಎಲ್ಲ ದಂಡಾಳುಗಳಿಗೂ ಸಂಬಳಕೊಡತೊಡಗಿದನು. ಆದರೆ ಮೊಗಲರ ದಂಡಿನಲ್ಲಿ ವಂಶಪರಂಪರೆಯಾಗಿ ಉಂಬಳಿಯುಳ್ಳ ದಳವಾಯಿಗಳು ಕೆಲವು ಜನರು ಮಾತ್ರ ಇದ್ದರು. ಇಂತಹವರ ಉಂಬಳಿಯನ್ನು ಕಸಿದುಕೊಳ್ಳದೆ **ಬಾದಷಹ**ನು ಅವರು ತಮ್ಮ ಹುಟ್ಟುವಳಿಗೆ ಸರಿಯಾಗಿ ದಂಡನ್ನು ಇಟ್ಟಿರುತ್ತಾರೋ ಇಲ್ಲವೋ ಎಂಬುದನ್ನು ಆಗಾಗ ನೋಡುವುದಕ್ಕೆ ತಕ್ಕ ಅಧಿಕಾರಿಗಳನ್ನು ನಿಯಮಿಸಿದನು. ಈಗಿನಂತೆ, **ಅಕ್ಬರ**ನ ದಂಡಿನಲ್ಲಿ ಪಟಾಲಮುಗಳ ವಿಭಾಗವಿರಲಿಲ್ಲ; ಮತ್ತು ಒಬ್ಬನ ಕೆಳಗೆ ಮತ್ತೊಬ್ಬನಂತೆ ಅಧಿಕಾರಗಳ ವರ್ಗೀಕರಣವೂ ಇರಲಿಲ್ಲ. ದಂಡಿನ **ಅಮೀರ**ರ ತರುವಾಯ **ಮನಸಬ್ದಾರ**ರೆಂಬ ಅಧಿಕಾರಿಗಳಿದ್ದರು. ಅವರು ಬೇರೆ ಬೇರೆ ವರ್ಗಗಳಲ್ಲಿ ವಿಭಾಗಿಸಲ್ಪಟ್ಟಿದ್ದರು. ತೀರ ಕಡಿಮೆ ತರದ **ಮನಸಬ್ದಾರ**ನು ೧೦ ಮಂದಿ ರಾಹುತರ ಮೇಲೆ ಅಧಿಕಾರಿಯಾಗಿದ್ದನು. ಹೀಗೆಯೇ **ಮನಸಬ್ದಾರ**ರು ೧೦೦, ೨೦೦, ೫೦೦, ೧,೦೦೦, ೨,೦೦೦ ಮುಂತಾದ ರಾಹುತರ ಮೇಲೆ ಅಧಿಕಾರಿಗಳಾಗಿದ್ದರು, ಎಲ್ಲಕ್ಕೂ ಹೆಚ್ಚಿನ

* ಅಧಿಕಾರವನ್ನು ಕಡಿಮೆ ಮಾಡಿ.

† ಇವರ ಕರ್ತವ್ಯದ ವಿಷಯದಲ್ಲಿ ಈಯಧ್ಯಾಯದ ಕಡೆಯ ಭಾಗವನ್ನು ನೋಡಿರಿ.

ತರದ **ಮನಸಬ್ದಾರ**ರು ೧೦,೦೦೦ ರಾಹುತರ ಮೇಲಧಿಕಾರಿಗಳಾಗಿದ್ದರು. ಈ ಸ್ಥಳಗಳು ಬಹುಶಃ **ಬಾದಷಹ**ನ ಮಕ್ಕಳಿಗೇ ದೊರೆಯುತ್ತಿದ್ದುವು.* ಉಂಬಳಿಯುಳ್ಳ ದಳವಾಯಿಗಳಿಗೆ ರಾಜದ್ರೋಹಬಗೆಯಲಿಕ್ಕೆ ಅನುವು ದೊರೆಯಬಾರದೆಂದು, **ಅಕ್ಬರ**ನು ಅವರನ್ನು ತನ್ನ ಕಯ್ಕೆಳಗೆ ಇಟ್ಟು ಕೊಳ್ಳುತ್ತಿದ್ದನು. ಆ ಕಾಲದ ದಂಡಿನ ಏರ್ಪಾಡು ಈಗಿನ ಇಂಗ್ಲೀಷರ ದಂಡಿನಷ್ಟು ಸುಯಂತ್ರಿತವಾಗದಿದ್ದರೂ ಆ ಕಾಲಕ್ಕೆ ಒಳ್ಳೆಯ ವ್ಯವಸ್ಥೆಯುಳ್ಳ ದಾಗಿತ್ತೆನ್ನಲಿಕ್ಕೆ ಅಡ್ಡಿಯಿಲ್ಲ. **ಅಕ್ಬರ**ನ ದಂಡಿನಲ್ಲಿ ಆನೆಗಳು ಮುಖ್ಯ ವಾಗಿದ್ದುವು. ಮೇಲೆ ವಿವರಿಸಿದ **ಮನಸಬ್ದಾರ**ರ ಹೊರತು ಮೊಗಲರ ದಂಡಿನಲ್ಲಿ **ಅಹದಿಯರ**ರೆಂಬ ಸವಾರರಿದ್ದರು. ಅವರಿಗೆ ಒಬ್ಬೊಬ್ಬನಿಗೆ ತಿಂಗಳು ಒಂದಕ್ಕೆ ೨೦ರಿಂದ ೨೫ ರೂಪಾಯಿಗಳ ವರೆಗೆ ಸಂಬಳವು ದೊರೆಯುತ್ತಿತ್ತು. ಇದೂ ಅಲ್ಲದೆ ಬಿಲ್ಲಾಳುಗಳಿಗೆ ತಿಂಗಳಿಗೆ ೨॥ ರೂಪಾಯಿ ಸಂಬಳವೂ, ತುಬಾಕಿಯವರಿಗೆ ೬ ರೂಪಾಯಿ ಸಂಬಳವೂ ದೊರೆಯುತ್ತಿತ್ತು.

**ಅಕ್ಬರ**ನ ದಂಡು ಇಷ್ಟೇ ಇತ್ತೆಂದು ಹೇಳುವುದಕ್ಕೆ ನಮಗೆ ಆಧಾರ ವಿಲ್ಲ. **ಅಬುಲ್ಲಫಾಜಲ್ಲ**ನು ತನ್ನ ಗ್ರಂಥದಲ್ಲಿ **ಅಕ್ಬರ**ನ ರಾಜ್ಯದೊಳಗೆ ಅವನ ಅನ್ನವನ್ನುಣ್ಣುವ ಕಾಟಕರ ಸಂಖ್ಯೆಯೇ ೪೪,೦೦,೦೦೦ ಇತ್ತೆಂದು ಬರೆಯುತ್ತಾನೆ. ಆದರೆ ಇದು ಅತಿಶಯೋಕ್ತಿಯಾಗಿರಬಹುದೆಂದು ತೋ ರುತ್ತದೆ.

**ಮುಲ್ಕಿಯ ಖಾತೆ (ಸಿವಿಲ್ ಇಲಾಖೆ):—ಅಕ್ಬರ**ನು ಪಟ್ಟವೇರಿ ದಾಗ ಅವನ ತಂದೆಯ ಶತ್ರುವಾದ **ಷೇರಷಹ**ನು ಮಾಡಿದ ಕಂದಾಯದ ಕ್ರಮವು ಉತ್ತರ **ಹಿಂದೂಸ್ಥಾನ**ದಲ್ಲೆಲ್ಲ ನಡೆಯುತ್ತಿತ್ತು. ಈ ಕ್ರಮದ

---

* ಅಕ್ಬರನ ಹಿರಿಯ ಮಗನಾದ ಸಲೀಮನು ೧೦,೦೦೦ ರಾಹುತರ ಮೇಲಧಿಕಾರಿಯಾಗಿದ್ದನು; ಎರಡನೆಯ ಮಗನಾದ ಮುರಾದನು ೮,೦೦೦ ಸವಾರರ ಮೇಲಧಿಕಾರಿಯಾಗಿದ್ದನು; ಮೂರನೆಯವನಾದ ಡ್ಯಾನಿಯಲ್ಲನು ೭,೦೦೦ ರಾಹುತರ ಮೇಲಧಿಕಾರಿಯಾಗಿದ್ದನು. ಸಲೀಮನ ಮಗನು ೫,೦೦೦ ರಾಹುತರ ಮೇಲಧಿಕಾರಿಯಾಗಿದ್ದನು. ಬಾದಷಹನ ಮಕ್ಕಳ ಹೊರತು ಉಳಿದ ವರಿಗೆ ಬಹುಶಃ ೫,೦೦೦ಕ್ಕಿಂತ ಹೆಚ್ಚಿನ ಸವಾರರ ಮೇಲಧಿಕಾರವು ದೊರೆಯುತ್ತಿರಲಿಲ್ಲ. ಅಕ್ಬರನ ಕಾಲದಲ್ಲಿ ಅಮೀರರೂ ಮನಸಬ್ದಾರರೂ ಕೂಡಿ ೪೧೫ ಜನರಿದ್ದರು. ಉಳಿದ ಕಡಿಮೆಯ ತರದ ಉದ್ಯೋಗಸ್ಥರು ೧೪೦೦ ಜನರಿದ್ದರು. ೪೧೫ ಮನಸಬ್ದಾರರಲ್ಲಿ ೫೧ ಮಂದಿ ಹಿಂದೂ ಜನರಿದ್ದರು. ಮನಸಬ್ದಾರರ ಸಂಬಳವು ತಿಂಗಳೊಂದಕ್ಕೆ ೧೫೦ ರೂಪಾಯಿಯಿಂದ ೭೦೦ ರೂಪಾಯಿಗಳ ವರೆಗಿತ್ತು.

ಟಾಲ್ಬಾಯ್ಸ್ ವ್ಹೀಲರ ಸಾಹೇಬರ ಹಿಂದುಸ್ಥಾನದ ಇತಿಹಾಸವು.

ತತ್ವಗಳಾವುವೆಂದರೆ:—(೧) ಭೂಮಿಯ ಸರಿಯಾದ ಅಳತೆಯು, (೨) ಒಂದು ಬಿಘೆಯಲ್ಲಿ* ಸರಾಸರಿ ಎಷ್ಟು ಉತ್ಪತ್ತಿಯಾಗುತ್ತದೆಂಬುದನ್ನು ಗೊತ್ತು ಮಾಡುವುದು, (೩) ಈ ಉತ್ಪತ್ತಿಯಲ್ಲಿ ಸರಕಾರಕ್ಕೆ ಎಷ್ಟು ಕೊಡಬೇಕೆಂಬುದನ್ನು ಗೊತ್ತುಮಾಡುವುದು, (೪) ಹೀಗೆ ಸರಕಾರಕ್ಕೆ ಕೊಡತಕ್ಕ ಭಾಗದ ಬೆಲೆಯನ್ನು ಹಣದ ಮಾನದಿಂದ ನಿಶ್ಚಯಿಸುವುದು. **ಅಕ್ಬರ ಬಾದಷಹನು** ಈ ಕ್ರಮವನ್ನು ತೆಗೆದುಹಾಕದೆ ಇದನ್ನೇ ತಿದ್ದಲಿಕ್ಕೆ ಎತ್ತುಗಡೆ ಮಾಡಿದನು. ಭೂಮಿಯನ್ನು ಹೊಸದಾಗಿ ಅಳತೆಮಾಡಿಸಿ, ಒಂದು ಬಿಘೆಗೆ ಹತ್ತು ಸೇರು ಕಾಳನ್ನು ಸರಕಾರಕ್ಕೆ ಕೊಡಬೇಕೆಂದು ಕಟ್ಟುಮಾಡಿದನು. ಪ್ರತಿಯೊಂದು ಜಿಲ್ಲೆಯಲ್ಲಿ ಸರಕಾರದ ದೊಡ್ಡ ದೊಡ್ಡ ಹಗೇವು (ಧಾನ್ಯದ ಗುಳಿ)ಗಳಿದ್ದುವು. ಸರಕಾರದ ದನಕರುಗಳಿಗೆ ಇವುಗಳಲ್ಲಿದ್ದ ಕಾಳುಗಳೇ ಉಪಯೋಗಿಸಲ್ಪಡುತಿದ್ದುವು. ಇದಲ್ಲದೆ ಬರಗಾಲ ಬಂದರೆ ಅಥವಾ ಒಕ್ಕಲಿಗರಿಗೆ ಬೀಜಕ್ಕೆ ಕಾಳೇ ಸಿಕ್ಕದಿದ್ದರೆ ಈ ಹಗೇವುಗಳಲ್ಲಿದ್ದ ಕಾಳುಗಳನ್ನು ಕೊಡಬೇಕೆಂದು ಎಲ್ಲ ಅಧಿಕಾರಿಗಳಿಗೂ ಅಪ್ಪಣೆಯಾಗಿತ್ತು.

ಭೂಮಿಯ ಬೆಳೆಯನ್ನು ಅನುಸರಿಸಿ ಹೊಲಗಳಲ್ಲಿ ೩ ವರ್ಗಗಳು ಮಾಡಲ್ಪಟ್ಟವು. ಪ್ರತಿಯೊಂದು ವರ್ಗದ ಹೊಲದ ಸರಾಸರಿಯುತ್ಪನ್ನದ ಮಾನದಿಂದ ಆಯಾಹೊಲದ ತೆರಿಗೆಯು ಗೊತ್ತುಮಾಡಲ್ಪಟ್ಟಿತು. ಆವನಾದರೊಬ್ಬ ರೈತನು ತನ್ನ ಹೊಲದ ತೆರಿಗೆಯು ಸರಿಯಾಗಿ ಕಟ್ಟಿಲ್ಲವೆಂದು ಅರಿಕೆ ಮಾಡಿಕೊಂಡರೆ, ಅವನ ಹೊಲದ ತೆರಿಗೆಯನ್ನು ಅವನ ವೆಚ್ಚದಿಂದ ಹೊಸದಾಗಿ ಗೊತ್ತು ಮಾಡುತ್ತಿದ್ದರು; ಮುಂದೆ ಕೆಲವು ದಿವಸಗಳ ಮೇಲೆ ಸರಕಾರಕ್ಕೆ ಬರತಕ್ಕ ಕಾಳನ್ನು ಹಿಂದಿನ ೧೯ ವರುಷಗಳ ಬೆಳೆಯ ಸರಾಸರಿಯ ಮಾನದಿಂದ ಗೊತ್ತುಮಾಡಿ, ಒಕ್ಕಲಿಗರು ಕಾಳಿಗೆ ಬದಲು ಹಣವನ್ನು ಕೊಡಬೇಕೆಂದು ನಿರ್ಣಯವಾಯಿತು.

---

* ಬಂಗಾಲದಲ್ಲಿ ೧/೩ ಎಕರೆಗೆ ಬಿಘೆಯೆಂತಲೂ, ವಾಯುವ್ಯ ಪ್ರಾಂತದಲ್ಲಿ ೫/೮ ಎಕರೆಗೆ ಬಿಘೆಯೆಂತಲೂ ಅನ್ನುವರು.

**ಗೇಣಿಯೆತ್ತುವ ಕ್ರಮವು** — ಸರಕಾರದ ತೆರಿಗೆಯನ್ನೆತ್ತಲಿಕ್ಕೆ ತೊಂದರೆಯಾಗಬಾರದೆಂದು ಒಂದು ಕರೋರ* ದಾಮುಗಳುತ್ಪನ್ನವಾಗುವ ಪ್ರದೇಶಗಳು ಒಬ್ಬೊಬ್ಬ ಅಧಿಕಾರಿಯ ಕಯ್ಕೆಳಗೆ ಕೊಡಲ್ಪಟ್ಟವು. ಈ ಅಧಿಕಾರಿಗೆ ಕರೋರಿಯೆನ್ನುತ್ತಿದ್ದರು. ಇವನು ೨ ಲಕ್ಷ ದಾಮುಗಳನ್ನು ಎತ್ತಿದ ಕೂಡಲೆ ಆ ಹಣವನ್ನು ಬಂಡಾರಕ್ಕೆ ಕಳುಹಬೇಕೆಂದು ನಿಯಮವಿತ್ತು. ಮುಂದೆ ಕೆಲವು ದಿವಸಗಳ ಮೇಲೆ ಈ ವಿಭಾಗಗಳು ಜನರಿಗೆ ಸರಿಬೀಳದುದರಿಂದ ಪ್ರತಿಯೊಂದು ಹಳ್ಳಿಗೆ ಒಬ್ಬೊಬ್ಬ ಹಣವೆತ್ತುವ ಅಧಿಕಾರಿಯನ್ನು ನಿಯಮಿಸಬೇಕೆಂದು ಗೊತ್ತಾಯಿತು.



ತೋಡರ್‌ಮಲ್

* ೧ ಕರೋರ ದಾಮುಗಳೆಂದರೆ ೨೫ ಸಾವಿರ ರೂಪಾಯಿಗಳು. ೧ ರೂಪಾಯಿಗೆ ೪೦ ದಾಮುಗಳು.

**ರಾಜಾ ತೋಡರಮಲ್ಲನು** ಅಕ್ಬರನ ಮಂತ್ರಿಗಳಲ್ಲಿ ಒಬ್ಬನಾಗಿದ್ದನು. ಇವನು ಭೂಮಿಯನ್ನಳೆದು ತೆರಿಗೆಯನ್ನು ಗೊತ್ತುಮಾಡುವ ಕೆಲಸದಲ್ಲಿ ಬಹಳವಾಗಿ ನೆರವಾದನು. ಈ ಆಳಿಕೆಯಲ್ಲಿ ಒಟ್ಟು ೧೫ ಪ್ರಾಂತಗಳು ಮೊಗಲರ ರಾಜ್ಯಕ್ಕೆ ಸೇರಿದ್ದುವು. ಅವುಗಳ ಹೆಸರುಗಳನ್ನೂ, ಕಂದಾಯದ ಹಣವನ್ನೂ ಕೆಳಗೆ ಕೊಡುತ್ತೇವೆ.

| | | | |
|---|---|---|---|
| ೧ | ಅಲಹಾಬಾದು | ೫೩,೧೦,೬೬೭ | ರೂಪಾಯಿ |
| ೨ | ಆಗ್ರಾ | ೧,೩೬,೫೬,೨೫೭ | ,, |
| ೩ | ಅಯೋಧ್ಯಾ | ೫೦,೪೩,೯೫೪ | ,, |
| ೪ | ಅಜಮೀರು | ೭೧,೫೩,೪೪೯ | ,, |
| ೫ | ಗುಜರಾತು | ೧,೦೯,೨೪,೧೨೨ | ,, |
| ೬ | ಬಿಹಾರ | ೫೫,೪೭,೯೮೫ | ,, |
| ೭ | ಬಂಗಾಲ (ಒಡ್ರದೇಶ ಕೂಡಿ) | ೧,೪೯,೬೧,೪೮೨ | ,, |
| ೮ | ಡಿಲ್ಲಿ | ೧,೫೦,೪೦,೩೩೮ | ,, |
| ೯ | ಲಾಹೋರು (ಕಾಶ್ಮೀರ ಕೂಡಿ) | ೧,೩೯,೮೬,೪೬೦ | ,, |
| ೧೦ | ಮುಲ್ತಾನ (ಸಿಂಧ ಕೂಡಿ) | ೧,೧೨,೫೭,೦೪೮ | ,, |
| ೧೧ | ಮಾಳವಾ | ೬೦,೧೭,೩೭೬ | ,, |
| ೧೨ | ವರ್ಹಾಡ | ೧,೭೩,೭೬,೧೧೭ | ,, |
| ೧೩ | ಖಾನದೇಶ | ೭೫,೬೩,೨೩೭ | ,, |
| ೧೪ | ಅಹಮ್ಮದನಗರ — ಇದರಿಂದೇನೂ ಹುಟ್ಟುವಳಿಯಾಗುತ್ತಿದ್ದಿಲ್ಲ. | | |
| ೧೫ | ಕಾಬೂಲು | ೮೦,೭೧,೦೨೪ | ,, |
| | | ಒಟ್ಟು... ೧೪,೧೯,೦೯,೫೭೬* | |

* ೧೫೮೦ರಲ್ಲಿ ಕಂದಾಯದ ಮೊಬಲಗು ಇಷ್ಟು ಇತ್ತು. ಮುಂದೆ ಹದಿನಾಲ್ಕು ವರುಷಗಳ ತರುವಾಯ ಅದು ೧೬॥ ಕೋಟಿ ರೂಪಾಯಿಯಾಯಿತು. ಅಕ್ಬರನು ಸತ್ತವರುಷ ಭೂಮಿಯ ಕಂದಾಯವು ೧೭,೪೫,೦೦,೦೦೦ ರೂಪಾಯಿ ಇತ್ತು. ಒಟ್ಟು ರೈತರಿಂದ ಬಾದಷಹನಿಗೆ ೪೨ ಕೋಟಿ ರೂಪಾಯಿ ಬರುತ್ತಿತೆಂತಲೂ, ಅದರೊಳಗೆ ೧೦ ಕೋಟಿ ರೂಪಾಯಿ ದಂಡಿನ ತೆರಿಗೆಯಾಗಿತ್ತೆಂತಲೂ ಕೆಲವು ಲೇಖಗಳಿವೆ. ಮುಂದೆ ಜಹಂಗೀರನ ಕಾಲದಲ್ಲಿ ಸರಕಾರದುತ್ಪನ್ನವು ೫೦ ಕೋಟಿ ರೂಪಾಯಿಯಾಯಿತು. ಅವರಂಗಜೇಬನು ಸಾಯುವಾಗ ಮೊಗಲರ ರಾಜ್ಯದೊಟ್ಟು ವಾರ್ಷಿಕೋತ್ಪನ್ನವು ೭೭,೪೩,೮೮,೦೦೦ ರೂಪಾಯಿ ಆಗಿತ್ತು.

ಮೇಲೆ ಹೇಳಿದ ೧೫ ಪ್ರಾಂತಗಳಲ್ಲಿ ಒಬ್ಬೊಬ್ಬ ಸುಭೇದಾರನಿದ್ದನು. ಅವನು **ಬಾದಷಹ**ನ ಅಧಿಕಾರಕ್ಕೆ ಮಾತ್ರ ಒಳಗಾಗಿದ್ದನು. ಅವನ ಕಯ್ಕೆಳಗೆ ದೊಡ್ಡ ದೊಡ್ಡ ಊರುಗಳಲ್ಲಿ **ಫೌಜುದಾರ**ರೆಂಬ ಅಧಿಕಾರಿಗಳಿದ್ದರು. ಇವರ ಕೆಲಸವು ಜನರ ಜೀವವನ್ನು, ಆಸ್ತಿಗಳನ್ನು ಕಾಪಾಡುವದಲ್ಲದೆ, ಪರಚಕ್ರಗಳಿಂದುಂಟಾಗುವ ಹೆದರಿಕೆಯನ್ನು ದೂರಮಾಡುವುದಾಗಿತ್ತು. ಇವರು ಸುಭೇದಾರರ ಅಧಿಕಾರಕ್ಕೊಳಗಾಗಿದ್ದರು.

ಹಿಂದೂ ಜನರು ಅಟ್ಟಹಾಸಕ್ಕೆ ಮೆಚ್ಚುವವರೆಂದು **ಅಕ್ಬರ ಬಾದಷಹ**ನು ಅರಿತಿದ್ದನು. ಆದುದರಿಂದ ಅವನು ಕೆಲಕೆಲವು ಪ್ರಸಂಗಗಳಲ್ಲಿ ತನ್ನ ಬಲವನ್ನೂ, ಸಂಪತ್ತನ್ನೂ ಜನರಿಗೆ ತೋರಿಸಲಿಕ್ಕೆ ಹವಣಿಸುತ್ತಿದ್ದನು. ಹೊರಗೆ ಹೊರಟಾಗ ಅವನೊಡನೆ ೫ ಸಾವಿರ ಆನೆಗಳೂ, ೧೨,೦೦೦ ಸವಾರರೂ, ಭವ್ಯವಾದ ಡೇರೆಗಳೂ ಬರುತ್ತಿದ್ದವು. ಅವನದೊಂದು ಡೇರೆಯು ೨ ಎಕರೆ ಭೂಮಿಗೆ ಸಾಲುವಷ್ಟಿತ್ತು.

**ಅಕ್ಬರ**ನು ನಾಲ್ಕು ವರ್ಗದ ಜನರಿಗೆ ಸರಕಾರದಿಂದ ಹಣದ ಸಹಾಯವು ದೊರೆಯಬೇಕೆಂದು ಕಟ್ಟುಮಾಡಿದ್ದನು. ಈ ವರ್ಗಗಳಾವುವೆಂದರೆ—(೧) ವಿದ್ಯಾಭ್ಯಾಸ ಮಾಡುವ ಪಂಡಿತರು; (೨) ಯತಿಗಳೂ, ಬೈರಾಗಿಗಳೂ; (೩) ಅಶಕ್ತರೂ, ಬಡವರೂ; (೪) ತಮ್ಮದೇನೂ ತಪ್ಪಿಲ್ಲದೆ ಬಡವರಾದ ದೊಡ್ಡ ಮನೆತನದ ಜನರು.

**ಅಕ್ಬರ ಬಾದಷಹ**ನು ತನ್ನ ಎಲ್ಲ ಪ್ರಜೆಗಳನ್ನು ಸರಿಯಾಗಿ ನೋಡಿಕೊಳ್ಳಬೇಕೆಂದು ನಿಶ್ಚಯಿಸಿದನು. ತಾನು **ಬಾದಷಹ**ನಾದುದರಿಂದ ತನ್ನ ಧರ್ಮವೇ ಸರಿಯಾದುದೆಂದು ಎಲ್ಲರೂ ಒಡಂಬಡಬೇಕೆಂಬ ದುರಭಿಮಾನವು ಅವನಲ್ಲಿರಲಿಲ್ಲ. ಹಿಂದೂಜನರು ಗೆಲ್ಲಲ್ಪಟ್ಟುದರಿಂದ ಅವರನ್ನು ಗುಲಾಮರಂತೆ ಕಾಣಬೇಕೆಂಬ ಬಯಕೆಗೆ ಅವನು ಎಡೆಗೊಡಲಿಲ್ಲ. **ಯುಜಬೆಕ್ಕ**ರೂ, **ಮೊಗಲ**ರೂ, **ಅಫಗಾನ**ರೂ ಹಿಂದೂ ಜನರನ್ನು ಗೆದ್ದುದರಿಂದ ಅವರು ಹಿಂದೂ ಜನರನ್ನು ತಮ್ಮ ಮನಸ್ಸಿಗೆ ಬಂದಂತೆ ಕಾಣುತ್ತಿದ್ದುದು ಅವನಿಗೆ ಸರಿದೋರಲಿಲ್ಲ. ಆದಕಾರಣ ಅವನು ಸೋತವರ ಹೆಂಡರುಮಕ್ಕಳನ್ನು ದಾಸರನ್ನು ಮಾಡುವ ಹಳೆಯ ಪದ್ಧತಿಯನ್ನು ನಿಲ್ಲಿಸಿಬಿಟ್ಟನು (೧೫೬೩).

ಮರುವರ್ಷ **ಅಫಗಾನ್** ಅರಸರು ಹಿಂದೂಯಾತ್ರಿಕರಿಂದ ತೆಗೆದು ಕೊಳ್ಳುತ್ತಿದ್ದ ತೆರಿಗೆಯನ್ನು ಬಿಟ್ಟುಕೊಟ್ಟನು. ಇದಲ್ಲದೆ ಮುಸಲ್ಮಾನರಲ್ಲದವರಿಂದ ನೂರಾರು ವರ್ಷಗಳಿಂದ ತೆಗೆದುಕೊಳ್ಳುತ್ತಿದ್ದ **ಜಿಜಿಯಾ** ಯೆಂಬ ಮಂಡೆದೆರಿಗೆಯನ್ನು ಬಿಟ್ಟುಕೊಟ್ಟನು (೧೫೬೭). ಆವಾಗಲೂ ಅವನು ಒಂದು ಮತದವರು ಮತ್ತೊಂದು ಮತದವರ ತತ್ವಗಳು ತಪ್ಪಾಗಿ ರುತ್ತವೆನ್ನಲಿಕ್ಕೆ ಆಧಾರವೇನೆಂದೆನ್ನುತ್ತಿದ್ದನು.

**ಅಕ್ಬರಬಾದಷಹ**ನು ಹಿಂದೂಜನರ ಮೇಲಿದ್ದ ತೆರಿಗೆಯ ಹೊರೆ ಯನ್ನಿಳಿಸಿದುದು ಮಾತ್ರವೇ ಅಲ್ಲ; ಆದರೆ ಅವರ ಧರ್ಮವನ್ನು ಕೆಡಿಸಲಿಕ್ಕೆ ಯತ್ನಿಸದೆ* ಹಿಂದೂಜನರಲ್ಲಿಯೂ, ಮುಸಲ್ಮಾನರಲ್ಲಿಯೂ ಕೆಲವು ತಿದ್ದು ಪಾಟುಗಳನ್ನು ಮಾಡಲಿಕ್ಕೆ ಹವಣಿಸಿದನು. ಈ ಉದ್ದೇಶದಿಂದ ವಿಧ ವೆಗಳು ಪುನರ್ವಿವಾಹಮಾಡಿಕೊಳ್ಳಲಿಕ್ಕೆ ಅಡ್ಡಿಯಿಲ್ಲವೆಂತಲೂ, ಮಕ್ಕಳು ಹರೆಯಕ್ಕೆ ಬಂದ ಬಳಿಕ ಅವರಿಗೆ ಮದುವೆಮಾಡಬಹುದೆಂತಲೂ,† ಪಶು ಗಳನ್ನು, ವಿಶೇಷವಾಗಿ ಆಕಳುಗಳನ್ನು ಕೊಲ್ಲಬಾರದೆಂತಲೂ ಕಟ್ಟುಮಾ ಡಿದನು. ಸಾಧಾರಣವಾಗಿ ಜನರು ಉಪವಾಸ, ವನವಾಸ, ಜಪತಪ, ತೀರ್ಥಯಾತ್ರೆಗಳನ್ನು ಡಂಭಾಚಾರಕ್ಕೆ ಮಾಡುತ್ತಿರುವುದರಿಂದ ಅಂತಹ ವರನ್ನು ಕಂಡರೆ ಅವನಿಗೆ ಆಗುತ್ತಿರಲಿಲ್ಲ. ಅವನು ಮುಸಲ್ಮಾನರೊಳಗೆ ೧೨ ವರ್ಷಗಳಾದ ಬಳಿಕ ಸುಂತಿ (ಮುಂಜಿ)ಯನ್ನು ಮಾಡಬೇಕೆಂತಲೂ, ಹಂದಿ, ಸಾಯಿಗಳ ಮಾಂಸವು ನಿಷಿದ್ಧವಲ್ಲೆಂತಲೂ, ಮದ್ಯವನ್ನು ಮಿತಿ ಯಿಂದ ತೆಗೆದುಕೊಳ್ಳಲಿಕ್ಕೆ ಅಡ್ಡಿಯಿರಬಾರದೆಂತಲೂ, ಬಹುಜನ ಹೆಂಡಂ ದಿರನ್ನು ಮದುವೆ ಮಾಡಿಕೊಳ್ಳುವುದು ಸರಿಯಲ್ಲವೆಂತಲೂ ನಿರ್ಣಯಿಸಿ ದನು. ಹೆಚ್ಚು ಉಷ್ಣತೆಯುಳ್ಳ ಈ ದೇಶದಲ್ಲಿ ಗಡ್ಡವನ್ನಿಡುವುದರಿಂದ ಆರೋಗ್ಯಕ್ಕೆ ಕೊರತೆಯುಂಟಾಗುವುದೆಂದೆಣಿಸಿ, ಅವನು ಎಲ್ಲ ಮುಸಲ್ಮಾ

---

* ಒಮ್ಮೆ ರಾಜತೋಡರಮಲ್ಲನು ಬಾದಷಹನೊಡನೆ ಪಂಜಾಬಿಗೆ ಹೋದಾಗ ತನ್ನ ದೇವರನ್ನು ಮರೆತು ಹೋಗಿದ್ದನು. ಆದುದರಿಂದವನು ಎಷ್ಟೋ ದಿವಸಗಳವರೆಗೆ ಉಪವಾಸವಿರಬೇಕಾಯಿತು. ಆಗ ಬಾದಷಹನು ಅವನನ್ನು ಪರಿಪರಿಯಿಂದ ಸಮಾಧಾನಗೊಳಿಸಿದನು.

† ಹುಡುಗರು ೧೬ ವರ್ಷ ತುಂಬಿದ ಬಳಿಕ ಮತ್ತು ಹುಡುಗಿಯರು ೧೪ ವರ್ಷದವರಾದ ಬಳಿಕ ಮದುವೆಗೆ ಯೋಗ್ಯರೆಂದು ಬಾದಷಹನು ನಿಯಮಮಾಡಿದ್ದನು.

ನರು ಗಡ್ಡವನ್ನು ತೆಗಿಸಬೇಕೆಂದು ಅಪ್ಪಣೆ ಮಾಡಿದನು (೧೫೮೨). ಇದರಿಂದ ಮುಸಲ್ಮಾನರು ಬಹಳ ನೊಂದುಕೊಂಡರು.

**ಅಕ್ಬರಬಾದಷಹ**ನು ಹಿಂದೂಜನರಲ್ಲಿ ನಡೆಯುತ್ತಿದ್ದ ಸತೀ ಪದ್ಧತಿಯನ್ನು ನಿಲ್ಲಿಸುವುದಕ್ಕೆ ತನ್ನಿಂದ ಸಾಧ್ಯವಾದಷ್ಟು ಪ್ರಯತ್ನ ಮಾಡಿದನು. ಈ ಪದ್ಧತಿಯು ರಜಪೂತರಲ್ಲಿ ವಿಶೇಷವಾಗಿತ್ತು. ಇದನ್ನು ಒಮ್ಮೆಯೇ ನಿಲ್ಲಿಸಹೋದರೆ ಭಯಂಕರಪರಿಣಾಮವಾಗಬಹುದೆಂಬ ವಿಚಾರದಿಂದ ಅವನು ಸತಿಯಾಗಲಿಕ್ಕೆ ಇಚ್ಛೆಯಿಲ್ಲದ ಹೆಂಗಸರನ್ನು ಒತ್ತಾಯಮಾಡಬಾರದೆಂದು ಕಟ್ಟುಮಾಡಿದನು. ಅವನು ಒಂದು ದಿನ **ಅಜಮೀರ**ದಲ್ಲಿರುವಾಗ, **ಅಂಬರ**ದ **ರಾಜಾಬಿಹಾರಿಮಲ್ಲ**ನ ಮಗ ನಾದ **ಜಯಮಲ್ಲ**ನು **ಚೌಸಾ** ಎಂಬಲ್ಲಿ ಸತ್ತನೆಂದು ವರ್ತಮಾನ ಬಂತು. ಈ **ಜಯಮಲ್ಲ**ನು **ಜೋಧಪುರ**ದ ಅರಸನಾದ **ಉದಯ ಸಿಂಗ**ನ ಮಗಳನ್ನು ಮದುವೆಯಾಗಿದ್ದನು. ಆಕೆಗೆ ಸಹಗಮನಮಾಡ ಬೇಕೆಂಬ ಇಷ್ಟವಿರಲಿಲ್ಲ. ಆದರೆ ಆಪ್ತರೂ, ಇಷ್ಟರೂ, ಪುರೋಹಿತರೂ ಆಕೆಗೆ ಒತ್ತಾಯ ಮಾಡುತ್ತಿದ್ದರು. ಈ ವರ್ತಮಾನವು ಬಂದ ಕೂಡಲೆ **ಬಾದಷಹ**ನು ತಾನೇ **ಅಂಬರಿ**ಗೆ ಹೋಗಿ, ಚಿತಿಯಲ್ಲಿ ಬೀಳುವುದರಲ್ಲಿದ್ದ ಆಕೆಯನ್ನು ಉಳಿಸಿದನು.

**ಅಕ್ಬರ**ನು ಸಿಂಹಾಸನದ ಮೇಲೆ ಬಹುಶಃ ಕುಳಿತುಕೊಳ್ಳುತ್ತಿರಲಿಲ್ಲ. ತಾನು ಈ ಜಗತ್ತಿನಲ್ಲಿ ಸರ್ವಶಕ್ತಿವಂತನಾದ **ದೇವರ** ಪ್ರತಿನಿಧಿಯೆಂದೆ ಣಿಸಿ, **ದೇವರಿ**ಗೆ ಸಿಂಹಾಸನವನ್ನು ಬಿಟ್ಟು ತಾನು ಅದರ ಪಕ್ಕದಲ್ಲಿ ನಿಂತು ಕೆಲಸ ನಡಿಸುತ್ತಿದ್ದನು. ತಾನಿದ್ದ ಊರಿನ ನ್ಯಾಯವಿಚಾರಣೆಯನ್ನು ತಾನೇ ಮಾಡುತ್ತಿದ್ದನು. ತನ್ನ ಒಪ್ಪಿಗೆಯು ಹೊರತು ಮರಣ ಶಿಕ್ಷೆಯನ್ನು ಯಾರಿಗೂ ಕೊಡಬಾರದೆಂದು ತನ್ನ ರಾಜ್ಯದೊಳಗಿನ ಎಲ್ಲ ನ್ಯಾಯಾಧೀಶ ರಿಗೆ ಅಪ್ಪಣೆಯನ್ನು ಕೊಟ್ಟಿದ್ದನು. ಆ ಕಾಲದಲ್ಲಿ ಕಳ್ಳರ ಕಯ್ಗಳನ್ನು ಕಡಿಸುವ ಪದ್ಧತಿಯೂ, ಕೊಲೆಗಡಕಪಾಣ್ಯರಿಗೆ ಮರಣಶಿಕ್ಷೆಯನ್ನು ಕೊಡುವ ಪದ್ಧತಿಯೂ ಹಬ್ಬಿದ್ದುವು. **ಅಕ್ಬರ**ನು ಪ್ರತಿ ದಿನವು **ಜರೋಖಾ** ಎಂಬ ಕಿಟಕಿಯಲ್ಲಿ ಕೆಲವು ಹೊತ್ತು ನಿಂತು ಸಾಧಾರಣ ಜನರಿಗೆ ಕಾಣಿಸಿ ಕೊಳ್ಳುತ್ತಿದ್ದನು.

**ಟಾಲ್ಬಾಯ್ಸ್ ಹ್ವೀಲರ್** ಸಾಹೇಬರು ತಮ್ಮ ಇತಿಹಾಸದಲ್ಲಿ **ಅಶೋಕ, ಅಕ್ಬರ**ರ ಆಳಿಕೆಗಳಲ್ಲಿ ಬಹಳ ಸಾಮ್ಯತೆಯಿತ್ತೆಂದು ಬರೆಯುತ್ತಾರೆ. ಅದು ಹೇಗೆಂದರೆ:—"ಅವರಿಬ್ಬರೂ ಎಷ್ಟೋ ವರುಷಗಳವರೆಗೆ ಹೊಸ ನಾಡನ್ನು ಗೆಲ್ಲುವುದರಲ್ಲಿ ತೊಡಗಿದ್ದರು; **ಅಶೋಕ**ನು ತನ್ನ ಮತಕ್ಕೆ ಸೇರದವರನ್ನು ಹಿಂಸೆಪಡಿಸುತ್ತಿರಲಿಲ್ಲ; **ಅಕ್ಬರ**ನೂ ಹಾಗೆ ಮಾಡಿದನು; **ಅಶೋಕ**ನು ಧರ್ಮೋಪದೇಶಕರಿಗೆ ವಿರುದ್ಧನಾಗಿದ್ದನು; **ಅಕ್ಬರ**ನೂ ಉಲ್ಮೆಯುವರ ಸೊಕ್ಕುಮುರಿದನು; **ಅಶೋಕ**ನು ತನ್ನ ಹೊಸ ಧರ್ಮವನ್ನು ಜನರಿಗೆ ಉಪದೇಶಿಸಿದನು; **ಅಕ್ಬರ**ನೂ ಹಾಗೇ ಮಾಡಿದನು; **ಅಶೋಕ**ನು ಮಾಂಸವನ್ನು ಮುಟ್ಟುತ್ತಿರಲಿಲ್ಲ; **ಅಕ್ಬರ**ನೂ ಮಾಂಸವನ್ನು ತಿನ್ನುತ್ತಿರಲಿಲ್ಲ; ಕಟ್ಟಕಡೆಗೆ **ಅಶೋಕ**ನು **ಬುದ್ಧ, ಧರ್ಮಶಾಸ್ತ್ರ, ಧರ್ಮಸಭೆ**ಗಳು ಮುಖ್ಯವಾದುವುಗಳೆಂದು ಎಣಿಸಿದ್ದನು; "**ಅಕ್ಬರ**ನೂ **ದೇವರು** ಒಬ್ಬನೇ ಇರುತ್ತಾನೆ, ಮತ್ತು **ಮಹಮ್ಮದ**ನು ಅವನ ಭವಿಷ್ಯವಾದಿಯು" ಎಂದು ಸಂಪೂರ್ಣವಾಗಿ ನಂಬಿದ್ದನು.

**ಅಕ್ಬರ**ನು ತನ್ನ ಕಯ್ಕೆಳಗಿನ ಅಧಿಕಾರಿಗಳಿಗೆ ಒಂದು ಒಟ್ಟು ಹುಕುಮನ್ನು ಕೊಟ್ಟಿದ್ದನು. ಅದರಲ್ಲಿ ಅವನ ದೀರ್ಘದೃಷ್ಟಿಯೂ ವಿಶಾಲಬುದ್ಧಿಯೂ ವ್ಯಕ್ತವಾಗುತ್ತಿರುವುದರಿಂದ ಅದರ ತಾತ್ಪರ್ಯವನ್ನು ಕೊಟ್ಟು, ಈ ಅಧ್ಯಾಯವನ್ನು ಮುಗಿಸುತ್ತೇವೆ.

(೧) "ನಿಮ್ಮೊಳಗೆ ಪ್ರತಿಯೊಬ್ಬನೂ **ದೇವರು** ಮೆಚ್ಚುವಂತೆ ನಡೆಯಬೇಕು; ಮತ್ತು ನಿಮ್ಮ ನಿಮ್ಮ ಕೆಲಸವನ್ನು ಪೂರ್ಣ ನಿಷ್ಪಕ್ಷಪಾತದಿಂದ ಜರುಗಿಸಬೇಕು.

(೨) ನೀವು ದರಬೇಸಿಗಳಂತೆ ಸಮಾಜದಿಂದ ದೂರವಾಗಿರಬಾರದು; ಮತ್ತು ತುಚ್ಛಜನರಂತೆ ಸಿಕ್ಕಿದವರೊಡನೆ ಜೊತೆಗೂಡಿ ಸಣ್ಣ ಪುಟ್ಟ ಕೆಲಸಗಳಲ್ಲಿ ಕೈ ಹಾಕಬಾರದು; ಜನರಿಂದ ಸ್ವಲ್ಪ ದೂರವಾಗಿದ್ದು ಅವರೊಳಗೆ ಕೂಡಿಕೊಂಡು ಇರುವುದೇ ಉತ್ತಮವಾದ ಮಾರ್ಗವು.

(೩) ನೀವು **ದೇವರ**ಲ್ಲಿ ಭಕ್ತಿಯನ್ನಿಟ್ಟು ತ್ರಿಕಾಲದಲ್ಲಿಯೂ ಆತನನ್ನು ಪೂಜಿಸಬೇಕು.

(೪) ಸರಕಾರದ ಕೆಲಸವಿಲ್ಲದಾಗ ಪ್ರಸಿದ್ಧಕವಿಗಳು ಬರೆದ ಗ್ರಂಥಗಳನ್ನೂ, ನೀತಿಯ ಪುಸ್ತಕಗಳನ್ನೂ, ಮನಸ್ಸಿಟ್ಟು ಓದಿ, ನಿಜವಾದ **ದೇವರನ್ನು** ಭಜಿಸಿ, ಪಕ್ಷಪಾತವಿಲ್ಲದೆ ಎಲ್ಲರನ್ನು ಸರಿಯಾಗಿ ನೋಡಿಕೊಳ್ಳಬೇಕು.

(೫) ನೀವು ಸತ್ಪಾತ್ರರನ್ನು ನೋಡಿ ನಿಮ್ಮ ಶಕ್ತ್ಯನುಸಾರವಾಗಿ ದಾನಮಾಡಿರಿ.

(೬) ನೀವು ಅಸಂತುಷ್ಟರಾದ ಜನರನ್ನು ಅವರ ಯೋಗ್ಯತೆಗೆ ಸರಿಯಾದ ದಂಡನೆಯಿಂದಲೂ, ಸ್ವಲ್ಪ ಪ್ರೀತಿಯಿಂದಲೂ ಹಾದಿಗೆ ತರತಕ್ಕದ್ದು. ಬುದ್ಧಿವಾದದಿಂದ ಅವರು ಹಾದಿಗೆ ಬಾರದಂತಿದ್ದರೆ ಅವರನ್ನು ಹೊಡಿಸಬಹುದು, ಅಥವಾ ಸೆರೆಯಲ್ಲಿಡಬಹುದು, ಅಥವಾ ಕೊಲ್ಲಿಸಬಹುದು; ಆದರೆ ಅಧಿಕಾರಿಗಳು ಮರಣಶಿಕ್ಷೆಕೊಡುವುದಕ್ಕೆ ಮೊದಲು ಬಹಳ ವಿಚಾರಮಾಡತಕ್ಕದ್ದು. ಏಕೆಂದರೆ ಕೊಲ್ಲಿಸಿದ ಮನುಷ್ಯನ ಜೀವವು ತಿರುಗಿ ಬರಲಾರದು. ಮರಣಶಿಕ್ಷೆಗೆ ಪಾತ್ರರಾದವರನ್ನು ದರ್ಬಾರಿಗೆ ಕಳುಹುವುದೇ ಒಳ್ಳೆಯ ಉಪಾಯವು. ಆದರೆ ಅಂತಹವರನ್ನು ಕಳುಹಲಿಕ್ಕೆ ಅನುಕೂಲತೆ ಇಲ್ಲದಿದ್ದರೆ ಅಥವಾ ಕಳುಹಿದರೆ ಬಂಡಾಯವಾಗುವ ಸಂಭವವಿದ್ದರೆ ಅವರನ್ನು ಅಲ್ಲೇ ಗಲ್ಲಿಗೆ ಹಾಕಿಸಬಹುದು. ಇಂತಹ ಸಂದರ್ಭದಲ್ಲಿಯಾದರೂ ಅವರ ಅವಯವಗಳನ್ನು ಕಡಿಸುವದು ಸರಿಯಲ್ಲ.

(೭) ನೀವು ಜ್ಞಾನಸಂಪನ್ನರಿಗೂ, ಧರ್ಮಪರರಿಗೂ, ಸನ್ಮಾನ ಮಾಡಿರಿ. ಅವರಲ್ಲಿ ಏನಾದರೂ ದೋಷವು ಕಂಡುಬಂದರೆ, ಅದನ್ನು ಗುಪ್ತರೀತಿಯಿಂದ ಅವರಿಗೆ ತಿಳುಹಿಸಿರಿ. ನಿಮ್ಮ ತಿಳಿವಳಿಕೆಯು ತಪ್ಪಾಗುವ ಸಂಭವವಿರುವುದರಿಂದ ಸಿಟ್ಟುಮಾಡಿ ಅವರನ್ನು ಹೀಯಾಳಿಸಬೇಡಿರಿ. ದಿಟವಾಡುವವರನ್ನು ಮನ್ನಿಸಿರಿ; ಏಕೆಂದರೆ ಅಂತಹ ಜನರು ಬಹಳ ಅಪೂರ್ವ. ಈ ಜಗತ್ತಿನಲ್ಲಿ ಕೆಟ್ಟ ಜನರೇ ವಿಶೇಷ; ಅವರು ಒಳ್ಳೆಯ ಜನರನ್ನು ಕುರಿತು ನಿಮಗೆ ಏನಾದರೂ ಸುಳ್ಳು ಹೇಳಬಹುದು. ಒಳ್ಳೆಯ ಜನರು ಕೆಟ್ಟ ಜನರನ್ನಾದರೂ ನೋಯಿಸಲಿಕ್ಕೆ ಹಿಂದೆ ಮುಂದೆ ನೋಡುತ್ತಾರೆ. ಇಂತಹವರಿಗೆ ಸಂಕಟಗಳು ಬರುವ ಸಂಭವವಿರುವುದರಿಂದ, ತಮ್ಮ ಸ್ವಾರ್ಥತೆಯನ್ನು ಬಿಟ್ಟು ಪರಹಿತ ಮಾಡುವ ಜನರು ಅಮೌಲ್ಯ ರತ್ನಗಳೆಂದು ಎಣಿಸಿ, ಅವರನ್ನು ಆದಷ್ಟು ಮಟ್ಟಿಗೆ ಕಾಪಾಡಿರಿ.

(೮) ನೀವು 'ಮುಖಸ್ತುತಿಮಾಡುವವರೊಡನೆ ಗೆಳೆತನಮಾಡಬೇಡಿರಿ. ಏಕೆಂದರೆ ಅವರ ಉಪದೇಶದಿಂದ ನಿಮ್ಮ ಕರ್ತವ್ಯವು ಚೆನ್ನಾಗಿ ಸಾಗುವುದಿಲ್ಲ. ಅವರನ್ನು ಒಮ್ಮೆಯೇ ಹೀಯಾಳಿಸಿ ನೋಯಿಸುವುದೂ ಸರಿಯಲ್ಲ.

(೯) ನ್ಯಾಯವಾಗಬೇಕೆಂದು ಬೇಡಿಕೊಳ್ಳುವರ ಅರ್ಜಿಗಳನ್ನು ನೀವೇ ಅವುಗಳ ಅನುಕ್ರಮದಂತೆ ವಿಚಾರಣೆ ಮಾಡತಕ್ಕದ್ದು. ಆಳುಗಳು ಅರ್ಜಿಗಳನ್ನು ತಂದರೆ ಅವರಿಗೆ ತಮ್ಮ ತಮ್ಮ ಯಜಮಾನರ ಬಳಿಗೆ ಹೋಗಬೇಕೆಂದು ತಿಳಿಸಿರಿ. ಏಕೆಂದರೆ ಆಳುಗಳಿಂದ ಬಗೆಹರಿಯದ ಎಷ್ಟೋ ಜಗಳಗಳು ಅವರ ಒಡೆಯರಿಂದ ಬಗೆ ಹರಿಯಬಹುದು.

(೧೦) ಎಷ್ಟೋ ಜನರು ತಮ್ಮ ನೆರೆಯವರ ಮೇಲೆ ದೋಷಾರೋಪಣೆ ಮಾಡುತ್ತಾರೆ. ಆದುದರಿಂದ ಇಂತಹ ಜಗಳಗಳನ್ನು ತೀರಿಸುವಾಗ ಸಿಟ್ಟಿನಿಂದ ವಿಚಾರಗೆಡದೆ, ತಾಳ್ಮೆಯಿಂದ ಎಲ್ಲಾ ಸಂಗತಿಗಳನ್ನು ಗೊತ್ತುಮಾಡಿಕೊಂಡು, ನಿಮ್ಮ ಪರಿಚಿತರ ಹೇಳಿಕೆಯ ಮೇಲೂ, ಕಯ್ಕೆಳಗಿನವನ ಹೇಳಿಕೆಯ ಮೇಲೂ ನಂಬಿಕೆಯನ್ನಿಡದೆ, ನಿಮಗೆ ನಿಜವಾಗಿ ಸರಿದೋರಿದ ಮೇರೆಗೆ ತೀರ್ಪುಮಾಡಿರಿ.

(೧೧) ಪದೇ ಪದೇ ಆಣೆ ಇಟ್ಟುಕೊಳ್ಳಬೇಡಿರಿ; ಏಕೆಂದರೆ ಇಂತಹವರನ್ನು ಜನರು ನಂಬುವುದಿಲ್ಲ.

(೧೨) ಕೆಟ್ಟ ಮಾತುಗಳನ್ನು ಯಾವಾಗಲೂ ಆಡಬೇಡಿರಿ; ಏಕೆಂದರೆ ಹೀಗೆ ಮಾಡುವುದು ಕೀಳುತನದ ಕುರುಹೇ ಸರಿ.

(೧೩) ಭೂಮಿಯ ಸಾಗುವಳಿಯನ್ನು ಹೆಚ್ಚಿಸುವುದಕ್ಕೆ ಪ್ರಯತ್ನ ಮಾಡಿರಿ. ಒಕ್ಕಲಿಗರನ್ನು ಪ್ರೀತಿಯಿಂದ ನೋಡಿಕೊಳ್ಳಿರಿ. ಅವರಿಗೆ ಹಣದ ವಿಷಯದಲ್ಲಿ ಸಹಾಯಕರಾಗಿರಿ. ಇದರಿಂದ ಊರುಗಳು ಅಭಿವೃದ್ಧಿಯಾಗುವುವು. ಒಕ್ಕಲಿಗರಿಗೆ ತೊಂದರೆಕೊಡದೆ ಕಂದಾಯವನ್ನು ಎತ್ತಿರಿ. ಹೆಚ್ಚು ಉಪಯೋಗವುಳ್ಳ ಪದಾರ್ಥಗಳನ್ನು ಭೂಮಿಯಲ್ಲಿ ಸಾಗುವಳಿ ಮಾಡುವಂತೆ ಪ್ರೋತ್ಸಾಹಿಸಿರಿ. ಕಂದಾಯವನ್ನು ತೆಗೆದುಕೊಳ್ಳುವಾಗ ಒಕ್ಕಲಿಗರೊಡನೆ ಮಾಡಿದ ಷರತ್ತಿನಂತೆ ನಡೆಯಿರಿ.

(೧೪) ಮನೆಯವರ ಒಪ್ಪಿಗೆಯಿಲ್ಲದೆ ದಂಡಾಳುಗಳು ಯಾರ ಮನೆಯಲ್ಲಿಯೂ ಇರಕೂಡದು.

(೧೫) ನೀವೇ ಸರ್ವಜ್ಞರೆಂದು ತಿಳಿಯಬೇಡಿರಿ. ನಿಮಗಿಂತ ಬಲ್ಲವರ ಅಭಿಪ್ರಾಯವನ್ನು ಆಗಿಂದಾಗ ಕೇಳುತ್ತಿರಿ. ನಿಮಗಿಂತ ಜಾಣರಿಲ್ಲದಿದ್ದರೆ ದಡ್ಡರನ್ನಾದರೂ ಆಗಾಗ ವಿಚಾರಿಸಬಹುದು; ಏಕೆಂದರೆ ಬಲ್ಲವರಿಗೆ ತಿಳಿಯದ ಮಾತು ಕೆಲವು ವೇಳೆ ಅರಿಯದವರಿಗೆ ಗೊತ್ತಿರಬಹುದು. ಆದರೆ ಎಲ್ಲರನ್ನೂ ಕೇಳುತ್ತ ಹೋಗಬೇಡಿರಿ; ಏಕೆಂದರೆ ತಿಳಿಗೇಡಿಗಳು ತಮ್ಮ ದ್ವೇಷಮೂಲಕವಾಗಿ ಏನಾದರೂ ಹೇಳಬಹುದು.

(೧೬) ಕಯ್ಕೆಳಗಿನವರು ಮಾಡುವ ಕೆಲಸವನ್ನು ನಿಮ್ಮ ಮಕ್ಕಳಿಗೆ ನೇಮಿಸಬೇಡಿರಿ; ಏಕೆಂದರೆ ಮಕ್ಕಳು ತಪ್ಪುಮಾಡಿದರೆ ತಿದ್ದುವುದಕ್ಕೆ ಮಾರ್ಗವು ಇರುವುದಿಲ್ಲ.

(೧೭) ಯಾರಾದರೂ ನೆವಹೇಳಿದರೆ, ಕೇಳಿ ಅವರ ತಪ್ಪನ್ನು ಕ್ಷಮಿಸಿರಿ; ಏಕೆಂದರೆ ಎಲ್ಲರೂ ತಪ್ಪುಮಾಡುತ್ತಾರೆ. ನೀವು ಸಣ್ಣ ತಪ್ಪಿಗೂ ದಂಡಿಸುತ್ತೀರೆಂದು ತಿಳಿದರೆ, ಜನರು ದಂಡನೆಗೆ ಸಿದ್ಧರಾಗುವರು; ಅಥವಾ ತಪ್ಪಿಸಿಕೊಳ್ಳುವುದಕ್ಕೆ ಯತ್ನಿಸುವರು. ಶಿಕ್ಷಿಸುವುದು ಬಹಳ ಮಹತ್ವದ ಕೆಲಸವಾದುದರಿಂದ, ನೀವು ಆ ಕೆಲಸವನ್ನು ಬಹು ವಿಚಾರದಿಂದಲೂ, ದಯೆಯಿಂದಲೂ ಮಾಡತಕ್ಕದ್ದು.

(೧೮) **ದೇವರಿಗೆ** ಹೆದರುವವರನ್ನೇ ರಾಜಮಾರ್ಗಗಳ ರಕ್ಷಕರನ್ನು ಮಾಡಿರಿ. ಮತ್ತು ಅವುಗಳ ವಿಷಯದಲ್ಲಿ ನಿಮಗೆ ಗೊತ್ತಿರುವ ಎಲ್ಲಾ ಸಂಗತಿಗಳನ್ನು ಅವರಿಗೆ ತಿಳುಹಿರಿ.

(೧೯) ತಪ್ಪುಗಾರರನ್ನು ಅವರ ತಪ್ಪಿಗೆ ಸರಿಯಾಗಿ ದಂಡಿಸಿರಿ.

(೨೦) ಧರ್ಮ, ಮತ, ಭಕ್ತಿ ಇವುಗಳ ವಿಷಯವಾಗಿ ಯಾರನ್ನಾದರೂ ನೋಯಿಸಬೇಡಿರಿ; ಏಕೆಂದರೆ ಈ ವಿಷಯದಲ್ಲಿ ಯಾರ ವಿಚಾರವೂ ನಿಜವಾದುದೆಂಬುದು ತಿಳಿಯುವುದಿಲ್ಲ. ಆದುದರಿಂದ ಭಿನ್ನಮತದವರನ್ನು ಹೀಯಾಳಿಸದೆಯೂ, ಹಿಂಸೆಪಡಿಸದೆಯೂ, ಅವರ ಸದ್ಗುಣಗಳನ್ನೂ, ಸದ್ವಿಚಾರಗಳನ್ನೂ ಲಕ್ಷ್ಯಕ್ಕೆ ತಂದುಕೊಂಡು ಅವರೊಡನೆ ಸ್ನೇಹದಿಂದಿರತಕ್ಕುದು.

(೨೧) ಊಟ ನಿದ್ದೆಗಳಲ್ಲಿ ಅಳತೆಗೆಟ್ಟು ಹೊತ್ತು ಕಳೆಯಬೇಡಿರಿ. ಈ ಹೊತ್ತು ಮಾಡುವುದನ್ನು ನಾಳೆಗೆ ನಿಲ್ಲಿಸಬೇಡಿರಿ; ಏಕೆಂದರೆ ಸೋಮಾರಿ ತನವು ಹೊತ್ತುಗಳ್ಳನಾಗಿರುತ್ತದೆ.

(೨೨) ಎರಡನೆಯವರ ತಪ್ಪುಗಳನ್ನು ವಿಚಾರಿಸುವಾಗ, ಆ ತಪ್ಪು ಗಳನ್ನು ನೀವೇ ಮಾಡಿದ್ದರೆ ಯಾವ ಶಿಕ್ಷೆಯು ಸರಿಯಾದುದೆಂದು ತೋರು ವುದೋ, ಆ ಶಿಕ್ಷೆಯನ್ನು ಅವರಿಗೆ ಕೊಡಿರಿ. ಯಾವ ಅಪರಾಧಿಗಳನ್ನು ಕ್ಷಮಿಸತಕ್ಕದು, ಯಾವ ಅಪರಾಧಿಗಳನ್ನು ದಂಡಿಸತಕ್ಕದು ಎಂಬು ವುದನ್ನು ಸಂಪೂರ್ಣವಾಗಿ ವಿಚಾರಮಾಡಿ ನೋಡಿರಿ; ಏಕೆಂದರೆ ವಿಚಾ ರಾಂತ್ಯದಲ್ಲಿ ಎಷ್ಟೋ ದೊಡ್ಡ ತಪ್ಪುಗಳಿಗೆ ಅಲ್ಪ ಶಿಕ್ಷೆಯನ್ನೂ, ಎಷ್ಟೋ ಸಣ್ಣ ತಪ್ಪುಗಳಿಗೆ ಹೆಚ್ಚು ಶಿಕ್ಷೆಯನ್ನೂ ಕೊಡುವುದು ಆವಶ್ಯಕವೆಂದು ತೋರುವುದು.

(೨೩) ಯಾವನ ಸಂಗಡಲಾದರೂ ಕಡು ಹಗೆತನವನ್ನು ಮಾಡಬೇಡಿರಿ; ಏಕೆಂದರೆ ಹೃದಯವನ್ನು ದ್ವೇಷದ ಸೆರೆಮನೆಯನ್ನಾಗಿ ಮಾಡುವುದು ಸರಿಯಲ್ಲ.

(೨೪) ಬೇಹಿನವರನ್ನು ಎಂದಿಗೂ ಸಂಪೂರ್ಣವಾಗಿ ನಂಬಿಬಿಡಬೇಡಿರಿ. ಏಕೆಂದರೆ ಅವರು ವಿಶ್ವಾಸಾರ್ಹರಲ್ಲ. ಅವರಲ್ಲಿ ಧನಲೋಭವು ಬಹಳ; ಅವರು ಹೇಳಿದುದನ್ನು ಮನನಮಾಡಿ ಅವರ ಹೇಳಿಕೆಗೆ ಬಲುಮೆ ಕೊಡುವ ಸಂಗತಿಗಳಿದ್ದರೆ ಮಾತ್ರ ಅವರ ಮಾತಿನಂತೆ ನಡೆಯಬಹುದು.

(೨೫) ಕೆಟ್ಟ ಜನರನ್ನು ವಿಶೇಷವಾಗಿ ನಿಮ್ಮ ಹತ್ತಿರ ಬರಗೊಡ ಬೇಡಿರಿ; ಏಕೆಂದರೆ ಅವರು ಗೆಳೆತನದ ನೆವದಿಂದ ಒಳ್ಳೆಯ ಜನರನ್ನು ಕೆಡಿಸಲಿಕ್ಕೆ ಯತ್ನಿಸುತ್ತಾರೆ.

(೨೬) ಮೋಸಗಾರರೊಡನೆ ವಿಶೇಷ ಸ್ನೇಹ ಬೆಳಿಸಬೇಡಿರಿ; ಏಕೆಂದರೆ ಅವರು ತಮ್ಮ ಸ್ನೇಹವನ್ನು ದುರುಪಯೋಗಮಾಡಿಕೊಳ್ಳಬಹುದು.

(೨೭) ಆಗಾಗ ನೀವು ಮಾಡಿದ ತಪ್ಪುಗಳನ್ನು ಕ್ಷಮಿಸೆಂದು ದೇವ ರನ್ನು ಬೇಡಿಕೊಳ್ಳಿರಿ.

(೨೮) ನೆರೆನಾಡಿನಲ್ಲಿ ಯಾವ ಹೆಚ್ಚಿನ ಸಂಗತಿಯು ನಡೆದರೂ ಅದನ್ನು ಕೂಡಲೆ ನಮಗೆ ತಿಳುಹಿಸಿರಿ.

(೨೯) ಯಾವಾಗಲೂ ಜ್ಞಾನ ಸಂಪಾದಿಸಲು ಯತ್ನಿಸಿರಿ. ಯಾವ ಜಾತಿಯವರೇ ಆಗಲಿ ಬಲ್ಲವರಾಗಿದ್ದರೆ ಅವರಿಂದ ಏನಾದರೂ ತಿಳಿದು ಕೊಳ್ಳಿರಿ.

(೩೦) ದಂಡಾಳುಗಳ ಆಯುಧವಸ್ತ್ರಗಳ ಕಡೆಗೆ ಲಕ್ಷ್ಯಕೊಡಿರಿ. ಏಕೆಂದರೆ ತನ್ನ ಹುಟ್ಟುವಳಿಗಿಂತ ಹೆಚ್ಚು ವೆಚ್ಚಮಾಡುವ ದಂಡಾಳು ತಿಳಿಗೇಡಿಯೇ ಸರಿ. ತನ್ನ ಹುಟ್ಟುವಳಿ ಎಲ್ಲವನ್ನು ವೆಚ್ಚಮಾಡುವವನು ತಿಳಿಗೇಡಿಯಾಗದಿದ್ದರೂ, ಬುದ್ಧಿವಂತನೆನಿಸಿಕೊಳ್ಳಲಾರನು.

(೩೧) ನೀವು ನಿಮ್ಮ ಸ್ಥಳದಲ್ಲಿ ಕಡೆತನಕ ಇರುವವರೆಂದು ತಿಳಿಯ ಬೇಡಿರಿ; ಏಕೆಂದರೆ ಕರಿಸಿದಾಗ ಇಲ್ಲಿಗೆ ನೀವು ಬರಲು ಸಿದ್ಧರಾಗಿ ಇರಬೇಕು.

(೩೨) ನೀವು ಮಾತು ಕೊಟ್ಟಂತೆ ನಡೆಯಿರಿ. ಪ್ರಾಮಾಣಿಕರಾಗಿರಿ. ಪ್ರಜೆಗಳಿಗೆ ಆಶಾಭಂಗ ಮಾಡಬೇಡಿರಿ.

(೩೩) ಬಾಣ ಹೊಡೆಯಲಿಕ್ಕೂ, ತುಬಾಕಿ ಹಾರಿಸಲಿಕ್ಕೂ ನಿಮ್ಮೆಲ್ಲ ರಿಗೂ ಬರಲೇಬೇಕು.

(೩೪) ಬೇಟೆಯಾಡುವುದರಲ್ಲಿ ಅತ್ಯಾಸಕ್ತರಾಗಬೇಡಿರಿ. ವಿನೋದ ಕ್ಕಾಗಿ ಮಾತ್ರ ಬೇಟೆಯಾಡಬಹುದು.

(೩೫) ಮನೆಯೊಳಗಿನ ಆಳುಗಳಿಗೆ ಅವರವರ ಕೆಲಸವನ್ನು ಕಲಿಸು ವುದಕ್ಕೆ ಯತ್ನಮಾಡಿರಿ. ಅವರ ಸಂಗಡ ಹಗಲೆಲ್ಲ ನಗುತ್ತಿರಬೇಡಿರಿ.

(೩೬) ಪ್ರತಿ ದಿವಸ ಬೆಳಗಿನ ಜಾವದಲ್ಲಿಯೂ ಅರ್ಧ ರಾತ್ರಿಯಲ್ಲಿಯೂ ನಗಾರಿಯನ್ನು ಬಾರಿಸಿರಿ.

(೩೭) ಸೂರ್ಯನು ಒಂದು ರಾಶಿಯಿಂದ ಮತ್ತೊಂದು ರಾಶಿಗೆ ಹೋಗುವಾಗ ತುಬಾಕಿಗಳನ್ನು ಹಾರಿಸಿರಿ. ಹೀಗೆ ಮಾಡಿದರೆ ಆ ಕಾಲವನ್ನು ಅರಿತು ಜನರು ಆತನು ಮಾಡುವ ಉಪಕಾರವನ್ನು ಸ್ಮರಿಸಬಹುದು.

(೩೮) ನಿಮ್ಮ ಮನೆಯವರೂ, ಆಳುಗಳೂ ಏನು ಮಾಡುತ್ತಾರೆ ಎಂಬುದನ್ನು ಗಮನವಿಟ್ಟು ನೋಡಿಕೊಳ್ಳಿರಿ; ಏಕೆಂದರೆ ನಿಮ್ಮ ಹೆಸರು ಹೇಳಿ ಅವರು ಜನರನ್ನು ಒತ್ತಾಯ ಮಾಡಬಹುದು.

(೩೯) ಅರ್ಜಿದಾರರನ್ನು ತಪ್ಪದೆ ನಿಮ್ಮ ಬಳಿಗೆ ಕರೆತರಲಿಕ್ಕೆ ಒಬ್ಬ ಪ್ರಾಮಾಣಿಕ ಮನುಷ್ಯನನ್ನು ಗೊತ್ತುಮಾಡಿರಿ.

(೪೦) **ಕೊತ್ತವಾಲನ** ಅಧಿಕಾರ ಕರ್ತವ್ಯಗಳ ದೆಸೆಯಿಂದ ಮಾಡಿದ ನಿಯಮಗಳಿಗೆ ನೀವು ವಿಶೇಷ ಗಮನಕೊಡತಕ್ಕದು. **ಕೊತ್ತವಾಲ** ನಿಲ್ಲದ ಊರುಗಳಲ್ಲಿ ಒಬ್ಬ **ಕೊತ್ತವಾಲನನ್ನು** ನಿಯಮಿಸಿರಿ. ಈ **ಕೊತ್ತವಾಲನು** ದೊಡ್ಡ ಮನೆತನದವನೂ, ಜನರನ್ನು ಬಲ್ಲವನೂ, ಪ್ರಾಮಾಣಿಕನೂ ಆಗಿರಬೇಕು."

**ಕೊತ್ತವಾಲನ** ಕರ್ತವ್ಯಗಳು ಮಹತ್ವದವಾಗಿರುತ್ತವೆ. ಆದುದರಿಂದ ಅವುಗಳನ್ನು ಇಲ್ಲಿ ತಿಳಿಸುತ್ತೇವೆ.

(ಅ) **ಕೊತ್ತವಾಲನು** ಸರಕಾರದ ಅಧಿಕಾರಿಗಳ ಉಪಯೋಗಕ್ಕಾಗಿ ಪ್ರತಿಯೊಂದು ಪಟ್ಟಣದಲ್ಲಿಯೂ, ಅದರ ನೆರೆಯಲ್ಲಿರುವ ಹಳ್ಳಿಪಳ್ಳಿಗಳಲ್ಲಿಯೂ ಇರುವ ಮನೆಗಳ ಪಟ್ಟಿಯನ್ನೂ ಉಳಿದ ಕಟ್ಟಡಗಳ ಪಟ್ಟಿಯನ್ನೂ ಇಡತಕ್ಕದ್ದು. ಈ ಪಟ್ಟಿಯಲ್ಲಿ ಮನೆಯ ಯಜಮಾನನ ಹೆಸರು, ಅವರ ಕುಟುಂಬದವರ ಸಂಖ್ಯೆ, ಊರಿನ ಬೇರೆ ಬೇರೆ ಭಾಗಗಳು, ಅವರವರ ಹೋರೆಯಂತೆ* ಜನರ ವಿಭಾಗಗಳು, ಮುಂತಾದ ಸಂಗತಿಗಳಿರಬೇಕು. ಅವನು ಪ್ರತಿಯೊಂದು ಮನೆಯವರಿಂದ ಜಗಳ ಮುಂತಾದುದು ಆಗದಂತೆ ಹೊಣೆಯನ್ನು ತೆಗೆದುಕೊಳ್ಳಬೇಕಲ್ಲದೆ, ಪ್ರತಿಯೊಂದು ಭಾಗಕ್ಕೂ ಒಬ್ಬೊಬ್ಬ ಕಾವಲುಗಾರನನ್ನಿಟ್ಟು, ಜನರ ಆಸ್ತಿ ಜೀವಗಳನ್ನು ಕಾಪಾಡಬೇಕು. ಪ್ರತಿಯೊಬ್ಬ ಕಾವಲುಗಾರನು ತನ್ನ ಭಾಗದಲ್ಲಿ ಸುಡೋಣ, ಕೊಲೆ, ಸುಲಿಗೆ, ಕಳವುಗಳು ಆಗದಂತೆ ವ್ಯವಸ್ಥೆಯನ್ನಿಡಬೇಕಲ್ಲದೆ, ಯಾರಾದರೂ ಹೊರಗಿನವರು ಬಂದರೆ ಅವರ ಊರು ಹೆಸರುಗಳನ್ನು ಬರೆದುಕೊಂಡು ಅವರಿಂದ ಹೊಣೆಯನ್ನು ತೆಗೆದುಕೊಳ್ಳಬೇಕು. ಇದಲ್ಲದೆ ಅವನು ತಮ್ಮ ತಮ್ಮ ಹುಟ್ಟುವಳಿಗಿಂತ ಹೆಚ್ಚು ವೆಚ್ಚಮಾಡುವ ಜನರನ್ನು ಕಂಡುಹಿಡಿದು ಅವರಿಗೆ ದುಡ್ಡು ಎಲ್ಲಿಂದ ಬರುತ್ತದೆಂಬುದನ್ನು ಸೂಕ್ಷ್ಮ ರೀತಿಯಿಂದ ವಿಚಾರಿಸಬೇಕು. ಈ ವಿಚಾರದ ಉದ್ದೇಶವು ಅವರ ಆಸ್ತಿಯನ್ನು ಹರಣಮಾಡಬೇಕೆಂಬುದಲ್ಲ; ಆದರೆ ಅವರು ದುಂದುಗಾರರು ಅಥವಾ ಮೋಸಗಾರರು ಆಗಬಾರದೆಂದಾಗಿರುತ್ತದೆ.

---

* ಉದ್ಯೋಗಕ್ಕೆ ಅನುಸಾರವಾಗಿ.

(ಅ) **ಕೊತ್ತವಾಲನು** ಸರಕಾರದವರಿಗೆ ಬೇಕಾಗುವ ಎಲ್ಲ ಸಾಮಾನುಗಳನ್ನು, ಅವುಗಳ ನಿಜವಾದ ಬೆಲೆಯನ್ನು ವಿಚಾರಿಸಿ ತೆಗೆದುಕೊಳ್ಳಬೇಕು. ಯಾವಯಾವ ಜನರು ಯಾವಯಾವ ಸರಕುಗಳನ್ನು ಮಾಡುತ್ತಾರೆಂಬುದು ಅವನಿಗೆ ಗೊತ್ತಿರಬೇಕು. ಈ ಕೆಲಸಕ್ಕೆ ಬೇಕಾಗುವಷ್ಟು ಆಳುಗಳನ್ನು ಅವನು ಇಟ್ಟುಕೊಳ್ಳಬಹುದು.

(ಇ) ರಾತ್ರಿಯಲ್ಲಿ ಕಳವುಗಳು ಆಗಕೂಡದೆಂದು ಊರಿನ ಬೇರೆ ಬೇರೆ ಭಾಗಗಳಲ್ಲಿಯೂ, ಸಣ್ಣ ಸಣ್ಣ ಓಣಿಗಳಲ್ಲಿಯೂ ಜನರನ್ನಿರಿಸಬೇಕು.

(**ಈ**) ಸಂಶಯಾಸ್ಪದರಾದ ಹೊರಗಿನ ಜನರನ್ನು ತನ್ನ ಊರಿಗೆ ಬರಗೊಡಬಾರದು.

(**ಉ**) ಅವನು ಜನರ ಸಹಾಯದಿಂದ ಕಳ್ಳರನ್ನೂ, ಸುಲಿಗೆಯುವರನ್ನೂ ಕಂಡುಹಿಡಿಯಬೇಕು. ಈ ಕೆಲಸದಲ್ಲಿ ಜನರು ಅವನಿಗೆ ಸಹಾಯ ಮಾಡದಿದ್ದರೆ ಅವರು ಶಿಕ್ಷೆಗೆ ಪಾತ್ರರಾಗುವರೆಂದು ತಿಳಿಸಬೇಕು.

(**ಊ**) ಯಾವನಾದರೂ ಒಬ್ಬ ಮನುಷ್ಯನು ತೀರಿಹೋದರೆ ಮತ್ತು ಅವನಿಗೆ ಬಾಧ್ಯಸ್ಥರು ಯಾರೂ ಇಲ್ಲದಿದ್ದರೆ, **ಕೊತ್ತವಾಲನು** ಅವನ ಆಸ್ತಿಯನ್ನು ತನ್ನ ಸ್ವಾಧೀನದಲ್ಲಿ ಇಟ್ಟುಕೊಂಡು, ಅದರ ಲೆಕ್ಕವನ್ನು ಸರಕಾರಕ್ಕೆ ಕಳುಹಬೇಕು. ಅಲ್ಲದೆ, ಸತ್ತ ಮನುಷ್ಯನ ಬಾಧ್ಯಸ್ಥರನ್ನು ಕಂಡುಹಿಡಿಯಬೇಕು. ಸರಿಯಾದ ಬಾಧ್ಯಸ್ಥನು ಗೊತ್ತಾದ ಬಳಿಕ ಅವನಿಗೆ ಎಲ್ಲ ಆಸ್ತಿಯನ್ನೂ ಒಪ್ಪಿಸಬೇಕು. ಆದರೆ ಈ ಕೆಲಸದಲ್ಲಿ **ಕೊತ್ತವಾಲನು** ಪ್ರಾಮಾಣಿಕತನದಿಂದಲೂ, ಸದಸದ್ವಿಚಾರದಿಂದಲೂ ನಡೆಯದಿದ್ದರೆ, **ಕಾನಸ್ಟೆಂಟಿನೋಪಲಿನಲ್ಲಿ** ಆಗುವ ಅಂದಾದುಂದಿಯು* ನಮ್ಮ ರಾಜ್ಯದಲ್ಲಿಯೂ ಆಗಬಹುದು.

(ಎ) ತನ್ನ ಭಾಗದಲ್ಲಿ ಸಾರಾಯಿಯು ಸಿಕ್ಕದಂತೆ **ಕೊತ್ತವಾಲನು** ನೋಡಿಕೊಳ್ಳತಕ್ಕದು. ಹೆಂಡಕುಡುಕರು, ಹೆಂಡಮಾರುವವರು, ಅಥವಾ ಹೆಂಡಮಾಡುವವರು ಸಿಕ್ಕಿದರೆ ಅವರನ್ನು ಇತರರಿಗೆ ಹೆದರಿಕೆ ಹುಟ್ಟುವಂತೆ ವಿಶೇಷವಾಗಿ ದಂಡಿಸಬೇಕು.

---

* ಅವ್ಯವಸ್ಥೆ.

(ಏ) ಹಣವುಳ್ಳವರು ತಮ್ಮಲ್ಲಿರುವ ಎಲ್ಲ ಕಾಳುಗಳನ್ನು ಮಾರುವುದಕ್ಕೆ ತೆಗೆಯದೆ, ಸ್ವಲ್ಪ ಸ್ವಲ್ಪ ಕಾಳನ್ನು ಹೊರಗೆ ತೆಗೆದು, ಕಾಳಿನ ಬೆಲೆಯನ್ನೇರಿಸತೊಡಗಿದರೆ ಅದನ್ನು ಕೂಡಲೆ ಕಟ್ಟುಮಾಡಬೇಕು.

(ಐ) **ಪರ್ವಾದಿನ್** ತಿಂಗಳ ಆರಂಭದಲ್ಲಿ ಸೂರ್ಯನು ಮಕರ ರಾಶಿಗೆ ಹೋಗುವ ದಿವಸ **ನವರೋಜ್** ಹಬ್ಬವಾಗಿರುತ್ತದೆ. ಆ ಹಬ್ಬವನ್ನು **ಕೊತ್ತವಾಲ**ನು ಬಹು ಸಮಾರಂಭದಿಂದ ನಡಿಸತಕ್ಕದು. ಅವನು ಮಾಡಿಸುವ ಉಳಿದ ಹಬ್ಬಗಳಾವುವೆಂದರೆ:—**ಪರ್ವರ್ದೀಯ** ತಿಂಗಳ ೧೯ನೆಯ ದಿವಸ, **ಉರ್ದಿಬಿಹಿಸ್ತ** ತಿಂಗಳ ೩ನೆಯ ದಿವಸ, **ಖುದರ್ಾ**ದ ತಿಂಗಳ ೬ನೆಯ ದಿವಸ, **ಆಬಾನ್** ತಿಂಗಳ ೧೦ನೆಯ ದಿವಸ, **ಆಜರ್** ತಿಂಗಳ ೯ನೆಯ ದಿವಸ, **ದಯ್** ತಿಂಗಳ ೮ನೆಯ, ೧೫ನೆಯ ಮತ್ತು ೨೩ನೆಯ ದಿವಸಗಳು, **ಬಹಮನ್** ತಿಂಗಳ ೨ನೆಯ ದಿವಸ, **ಇಸ್ಫಂದಾದ್** ತಿಂಗಳ ೯ನೆಯ ದಿವಸ; ಇವುಗಳ ಹೊರತು ಉಳಿದ ಸಣ್ಣ ಸಣ್ಣ ಹಬ್ಬಗಳನ್ನು ಅವುಗಳ ಯೋಗ್ಯತೆಗೆ ಸರಿಯಾಗಿ ಮಾಡಿಸಬೇಕು.

(ಒ) **ನವರೋಜಿ**ನ ರಾತ್ರಿಯಲ್ಲಿ ಊರಲ್ಲೆಲ್ಲ ದೀವಿಗೆಗಳನ್ನು ಹಚ್ಚಿಸಬೇಕು. ಹಗಲು ದೊಡ್ಡ ದೊಡ್ಡ ನಗಾರಿಗಳನ್ನೂ, ಇರುಳು ನಕರ (ಸಣ್ಣ ನಗಾರಿ) ವನ್ನೂ ಬಾರಿಸಬೇಕು.

(ಓ) ವಿಶೇಷವಾದ ಆವಶ್ಯಕತೆಯಿಲ್ಲದಾಗ ಹೆಂಗಸರು ಕುದುರೆಯ ಮೇಲೆ ಹತ್ತಕೂಡದು.

(ಔ) ಹಿಂದೂಜನರು ಸ್ನಾನಮಾಡುವ ಸ್ಥಳವೂ, ಕುಡಿಯುವ ನೀರನ್ನೊಯ್ಯುವ ಸ್ಥಳವೂ ಬೇರೆ ಬೇರೆಯಾಗಿರಬೇಕು. ಇದಲ್ಲದೆ ಹೆಂಗಸರೂ, ಗಂಡಸರೂ ಒಂದೇ ಜಾಗದಲ್ಲಿ ಸ್ನಾನಮಾಡಕೂಡದು.

---

# ೭ನೆಯ ಅಧ್ಯಾಯ

## ಅಕ್ಬರನ ಧರ್ಮ (ಮತ) ವಿಚಾರಗಳು

"**ಅಕ್ಬರಬಾದಷಹ**ನ ಧರ್ಮವಾವುದು?" ಈ ಪ್ರಶ್ನೆಗೆ ಹಲವು ಜನರು ಹಲವು ಬಗೆಯಾಗಿ ಉತ್ತರಕೊಡುತ್ತಾರೆ. ಕೆಲವರು ಅವನು

ಸುಧಾರಿಸಿದ ಮುಸಲ್ಮಾನರವನಾಗಿದ್ದನೆನ್ನುತ್ತಾರೆ; ಹಲವರು ಅವನಿಗೆ ಪಾರ್ಸಿಮತದಲ್ಲಿ ಪೂರ್ಣವಿಶ್ವಾಸವಿತ್ತೆಂದು ಪ್ರತಿಪಾದಿಸುತ್ತಾರೆ; ಅನೇಕರು ಅವನಿಗೆ ಹಿಂದೂಧರ್ಮದಲ್ಲಿ ಪೂರ್ಣಶ್ರದ್ಧೆಯಿದ್ದುದರಿಂದ, ಅವನು ಹಿಂದೂ ಜನರೊಡನೆ ಸ್ನೇಹಬೆಳಿಸಿದನೆಂತಲೂ, ಬ್ರಾಹ್ಮಣರಿಗೂ ದೇವರಿಗೂ ಉಂಬಳಿ ಹಾಕಿಕೊಟ್ಟನೆಂತಲೂ ಅನ್ನುತ್ತಾರೆ; ಮತ್ತೆ ಕೆಲವರು ಅವನು ಎಲ್ಲಾ ಧರ್ಮಗಳ ಸಾರವನ್ನು ತೆಗೆದು ಒಂದು ಹೊಸ ಧರ್ಮವನ್ನು ಸ್ಥಾಪಿಸಿದನೆಂದು ಹೇಳುತ್ತಾರೆ. ಈಗ ಈ ಭಿನ್ನಭಿನ್ನ ಮತಗಳಲ್ಲಿ ತಥ್ಯಾಂಶವೆಷ್ಟಿರುತ್ತದೆಂಬದನ್ನು ಈ ಅಧ್ಯಾಯದಲ್ಲಿ ವಿಚಾರಿಸುವೆವು.

**ಅಕ್ಬರ**ನು ಚಿಕ್ಕಂದಿನಲ್ಲಿ ವಿದ್ಯವನ್ನು ಕಲಿಯಲಿಲ್ಲ. ಹಿಂದೆ ೩ನೆಯ ಅಧ್ಯಾಯದಲ್ಲಿ ವಿವರಿಸಿದಂತೆ ಅವನ ಬಾಲ್ಯವು ಕಷ್ಟದಲ್ಲೇ ಕಳೆದು ಹೋಯಿತು. **ಸಿವಾಜಿ**ಯಂತೆ ಅವನಿಗೆ ಕಡೆತನಕ ಓದಲಿಕ್ಕೂ, ಬರೆಯಲಿಕ್ಕೂ ಬರುತ್ತಿರಲಿಲ್ಲ. ಆದರೂ ಅವನ ಗ್ರಹಣಶಕ್ತಿಯೂ, ಶೋಧಕ ದೃಷ್ಟಿಯೂ, ಒಳ್ಳೊಳ್ಳೆಯ ವಿದ್ವಾಂಸರನ್ನು ಅಚ್ಚರಿಗೊಳಿಸುತ್ತಿದ್ದುವು.

**ಅಕ್ಬರ**ನು ಪಟ್ಟವೇರಿದಾಗ, **ಉತ್ತರಹಿಂದೂಸ್ಥಾನ**ದಲ್ಲಿದ್ದ ಮುಸಲ್ಮಾನರ ಅರಸರು ಅವನ ಕಡುಹಗೆಗಳಾಗಿದ್ದರು. ದೇಶದಲ್ಲಿ ತಮ್ಮಣೆ (ಶಾಂತಿ)ಯಿರಲಿಲ್ಲ. ಶೂರನಾದ **ಬೈರಾಮ್‌ಖಾನ**ನು ದ್ರೋಹಬಗೆದು ಸ್ಥಾನಚ್ಯುತನಾಗಿ ಒಬ್ಬ ಕೊಲೆಗಡುಕನಿಂದ ಕೊಲೆಯಾದನು. ಕಯ್ಕೆಳಗಿನ ದಳವಾಯಿಗಳು ಆಗಾಗ ಬಂಡಾಯವೆಬ್ಬಿಸುತ್ತಿದ್ದರು. ಆದುದರಿಂದ ಈ ಸಮಯದಲ್ಲಿ ಅವನಿಗೆ ಹಿಂದೂಜನರ ನೆರವು ಅವಶ್ಯವಾಗಿ ಬೇಕಾಗಿತ್ತು. ಆದರೆ ಅದು ದೊರೆಯುವ ಬಗೆಯಾವುದು? ಅವರ ಧರ್ಮ ಬೇರೆ, **ಅಕ್ಬರ**ನ ಧರ್ಮ ಬೇರೆ; ನಡೆನುಡಿಗಳಾದರೂ ಭಿನ್ನವಾದವು. ಇಂತಹ ಪ್ರಸಂಗದಲ್ಲಿ **ಅಕ್ಬರ**ನು ಕಡುಧರ್ಮಾಭಿಮಾನಿಯಾಗಿದ್ದರೆ, ಅವನ ರಾಜ್ಯವು **ಹುಮಾಯುನ**ನ ರಾಜ್ಯದಂತೆ ಕೆಲವು ದಿವಸ ಬಾಳಿ ನಿಶ್ಚಯವಾಗಿಯೂ ಲಯಹೊಂದುತ್ತಿತ್ತು.

ದೈವಯೋಗದಿಂದ ಆಗಿನ ಕಾಲವು ಧರ್ಮಾಭಿಮಾನವನ್ನು ತೊರೆಯಲಿಕ್ಕನುಕೂಲವಾಗಿತ್ತು. ಮುಸಲ್ಮಾನರಲ್ಲಿ ಮೊದಲಿದ್ದ ಒಗ್ಗಟ್ಟು ಅಳಿದುಹೋಗಿತ್ತು. ಅವರು ಈ ದೇಶಕ್ಕೆ ಬಂದಂದಿನಿಂದ ಕುರಾನಿನಲ್ಲಿ

ನಿಷ್ಣಾತರಾದ **ಸುನ್ನಿ** ಮತದ ಧರ್ಮಾಧಿಕಾರಿಗಳು **ಉಲ್ಮಾ**ಯೆಂಬ ಸಂಘವನ್ನು ಮಾಡಿಕೊಂಡು, ರಾಜ್ಯದಲ್ಲಿ ಪ್ರಬಲರಾಗಿದ್ದರು. ಆ ಕಾಲದರಸರು ನ್ಯಾಯಸ್ಥಾನಗಳಿಗೂ, ಬೇರೆ ಬೇರೆ ಧರ್ಮಾಧಿಕಾರಿಗಳಿಗೂ **ಉಲ್ಮೆ**ಗೆ ಸೇರಿದವರನ್ನೇ ನಿಯಮಿಸುತ್ತಿದ್ದರು. ಇವರು **ಹುಮಾಯನ**ನು ತಿರುಗಿ ಈ ದೇಶಕ್ಕೆ ಬಂದಂದಿನಿಂದ **ಸಿಯಾ** ಮತದ ಮೊಗಲರ ಒಲುಮೆಯನ್ನು ಸಂಪಾದಿಸಿ, **ಸಿಯಾ**ಮತದಲ್ಲಿ ಉಳಿದ ಜನರನ್ನು ಪರಿಪರಿಯಿಂದ ಪೀಡಿಸುತ್ತಿದ್ದರು. ಇದಲ್ಲದೆ ಈ ಕಾಲಕ್ಕೆ **ಇರಾಣ** ದೇಶದಿಂದ ಬಂದ **ಸುಫಿ**ಯೆಂಬ ಮತವು ಈ ದೇಶದಲ್ಲಿ ಹಬ್ಬುತ್ತಾ ಬಂದಿತ್ತು. **ಉಲ್ಮೆ**ಯವರು ಈ ಹೊಸ ಮತದವರ ಕಡುಹಗೆಗಳಾಗಿದ್ದರು.

ಮೊದಲಿನಿಂದ ಮೊಗಲರಿಗೆ ಮತಾಭಿಮಾನವು ಹೆಚ್ಚಾಗಿರಲಿಲ್ಲ. **ಅಕ್ಬರಬಾದಷಹ**ನ ತಾಯಿಯು **ಇರಾನ್** ವಂಶಜಳಾಗಿದ್ದಳು. ಆದುದರಿಂದ ಅವನ ವಿಚಾರಗಳು ಕೆಲವು ಮಟ್ಟಿಗೆ **ಇರಾನ್** ದೇಶದವರ ವಿಚಾರವನ್ನು ಹೋಲುತ್ತಿದ್ದುವು. ಇದಲ್ಲದೆ ಅವನ ಪೂರ್ವಜರ ಧರ್ಮನಿರಭಿಮಾನವೂ ಅವನಲ್ಲಿತ್ತು. ಅವನು ಪಟ್ಟವೇರಿದ ಕೂಡಲೆ **ಉಲ್ಮೆ**ಯವರು ಅವನನ್ನು ತಮ್ಮ ಕಡೆಗೆ ಒಲಿಸಿಕೊಳ್ಳಬೇಕೆಂದು ವಿಶ್ವಪ್ರಯತ್ನ ಮಾಡಿದರು. ಅವರ ಪ್ರಯತ್ನವು ಕೆಲವು ಮಟ್ಟಿಗೆ ಸಫಲವಾದಂತೆ ಕಂಡುಬಂತು. ಇದೇ ಹುರುಪಿನಲ್ಲಿ **ಬಾದಷಹ**ನು ಹಿಂದೆ ಹೇಳಿದಂತೆ **ಜೋಧಪುರ** ಸಂಸ್ಥಾನವನ್ನೊಳನುಗ್ಗಿದನು (೧೫೬೧); **ಅಜಮೀರಿ**ನಲ್ಲಿ ಒಂದು ಮಸೀದಿಯನ್ನು ಕಟ್ಟಿಸಿ, ಅಲ್ಲಿಯ ಸಾಧುವಿನ ಅನುಗ್ರಹದಿಂದ **ಸೆಲೀಮ**ನು ಹುಟ್ಟಿದ ಬಳಿಕ, ತನ್ನ ಹರಕೆಯನ್ನು ಮುಟ್ಟಿಸಲಿಕ್ಕೆ **ಆಗ್ರಾ**ದಿಂದ **ಅಜಮೀರ**ದ ವರೆಗೆ ಪಾದಚಾರಿಯಾಗಿಯೇ ನಡೆದು ಹೋದನು* (೧೫೭೦).

ಆದರೆ ಅಷ್ಟರಲ್ಲಿ ಬೇರೆ ಬೇರೆ ಶಕ್ತಿಗಳು **ಬಾದಷಹ**ನ ಮನಸ್ಸನ್ನು ಮುಸಲ್ಮಾನ ಧರ್ಮದಿಂದ ತಪ್ಪಿಸುವ ಕೆಲಸದಲ್ಲಿ ತೊಡಗಿದ್ದುವು. ತನ್ನ ರಾಜ್ಯವನ್ನು ನೆಲೆಗೊಳಿಸಲಿಕ್ಕೆ ಹಿಂದೂಜನರ ನೆರವು ಅತ್ಯವಶ್ಯವಾದುದೆಂದು ಅವನಿಗೆ ಮೊದಲೇ ಕಂಡುಬಂದಿತ್ತು. ರಾಜಸ್ಥಾನದಲ್ಲಿ ನಡೆದ ಮುತ್ತಿಗೆ ಕಾಳಗಗಳಲ್ಲಿ, ರಜಪೂತರು ತೋರಿಸಿದ ಕಲಿತನವೂ, ಅಭಿಮಾನವೂ ಅವನನ್ನು

---

* ಆಗ್ರಾ ದಿಂದ ಅಜಮೀರವು ೨೦೦ ಮೈಲು ದೂರವಿರುತ್ತದೆ.

ಬೆರಗುಮಾಡಿದ್ದುವು. ಆದಕಾರಣ ಅವರನ್ನು ತನ್ನ ರಾಜ್ಯದ ಬೆಂಬಲವನ್ನಾಗಿ ಹೇಗಾದರೂ ಮಾಡಿಕೊಳ್ಳಬೇಕೆಂಬ ಕುತೂಹಲವು ಅವನಲ್ಲಿ ದಿನ ದಿನಕ್ಕೆ ಹೆಚ್ಚುತ್ತಿತ್ತು. ಅದರಿಂದ ಅವನು ನಯಭಯದಿಂದ ರಜಪೂತರೊಡನೆ ಶರೀರಸಂಬಂಧವನ್ನು ಮಾಡತೊಡಗಿದನು.

ಅಕ್ಬರಲ್ಲಿ ಮತ್ತೆರಡು ಸಂಗತಿಗಳು ಸಂಭವಿಸಿದವು. ಅವು **ಅಕ್ಬರ**ನ ಮನಸ್ಸನ್ನು ಮಹಮ್ಮದೀಯಧರ್ಮದಿಂದ ತಿರುಗಿಸಿದುದಲ್ಲದೆ, ಅವನ ಆಳಿಕೆಯನ್ನು, ಹಿಂದೂಜನರಿಗೆ ಮಾತ್ರವಲ್ಲದೆ, ತಿಳಿವಳಿಕೆಯುಳ್ಳ ಉಳಿದ ಧರ್ಮದ ಜನರಿಗೂ ಪ್ರಿಯಕರವಾದುದನ್ನು ಮಾಡಿದವು. ಈ ಸಂಗತಿಗಳಾವನೆಂದರೆ:—

೧ನೆಯ ಸಂಗತಿಯಾವದೆಂದರೆ—**ಮೇವಾಡ**ರಾಜ್ಯದ ರಾಣಿಯೂ ಪರಮಭಗವದ್ಭಕ್ತಳೂ ಆದ **ಮೀರಾಬಾಯಿ**ಯ ದರ್ಶನವು. ಈ ಸಾಧ್ವಿಯ ಹೆಸರು ಉತ್ತರ ಹಿಂದೂಸ್ಥಾನದೊಳಗೆ ಸಿಂಧುನದಿಯಿಂದ ಗಂಗಾನದಿಯವರೆಗೂ, ಹಿಮಾಲಯದಿಂದ ವಿಂಧ್ಯಾದ್ರಿಯವರೆಗೂ ಹಬ್ಬಿದ ಪ್ರದೇಶದಲ್ಲಿ ಆ ಬಾಲವೃದ್ಧರಿಗೂ ಗೊತ್ತಿರುತ್ತದಷ್ಟೇ. ಈ ಭಗವದ್ಭಕ್ತಳು ರಚಿಸಿದ ಶ್ರೀಕೃಷ್ಣಪರವಾದ ಪದಗಳು ಎಲ್ಲರ ಬಾಯಲ್ಲಿಯೂ ಇರುತ್ತವೆ. ದೈವಯೋಗದಿಂದ **ಅಕ್ಬರಬಾದಷಹ**ನು ಈ ಪದಗಳನ್ನೂ, ಆಕೆಯ ಅಪೂರ್ವವಾದ ಭಕ್ತಿಯ ವರ್ಣನೆಯನ್ನೂ ಕೇಳಿ, ವಿಶ್ವಪ್ರಯತ್ನ ಮಾಡಿ ಆಕೆಯ ದರ್ಶನಲಾಭಹೊಂದಬೇಕೆಂದು ಆಲೋಚಿಸಿ ತನ್ನ ಗಾಯಕನಾದ **ತಾನಸೇನ**ನ ಅಭಿಪ್ರಾಯ ಕೇಳಿದನು. ಅವನು ಆ ವಿಚಾರಕ್ಕೆ ಪೂರ್ಣವಾಗಿ ಒಡಂಬಟ್ಟನು. ಆದರೆ **ಚಿತ್ತೂರಿ**ಗೆ ಹೋಗಿ ಆ ಭಕ್ತಳನ್ನು ಕಾಣುವ ಬಗೆ ಹೇಗೆ? ಮುಸಲ್ಮಾನರಿಗೂ, **ಮೇವಾಡ**ದ ರಜಪೂತರಿಗೂ ಮೊದಲಿನಿಂದಲೂ ಕಡುವೈರ. ಹಿಂದಕ್ಕೊಮ್ಮೆ ಪದ್ಮಿನಿಯ ಬಗ್ಗೆ ಮುಸಲ್ಮಾನ-ರಜಪೂತರ ನಡುವೆ ಆದ ಘೋರ ಯುದ್ಧವೂ, ಅಖಂಡ ರಕ್ತಪಾತವೂ, ಅಸಂಖ್ಯವಾದ ಕೊಲೆಯೂ ಎಲ್ಲ ಭಾರತೀಯರಿಗೆ ಗೊತ್ತಿರುತ್ತದಷ್ಟೇ. **ಅಕ್ಬರಬಾದಷಹ**ನು ಏನು ಕೊಟ್ಟರೂ ಅವನಿಗೆ **ಮೀರಾಬಾಯಿ**ಯ ಅಂಗುಷ್ಠವನ್ನಾದರೂ ನೋಡಗೊಡುವ ಸಂಭವವಿದ್ದಿಲ್ಲ. ಆದ್ದರಿಂದ **ಬಾದಷಹ**ನು ದಾನ-ದಂಡ-ಭೇದಗಳಿಂದ ಆಗದ ಕೆಲಸವನ್ನು



ಬೈರಾಗಿ ವೇಷ ಧರಿಸಿದ ಅಕ್ಬರನು

ಮೋಸದಿಂದ ಮಾಡಿಕೊಳ್ಳುವ ಎತ್ತುಗಡೆಮಾಡಿದನು. ಅವರಿಬ್ಬರು ಬೈರಾಗಿಯ ವೇಷವನ್ನು ಹಾಕಿಕೊಂಡು, ಸಂಗಡ ಯಾರನ್ನೂ ತೆಗೆದುಕೊಳ್ಳದೆ, "**ಜಯ ಕೃಷ್ಣ, ಜಯ ಸೀತಾರಾಮ**" ಎಂದು ಭಜನೆ ಮಾಡುತ್ತ **ಚಿತ್ತೂರಿ**ನ ಅಗಸೆಯನ್ನು ಹೊಕ್ಕರು. ಯಾರಿಗೂ ಏನೂ ಸಂಶಯಬಾರದ್ದರಿಂದ ಸುರಕ್ಷಿತವಾಗಿ ಒಂದು ಧರ್ಮಸಾಲೆಯಲ್ಲಿ ಉಳಿದರು. ಮುಂದೆ ದಿನಾಲು **ಮೀರಾಬಾಯಿ**ಯು ಭಜನೆಮಾಡುತ್ತಿರುವ ಶ್ರೀಕೃಷ್ಣನ ದೇವಾಲಯಕ್ಕೆ ಹೋಗಿ ತಾವು ಭಜನೆ ಮಾಡುತ್ತಿದ್ದು ಒಂದು ದಿನ ಭಜನೆ ಮುಗಿದ ಬಳಿಕ **ಬಾದಷಹ**ನು ಆಕೆಯ ಪಾದಕ್ಕೆರಗಿ ಭಕ್ತಿಪೂರ್ವಕವಾಗಿ ಒಂದು ವಜ್ರದ ಹಾರವನ್ನು ದೇವರಿಗೆ ಕೊಟ್ಟನು. ಅದನ್ನು ನೋಡಿ **ಮೀರಾಬಾಯಿ**ಯು ಬೆರಗಾಗಿ "ಬೈರಾಗಿಗಳ ಹತ್ತರ ಇಂತಹ ಅಮೌಲ್ಯವಾದ ಹಾರವಿರುವ ಬಗೆ ಎಂತು" ಎಂದು ಕೇಳಲು, **ಬಾದಷಹ**ನು "ಯಮುನಾನದಿಯಲ್ಲಿ ಸ್ನಾನ ಮಾಡಿ ಬರುವಾಗ ದಂಡೆಯ ಮೇಲೆ ಈ ಹಾರವು ಸಿಕ್ಕಿತು. ಆದ್ದರಿಂದ ಇದನ್ನು ದೇವರಿಗೆ ಕಾಣಿಕೆಯಾಗಿ ಅರ್ಪಿಸಿರುತ್ತೇನೆ. ದಯಮಾಡಿ ಸ್ವೀಕರಿಸಿ ಅನುಗ್ರಹಿಸಬೇಕು" ಎಂದು ಬೇಡಿಕೊಂಡನು. **ಮೀರಾಬಾಯಿ**ಯು ಅವನು ಹೇಳಿದ್ದು ನಿಜವೆಂದು ನಂಬಿ ಆ ಹಾರವನ್ನು ಸ್ವೀಕರಿಸಿದಳು.* ಈ ವಜ್ರ ಹಾರವೇ ವಿಷವೃಕ್ಷವಾಗಿ ಗಂಡಹೆಂಡಂದಿರನ್ನು ಅಗಲಿಸಿ **ಮೀರಾಬಾಯಿ**ಯನ್ನು **ವೃಂದಾವನ**ಕ್ಕೆ ಅಟ್ಟಿತು. ಬಳಿಕ ಕೆಲವು ವರ್ಷಗಳ ಬಳಿಕ ಮಹಾರಾಣನಿಗೆ ಪಶ್ಚಾತ್ತಾಪವಾಗಿ ಅವನು ಆಕೆಯ ಮನಸ್ಸೊಲಿಸಿ **ಚಿತ್ತೂರಿ**ಗೆ ಕರಕೊಂಡು ಹೋದನು. ಮುಂದೆ ಆಕೆಯು ಪ್ರತಿವರ್ಷ ೬ ತಿಂಗಳು **ವೃಂದಾವನ**ದಲ್ಲಿಯೂ, ೬ ತಿಂಗಳು **ಚಿತ್ತೂರಿ**ನಲ್ಲಿಯೂ ಕಳೆಯಲಾರಂಭಿಸಿದಳು.

೨ನೆಯ ಸಂಗತಿಯಾವದೆಂದರೆ **ಅಬುಲ್‌ಫಾಜಲ್ಲ**ನ ಸಹವಾಸವೂ, ಗೆಳೆತನವೂ. ಇವು ದೊರೆದ ಬಗೆಯು ಹೇಗಂದರೆ:—ಮಹಮ್ಮದೀಯರಲ್ಲಿ ೧೨ ಮಂದಿ **ಇಮಾಮ**ರಾಗುವರೆಂತಲೂ, ೧೨ನೆಯ **ಇಮಾಮ**ನಾದ

---

* ಈ ಕಥೆಯ ನಿಜತ್ವದ ಜಗ್ಗೆ ಕೆಲವರು ಆಕ್ಷೇಪ ತೆಗೆದುಕೊಳ್ಳುತ್ತಾರೆ. ಮೀರಾಬಾಯಿಯು ೧೪೧೯ರಿಂದ ೧೪೬೯ರ ವರೆಗೆ ಇದ್ದುದರಿಂದ ಅಕ್ಬರನು ಆಕೆಯನ್ನು ಕಾಣುವ ಸಂಭವವೇ ಇಲ್ಲೆಂದು ಜೇಮ್ಸ್ ಕಜಿನ್ಸ ಎಂಬವರು ಬರೆಯುತ್ತಾರೆ. ಇದು ನಿಜವಾದರೆ ಈ ದಂತ ಕಥೆಗೆ ಆಧಾರವೇನು? ಇದು ಬಹು ಜನ ಸಮ್ಮತವಾದರೂ ವಾದಗ್ರಸ್ತ ವಿಷಯವಾಗಿರುತ್ತದೆ.

**ಮಹದಿ**ಯು ಜಗತ್ತಿನಲ್ಲೆಲ್ಲ ಮುಸಲ್ಮಾನ ಧರ್ಮವನ್ನು ಬೆಳೆಸಿ, ಜನರಿಗೆಲ್ಲ ಸೌಖ್ಯವನ್ನುಂಟುಮಾಡುವನೆಂತಲೂ ಒಂದು ಪುರಾತನ ಭವಿಷ್ಯವಿತ್ತು. ಅದರಂತೆ **ಮಹಮ್ಮದ ಪೈಗಂಬರ**ನ ಅಳಿಯನಾದ **ಅಲ್ಲಿ**ಯು ಮೊದಲನೆಯ **ಇಮಾಮ**ನಾದನು. ಬಳಿಕ ಅವನ ಮಕ್ಕಳಾದ **ಹಸೇನ-ಹುಸೇನ**ರು ಎರಡನೆಯ ಮತ್ತು ಮೂರನೆಯ **ಇಮಾಮ**ರಾದರು. ಮುಂದೆ **ಹುಸೇನ**ನ ವಂಶದವರು ೯ ಮಂದಿ **ಇಮಾಮ**ರಾಗಿ ಹೋದರು. ೧೨ನೆಯವನಾದ **ಮಹದಿ**ಯು ಕೆಲವು ದಿವಸವಿದ್ದು ಅದೃಶ್ಯನಾಗಿದ್ದನು. ಅವನು ೧೫೯೧-೯೨ರಲ್ಲಿ ಪುನಃ ದೃಶ್ಯನಾಗಿ ಧರ್ಮಭ್ರಷ್ಟರನ್ನು ದಂಡಿಸಿ ಜನರ ಸುಖವನ್ನು ಹೆಚ್ಚಿಸುವನೆಂಬ ತಿಳಿವಳಿಕೆಯು ಮುಸಲ್ಮಾನರ ದೇಶಗಳಲ್ಲೆಲ್ಲ ಹಬ್ಬಿತ್ತು. ಈ ದೇಶದಲ್ಲಿದ್ದ ಮುಸಲ್ಮಾನರು ಈ **ಮಹದಿ**ಯ ಹಾದಿಯನ್ನೆ ನೋಡುತ್ತಿದ್ದರು. ಅವರು **ಉಲ್ಮೆ**ಯವರ ಸ್ವಾರ್ಥಬುದ್ಧಿಗೂ, ಅಧರ್ಮಾಚರಣೆಗೂ, ಅನ್ಯಾಯಕ್ಕೂ ಬೇಸತ್ತು, ಬೇಗನೆ **ಮಹದಿ**ಯನ್ನು ಕಳುಹೆಂದು ದೇವರನ್ನು ಪ್ರತಿನಿತ್ಯವೂ ಬೇಡಿಕೊಳ್ಳುತ್ತಿದ್ದರು.

೧೬ನೆಯ ಶತಮಾನದ ಮಧ್ಯಭಾಗದಲ್ಲಿ ಈ ದೇಶದೊಳಗೆ ಭಿನ್ನವಾದ ನಾಲ್ಕು ಧರ್ಮಗಳ ತತ್ವಗಳು ಹುರುಡಿಸುತಿದ್ದುವು. ಹಿಂದೂ-ಮುಸಲ್ಮಾನ ಧರ್ಮಗಳನಕಾ ಸರಿಯೇ ಸರಿ; ಇವುಗಳ ಹೊರತು **ಕಬೀರ ನಾನಕ**ರು* ಹಿಂದೂ-ಮುಸಲ್ಮಾನರನ್ನು ಒಟ್ಟುಗೂಡಿಸಲಿಕ್ಕೆ ಮಾಡಿದ ಎತ್ತುಗಡೆಯು ಬಹು ದಿವಸದಿಂದ ನಡೆಯುತ್ತಿತ್ತು. **ಪೋರ್ತುಗೀಸ**ರು **ಗೋವೆ**ಯನ್ನು ಹಿಡಿದುಕೊಂಡು (೧೫೧೦), ಕ್ರಿಸ್ತಧರ್ಮವನ್ನು ಈ ದೇಶದಲ್ಲಿ ಹಬ್ಬಿಸಲಿಕ್ಕೆ ಯತ್ನವನ್ನು ನಡಿಸಿದರು. ಇವಲ್ಲದೆ **ಇರಾನ್** ದೇಶದಲ್ಲಿ ನಡೆಯುತ್ತಿದ್ದ† **ಸುಫಿ** ಮತವು ಈ ದೇಶದಲ್ಲಿ ತಲೆದೋರುತ್ತಿತ್ತು. ಈ **ಸುಫಿ** ಮತದ ಗೃಹಸ್ಥರೇ **ಅಕ್ಬರ**ನ ಕಾಲದಲ್ಲಿ ಪ್ರಬಲರಾಗಿದ್ದುದರಿಂದ ಅವರ ವರ್ಣನೆಯನ್ನು ಕೆಳಗೆ ಸ್ವಲ್ಪ ಕೊಡುತ್ತೇವೆ.

---

* ಕಬೀರನ ವಿಷಯವಾಗಿ "ಭರತಖಂಡದ ಧರ್ಮಸ್ಥಾಪಕರೂ, ಧರ್ಮಸುಧಾರಕರೂ" ಪುಟ ೫೩-೬೨ ನೋಡಿರಿ. ನಾನಕನು ೧೪೬೯ರಲ್ಲಿ ಹುಟ್ಟಿ ೧೫೩೯ರಲ್ಲಿ ಸ್ವರ್ಗಸ್ಥನಾದನು. ಇವನೇ ಸೀಕರ ಮೊದಲನೆಯ ಗುರುವು: ಇವನು ಬರೆದ ಆದಿಗ್ರಂಥವೇ ಸೀಕರ ಧರ್ಮಪುಸ್ತಕವು.

† ಸುಫಿ ಧರ್ಮದವರು ಅಗ್ನಿ-ಸೂರ್ಯರನ್ನು ಮುಖ್ಯ ದೇವರೆಂದು ಆರಾಧಿಸುತ್ತಾರೆ.

ರಾಜಸ್ಥಾನದಲ್ಲಿದ್ದ **ನಗರ**(೯೬)ವೆಂಬ ಗ್ರಾಮದಲ್ಲಿ **ಸೇಖಮು ಬಾರಕ**ನೆಂಬೊಬ್ಬ ಮುಸಲ್ಮಾನಗೃಹಸ್ಥನಿದ್ದನು. ಇವನ ಪೂರ್ವಜರು '**ಅರಬಸ್ಥಾನ**ದಿಂದ ಈ ದೇಶಕ್ಕೆ ಬಂದಿದ್ದರು. ಇವನು ಚಿಕ್ಕಂದಿನಲ್ಲಿ ಮುಸ ಲ್ಮಾನ ಧರ್ಮದ ಎಲ್ಲ ಗ್ರಂಥಗಳನ್ನೋದಿ, ತನ್ನ ಜ್ಞಾನಭಾಂಡಾಗಾರವನ್ನು ಹೆಚ್ಚಿಸಲಿಕ್ಕೆ ಈ ದೇಶದ ಬೇರೆ ಬೇರೆ ಭಾಗಗಳಿಗೂ **ಇರಾನ್, ತಿಬೇಟ್** ಮುಂತಾದ ದೇಶಗಳಿಗೂ ಹೋಗಿಬಂದನು. ಇವನು ಬಹು ದಿವಸ ವಿಚಾರಮಾಡಿ, **ಸುಫಿ** ಧರ್ಮವೇ ಉತ್ತಮವಾದುದೆಂದು ಎಣಿಸಿ ಅದನ್ನು ಸ್ವೀಕರಿಸಿದನು. ಆ ಕಾಲದಲ್ಲಿ ಇದ್ದ ಮುಸಲ್ಮಾನರ ಅರಸರು ಸ್ವಜಾತೀಯ ಪಂಡಿತರಿಗೆ ಭೂಮಿಯನ್ನು ಉಂಬಳಿಹಾಕಿಕೊಡುತ್ತಿದ್ದಂತೆ ಇವನಿಗೂ ಕೊಟ್ಟಿದ್ದರು.

**ಸೇಖಮುಬಾರಕ**ನು ಮದುವೆಮಾಡಿಕೊಂಡಿದ್ದನು. ಅವನಿಗೆ **ಅಬುಲ್‌ಫಾಯಿಜಿ, ಅಬುಲ್‌ಫಾಜಲ್** ಎಂಬಿಬ್ಬರು ಗಂಡುಮಕ್ಕಳಿ ದ್ದರು. **ಸೇಖಮುಬಾರಕ**ನು **ಸುಫಿ** ಧರ್ಮವನ್ನುಪದೇಶಿಸುತ್ತಿದ್ದು ದರಿಂದ **ಸುನ್ನಿ** ಮತದ ಅಧಿಕಾರಿಗಳ ಹಗೆತನಕ್ಕೆ ಗುರಿಯಾದನು. ಅವರು ಅವನಿಗೆ ಯಾವಾಗಲೂ ತೊಂದರೆಕೊಡುತ್ತಿದ್ದರು; ಅವನ ಸಂಬಂಧವಾಗಿ ಸುಳ್ಳು ಸುಳ್ಳು ಕಾಗದಗಳನ್ನು ಬರೆಯುತ್ತಿದ್ದರು. ಹೀಗಿರುತ್ತಾ ಒಂದು ದಿನ ಅವರು ಅವನ ಮೇಲೆ ದೊಡ್ಡದೊಂದು ಅಪರಾಧವನ್ನು ಹೊರಿಸಿದು ದರಿಂದ, ಅವನು **ನಗರ**ವನ್ನು ಬಿಟ್ಟು ಓಡಿಹೋದನು. ಬಳಿಕ ಅಧಿಕಾರಿ ಗಳು ಸರಕಾರದಿಂದ ಅವನಿಗೆ ಕೊಟ್ಟಿದ್ದ ಹೊಲಗಳನ್ನು ಮುಟ್ಟುಗೋಲು ತೆಗೆದುಕೊಂಡರು.

**ಸೇಖಮುಬಾರಕ**ನ ಹಿರಿಯ ಮಗನಾದ **ಅಬುಲ್‌ಫಾಯಿಜಿ**ಯು ತನ್ನ ತಂದೆಯಂತೆ **ಸುಫಿ** ಧರ್ಮವನ್ನು ಅನುಸರಿಸುತ್ತಿದ್ದನು. ಇವನು ಕವಿಯೂ ವೈದ್ಯನೂ ಆಗಿದ್ದುದಲ್ಲದೆ, ಪರೋಪಕಾರಕ್ಕೆ ಹೆಸರುವಾಸಿಯಾಗಿ ದ್ದನು. ಇವನು ಹಣ ತೆಗೆದುಕೊಳ್ಳದೆ ಬಡವರಿಗೆ ಮದ್ದು ಕೊಡುತ್ತಿದ್ದನು, ಇಷ್ಟೇ ಅಲ್ಲ, ರೋಗಿಗಳ ಮನೆಗೆ ಹೋಗಿ ಅವರಿಗೆ ಉಪಚಾರವನ್ನೂ

ಮಾಡುತ್ತಿದ್ದನು.* ಆದಕಾರಣ ಜನರಲ್ಲಿ ಅವನ ಮುರವೊತ್ತು† ಹೆಚ್ಚಾಗಿತ್ತು.

ತನ್ನ ತಂದೆಯು ಓಡಿಹೋದ ಕೆಲವು ದಿವಸಗಳ ಬಳಿಕ **ಅಬುಲ್ ಫಾಯಿಜಿ**ಯು ಸರಕಾರದವರು ತೆಗೆದುಕೊಂಡ ಹೊಲಗಳನ್ನು ತಿರುಗಿ ತನಗೆ ಕೊಡಬೇಕೆಂದು, ಆ ಊರಿನ ಅಧಿಕಾರಿಯಾದ **ಕಾದರ**ನ ಬಳಿಗೆ ಹೋದನು. ಆ **ಕಾದರ**ನು **ಸುನ್ನಿ** ಮತದವನಾದುದರಿಂದ ಇವನನ್ನು ಜುಟ್ಟು ಹಿಡಿದು ನೂಕಿಸಿ, ಹೊರಗೆ ತಳ್ಳಿಸಿ, ಆವೂರಲ್ಲಿರಗೊಡಬಾರದೆಂದು **ಬಾದಷಹ**ನಿಗೆ ಬರೆದನು. **ಅಕ್ಬರ**ನು "ಎತ್ತು ಈಯಿತೆಂದ ಕೂಡಲೆ ಕೊಟ್ಟಗೆಯಲ್ಲಿ ಕಟ್ಟಿಸು" ಎಂದು ಹುಕುಮು ಕೊಡುವ **ಬಾದಷಹ**ನಲ್ಲದುದರಿಂದ ತನ್ನ ಅಧಿಕಾರಿಯು ಬರೆಹವನ್ನು ನೆರೆನಂಬದೆ ತಥ್ಯಾಂಶವನ್ನು ಹುಡುಕಿ ಕಂಡುಹಿಡಿಯಬೇಕೆಂಬ ಉದ್ದೇಶದಿಂದ ಆ ಅಧಿಕಾರಿಗೆ **ಅಬುಲ್ ಫಾಯಿಜಿ**ಯನ್ನು ತನ್ನೆಡೆಗೆ ಕಳುಹಬೇಕೆಂದು ಬರೆದನು. ಆಗ ಆ ದುಷ್ಟಾಧಿಕಾರಿಯು ತನ್ನ ಉದ್ದೇಶವು ಸಫಲವಾಯಿತೆಂದೆಣಿಸಿ, ಬಹಳ ಹಿಗ್ಗಿ, ಕೂಡಲೆ ಅವನನ್ನು **ಬಾದಷಹ**ನ ಬಳಿಗೆ ಅಟ್ಟಿದನು.

ಆ ಕಾಲದಲ್ಲಿ **ಬಾದಷಹ**ನು **ಚಿತ್ತೂರ**ನ್ನು ಮುತ್ತಿ, ಅಲ್ಲಿ ಪಾಳೆಯ ಹಾಕಿಕೊಂಡಿದ್ದನು. ಅವನು **ಅಬುಲ್ ಫಾಯಿಜಿ**ಯು ಬಂದ ಕೂಡಲೆ ಅವನನ್ನು ಸತ್ಕರಿಸಿ, ಅವನ ವಿದ್ಯೆಗೂ, ಜಾಣತನಕ್ಕೂ ಮೆಚ್ಚಿ, ಅವನ ಭೂಮಿಯನ್ನು ಅವನಿಗೆ ಕೊಡಿಸಿದುದಲ್ಲದೆ, ಅವನನ್ನು ತನ್ನ ಬಳಿಯಲ್ಲಿರಿಸಿಕೊಂಡು, ತನ್ನ ಮಕ್ಕಳಿಗೆ ವಿದ್ಯಾಬುದ್ಧಿಯನ್ನು ಕಲಿಸುವುದಕ್ಕೆ ಹೇಳಿದನು. ಮುಂದೆ **ಅಬುಲ್ ಫಾಯಿಜಿ**ಯು **ಬಾದಷಹ**ನ ಆಸ್ಥಾನ ಕವಿಯಾದನು (೧೫೮೦). ಆದರೆ ದುರ್ದೈವದಿಂದ ಅವನು ಬಹು ದಿವಸ ಬದುಕಲಿಲ್ಲ. ಅವನು ಒಟ್ಟು ೧೦೭ ಗ್ರಂಥಗಳನ್ನು ಬರೆದು ಸತ್ತನು (೧೫೮೭). ಅವನ ಪುಸ್ತಕಾಲಯದಲ್ಲಿ ೪,೩೦೦ ಗ್ರಂಥಗಳಿದ್ದುವು.

---

* ಸ್ವಾರ್ಥವ ಬಿಟ್ಟು ಲೋಕದೆ ಪರಾರ್ಥವ ಮಾಳ್ಪವರುತ್ತಮರ್ ಕರಂ |
ಸ್ವಾರ್ಥಕೆ ಹಾನಿಗೆಯ್ಯದೆ ಪರಾರ್ಥಕೆ ಯತ್ನಿಪರಲ್ತೆ ಮಧ್ಯಮರ್ ||
ಸ್ವಾರ್ಥಕೆ ತಾಂ ಪರಾರ್ಥವ ವಿಘಾತಿಸುವರ್ ನರರಾಕ್ಷಸರ್ ಗಡಾ |
ಸ್ವಾರ್ಥಮುಮಿಲ್ಲದಕ್ಕಟ ಪರಾರ್ಥವ ಕೀಳ್ವರನೇನನೆಂದಪೆಂ || (ಬ. ನೀತಿಶತಕ.)

† ಪ್ರಭಾವ.

**ಅಬುಲ್‌ಫಾಯಿಜಿ**ಗಿಂತ ಅವನ ತಮ್ಮನಾದ **ಅಬುಲ್‌ಫಾಜಲ್ಲ**ನು **ಅಕ್ಬರಬಾದಷಹ**ನ ದರಬಾರಿನಲ್ಲಿ ಹೆಚ್ಚು ಹೆಸರುವಾಸಿಯಾದನು. ಇವನು ತನ್ನ ಅಪ್ಪ, ಅಣ್ಣಂದಿರಂತೆ **ಸುಫಿ** ಧರ್ಮಕ್ಕೆ ಸೇರಿದ್ದನು. ಇವನು ಚಿಕ್ಕಂದಿನಲ್ಲೇ ಆ ಕಾಲದಲ್ಲಿ ಹೆಸರಾಗಿದ್ದ ಬಹುಶಃ ಎಲ್ಲಾ ಗ್ರಂಥಗಳನ್ನೋದಿ ಓದಾಳಿಯೆಂದು ಹೆಸರುವಾಸಿಯನ್ನು ಹೊಂದಿದ್ದನು. ಇವನ ಜಾಣ್ಮೆಗೆ ಸಂಬಂಧಿಸಿದ ಒಂದು ದೃಷ್ಟಾಂತವುಂಟು. ಇವನು ೧೮, ೨೦ ವರುಷದವನಾಗಿದ್ದಾಗ ಇವನಿಗೆ ಒಂದು **ಇಸ್ಪಹಾನಿ**ಯೆಂಬ ಹರಕು ಗ್ರಂಥವು ದೊರೆಯಿತು. ಆಗ ಇವನು ತನ್ನ ಬುದ್ಧಿಕಲ್ಪನೆಯಿಂದ ಅದರ ಹರಿದುಹೋದ ಭಾಗವನ್ನೆಲ್ಲ ಬರೆದನು. ಮುಂದೆ ಕೆಲವು ದಿವಸಗಳ ಬಳಿಕ ಅದೇ ಪುಸ್ತಕದ ಪೂರ್ಣವಾದ ಪ್ರತಿಯು ದೊರೆಯಿತು. ಆಗ ಇವನು ಬರೆದುದೂ ಮೂಲಗ್ರಂಥದಲ್ಲಿದ್ದುದೂ ಎಷ್ಟೋ ಕಡೆಯಲ್ಲಿ ಸರಿಹೋಯಿತು. ಅದನ್ನು ನೋಡಿ ಎಲ್ಲರೂ ಆಶ್ಚರ್ಯಪಟ್ಟರು. ಇವನ ಕೀರ್ತಿಯು ಎಲ್ಲೆಲ್ಲಿಯೂ ಹಬ್ಬಿತು.

**ಅಬುಲ್‌ಫಾಜಲ್ಲ**ನಿಗೆ ಪಾರ್ಸಿಭಾಷೆಯಲ್ಲಿದ್ದ ಗ್ರಂಥಗಳಿಂದ ಸಂತೋಷವಾಗಲಿಲ್ಲ. ಆದುದರಿಂದ ಅವನು ಹಿಂದೂ ಬೌದ್ಧ ಧರ್ಮಗಳ ಪುಸ್ತಕಗಳಲ್ಲಿದ್ದುದನ್ನು ತಿಳಿದುಕೊಳ್ಳಲಿಕ್ಕೆ ಹಂಬಲಿಸುತ್ತಿದ್ದನು. ಅವನು ಜ್ಞಾನಮಾರ್ಗವನ್ನು ಹಿಡಿದು, ಐಹಿಕಸುಖವನ್ನು ಜರಿಯುತ್ತಿದ್ದನು. ಅಷ್ಟರಲ್ಲಿ **ಅಕ್ಬರ**ನು ಅವನನ್ನು ತನ್ನ ದರಬಾರಿಗೆ ಎರಡು ಸಾರಿ ಕರೆ ಕಳುಹಿದನು. ಆದರೆ ಅವನು ಬರುವುದಕ್ಕೆ ಒಡಂಬಡಲಿಲ್ಲ. ಮುಂದೆ ಕೆಲವು ವರುಷಗಳು ಹೋದ ಮೇಲೆ ಅವನ ಅಣ್ಣನಾದ **ಅಬುಲ್‌ಫಾಯಿಜಿ**ಯ ಮಧ್ಯಸ್ಥತೆಯಿಂದ ಅವನು ದರಬಾರಿಗೆ ಬಂದನು (೧೫೭೪). **ಬಾದಷಹ**ನು ಅವನ ವಿಚಾರಕ್ಕೂ ಜಾಣ್ಮೆಗೂ ಮೆಚ್ಚಿ ಮರುಳಾದನು. ಅವರವರಿಗೆ ನಿಜವಾದ ಸ್ನೇಹವು ಬೆಳೆಯಿತು.* ಮುಂದೆ **ಬಾದಷಹ**ನು

---

* ದುರಿತದ ಕೃತ್ಯದಿಂ ತೊಲಗಿಸಲ್ ಹಿತಕಾರ್ಯದೆ ಯೋಜಿಸಲ್ಗಣೋ|
ತ್ಕರವ ವಿಕಾಸಿಸಲ್ಮಱೆಸ ತಕ್ಕುದ ತಾಂ ಮಱೆಸಲ್ವಿಪತ್ತಿನೊಳ್||
ಪೊರೆಯುಲುಮಿಾಯುಲುಂ ಸಮಯದೊಳ್ನೆಱೆದಿರ್ದಪನಾವನಾ ಮಹಾ|
ಪುರುಷನೆ ಮಿತ್ರನೆಂದುಸುರ್ದಪರ್ ನಯಶಾಸ್ತ್ರ ಬಲ್ಲವ ಸಜ್ಜನರ್

ಬ. ನೀತಿಶತಕ.

ಎಲ್ಲಾ ಕೆಲಸಗಳಲ್ಲಿಯೂ **ಅಬುಲ್‌ಫಾಜಲ್ಲ**ನ ಆಲೋಚನೆಯನ್ನು ಕೇಳ ತೊಡಗಿದನು.

**ಅಕ್ಬರ**ನು ಪಟ್ಟವೇರಿದ ಮೊದಲು ೨೫ ವರುಷಗಳ ವರೆಗೆ ಬೇರೆ ಬೇರೆ ನಾಡುಗಳನ್ನು ಗೆಲ್ಲುವುದರಲ್ಲೇ ತೊಡಗಿದನು. ಮುಂದೆ ಅವನಿಗೆ ಸ್ವಲ್ಪ ಸ್ವಾಸ್ಥ್ಯವು ದೊರೆಯಿತು. ಆ ಕಾಲದಲ್ಲಿ ಮುಸಲ್ಮಾನರು ಅವನಿಗೆ ಹಿಂದೂ ಜನರನ್ನು ಪೀಡಿಸಲಿಕ್ಕೂ ಮುಸಲ್ಮಾನ ಧರ್ಮವನ್ನು ಬೆಳೆಯಿಸ ಲಿಕ್ಕೂ ಆಗಾಗ ಬಲಾತ್ಕಾರ ಪಡಿಸುತ್ತಿದ್ದರು. ಅವನು ಅವರ ಹೇಳಿಕೆಗೆ ಕಿವಿಗೊಡದಿದ್ದರೂ ಕಾಲಾನುಸಾರವಾಗಿ ಅವರ ಮಾತಿನಂತೆ ನಡೆಯುವ ಸಂಭವವಿತ್ತು. ಆದರೆ ಅಷ್ಟರಲ್ಲಿ ಹಿಂದೂಜನರ ಸುದೈವದಿಂದಲೋ, ಮೊಗಲರ ಸಾಮ್ರಾಜ್ಯದ ಭಾಗ್ಯದಿಂದಲೋ, ಅವನು **ಅಬುಲ್‌ಫಾಜಲ್ಲ**ನ ಸ್ನೇಹ ಮಾಡಿದನು. **ಅಬುಲ್‌ಫಾಜಲ್ಲ**ನು ಮುಸಲ್ಮಾನ ಧರ್ಮವೆಂಬ ಮದಗಜಕ್ಕೆ ಅಂಕುಶದಂತೆ ಇದ್ದನು. ಇವನು ಧರ್ಮಾಭಿಮಾನದಿಂದ ಬೇರೆ ಧರ್ಮದವರನ್ನು ಹಿಂಸೆಪಡಿಸುವದು, ತಿಳಿಗೇಡಿತನದ ಪರಮಾವಧಿ ಯೆಂದು ತಿಳಿಯುತ್ತಿದ್ದನು. ಆಗಿನ ಧರ್ಮಾಭಿಮಾನಿಗಳಾದ ಮುಸ ಲ್ಮಾನರು ಅವಿಚಾರಿಗಳಾಗಿರುತ್ತಾರೆಂದು **ಬಾದಷಹ**ನಿಗೆ ಯುಕ್ತಿಯಿಂದ ತೋರಿಸಿ, ಎಲ್ಲಾ ಪ್ರಜೆಗಳನ್ನು ಸರಿಯಾಗಿ ನೋಡಿಕೊಳ್ಳಬೇಕೆಂದು ಪ್ರೇರಿಸಿದುದೇ **ಅಬುಲ್‌ಫಾಜಲ್ಲ**ನು ಮಾಡಿದ ಮಹತ್ಕಾರ್ಯವೆನ್ನಲಿಕ್ಕೆ ಏನೂ ಸಂಶಯವಿಲ್ಲ.

**ಫತ್ತೇಪುರ ಸಿಕ್ರಿ**ಯ ಅರಮನೆಯ **ಇಬಾದತ್ ಖಾನೆ**ಯಲ್ಲಿ ಪ್ರತಿ ಗುರುವಾರ ಸಾಯಂಕಾಲದಲ್ಲಿ **ಬಾದಷಹ**ನ ಮುಂದೆ, **ಅಬುಲ್ ಫಾಜಲ್ಲ**ನಿಗೂ ಮುಸಲ್ಮಾನ ಪಂಡಿತರಿಗೂ ಧರ್ಮಸಂಬಂಧವಾದ ವಾದ ವಿವಾದವಾಗುತ್ತಿತ್ತು. ಮುಸಲ್ಮಾನ ಪಂಡಿತರೊಳಗೇ **ಕುರಾನಿ**ನ ಅರ್ಥ ವಿಷಯದಲ್ಲಿ ಮತಭೇದವಿತ್ತು. ನಾಲ್ಕು ಜನರಿಗಿಂತ ಹೆಚ್ಚು ಮಂದಿ ಹೆಂಡತಿಯರನ್ನು ಮಾಡಿಕೊಳ್ಳುವದು ಸರಿಯಲ್ಲವೆಂದು **ಸುನ್ನಿ** ಮತದವರ ಅಭಿಪ್ರಾಯವಿದೆ.* ಆದರೆ **ಸಿಯಾ** ಮತದವರು ಈ ನಿಯಮಕ್ಕೆ

* ಜಾರ್ಜ್‌ಸೇಲ್ ಸಾಹೇಬರು ಮಾಡಿದ ಕುರಾನಿನ ಇಂಗ್ಲಿಷ ಭಾಷಾಂತರ ಪುಟ ೭೧೮ ಅಡಿಟಿಪ್ಪಣವನ್ನು ನೋಡಿರಿ.

ಒಡಂಬಡುತ್ತಿರಲಿಲ್ಲ. ಒಂದು ದಿನ ಗುರುವಾರದ ಸಭೆಯಲ್ಲಿ **ಅಬುಲ್ ಫಾಜಲ್ಲ**ನು ಈ ವಿಷಯುವನ್ನು ವಿವಾದಕ್ಕೆ ತಂದನು. **ಬಾದಷ**ಹನು ನಾಲ್ವರಿಗಿಂತ ಹೆಚ್ಚಾಗಿ ಹೆಂಡತಿಯರನ್ನು ಮದುವೆಮಾಡಿಕೊಂಡಿರುವುದರಿಂದ* ಮುಸಲ್ಮಾನರಿಗೆ ಕಷ್ಟ ಬಂತು. ಕಡೆಗೆ ಈ ವಿಷಯದಲ್ಲಿ **ಸುನ್ನಿ**ಗಳೊಳಗೇ ಮತಭೇದವಾಯಿತು. ಹೀಗೆಯೇ ಅನೇಕ ಪ್ರಶ್ನೆಗಳ ವಿಷಯದಲ್ಲಿ ಒಬ್ಬ ಪಂಡಿತನ ಅಭಿಪ್ರಾಯವು ಮತ್ತೊಬ್ಬನ ಅಭಿಪ್ರಾಯಕ್ಕೆ ಒಡಂಬಡದಂತೆ ಆಯಿತು. ಒಂದು ದಿನ ಸಂಧಿಯನ್ನು ಸಾಧಿಸಿ **ಅಬುಲ್ ಫಾಜಲ್ಲ**ನು ಒಂದು ಬಹಳ ಗೌರವದ ವಿಷಯುವನ್ನು ವಾದ ವಿವಾದಕ್ಕೆ ತಂದನು. ಅದು ಯಾವುದೆಂದರೆ:—"**ಕುರಾನೂ** ಅದರ ಟೀಕುಗಳೂ ಎಷ್ಟೋ ವಿಷಯುಗಳನ್ನು ಸ್ಪಷ್ಟವಾಗಿ ಹೇಳುವುದಿಲ್ಲ; ಅಭಿಪ್ರಾಯುಗಳು ಒಂದಕ್ಕೊಂದು ಭಿನ್ನವಾಗಿರುತ್ತವೆ. ಇದಲ್ಲದೆ ಎಷ್ಟೋ ಪ್ರಶ್ನೆಗಳನ್ನು ಕುರಿತು ಪಂಡಿತರೆಂದೆನಿಸಿ† ಕೊಳ್ಳುವ **ಉಲ್ಮೆ**ಯುವರ ಅಭಿಪ್ರಾಯುಗಳು ಭಿನ್ನವಾಗಿ ಇರುತ್ತವೆ. ಆದುದರಿಂದ ಇಂತಹ ವಾದಗ್ರಸ್ತ ವಿಷಯುಗಳಲ್ಲಿ **ಬಾದಷ**ಹನ ತೀರ್ಪನ್ನೇ ಸರ್ವರೂ ಮಾನ್ಯಮಾಡಬೇಕು."

---

* ಅಕ್ಬರನಿಗೆ ೮-೧೦ ಮಂದಿ ಹೆಂಡಂದಿರಿದ್ದರು. ಮೊದಲನೆಯುವಳು ಅವನ ಕಕ್ಕನಾದ (ಚಿಕ್ಕಪ್ಪನಾದ) ಹಿಂಡಾಲ ಮಿರ್ಜನ ಮಗಳು; ಈಕೆಯು ಬಂಜೆಯಾಗಿದ್ದಳು. ಎರಡನೆಯುವಳು ಅವನ ಸೋದರತ್ತೆಯ ಮಗಳಾಗಿದ್ದಳು. ಈಕೆಯು ಮುಖಫಿಯೆಂಬ ಕಾವ್ಯವನ್ನು ಬರೆದಳು. ಮೂರನೆಯ ಹೆಂಡತಿಯು ರಾಜಾ ಭಗವಾನ್‌ದಾಸನ ತಂಗಿಯಾಗಿದ್ದಳು; ಅಕ್ಬರನು ಈಕೆಯನ್ನು ೧೫೬೦ರಲ್ಲಿ ಮದುವೆಮಾಡಿಕೊಂಡನು. ಅಕ್ಬರನ ನಾಲ್ಕನೆಯ ಹೆಂಡತಿಯು ಬಲುಚೆಲುವೆಯಾಗಿದ್ದಳು; ಈಕೆಯು ಮೊದಲು ಅಬ್ದುಲ್‌ವಾಸಿ ಯೆಂಬವನನ್ನು ಮದುವೆಯಾಗಿದ್ದಳು. ೫ನೆಯ ಹೆಂಡತಿಯಾದ ಜೋಧಬಾಯಿಯಿಂದ ಸೆಲೀಮನು ಹುಟ್ಟಿದನು. ೬ನೆಯ ೭ನೆಯ ಮತ್ತು ೮ನೆಯ ಹೆಂಡಂದಿರು ಮುಸಲ್ಮಾನರಾಗಿದ್ದರು. ೯ನೆಯ ಹೆಂಡತಿಯು ಕ್ರಿಸ್ತಮತದವಳಾದ ಮೇರಿಯೆಂಬವಳೆಂದು ಕೆಲವರು ಹೇಳುವರು. ಆರಂಭದಲ್ಲಿ ಮುಸಲ್ಮಾನರಲ್ಲದ ಹೆಂಡಂದಿರು ಅರಮನೆಯನ್ನು ಹೋಗುವದಕ್ಕಿಂತ ಮೊದಲು "ದೇವರು ಒಬ್ಬನೇ ಇರುತ್ತಾನೆ ಮತ್ತು ಮಹಮ್ಮದನು ಅವನ ಭವಿಷ್ಯವಾದಿಯು" ಎಂದೆನ್ನಬೇಕಾಗುತ್ತಿದ್ದರೂ, ಮುಂದೆ ಬಾದಷಹನು ಅವರಿಗೆ ತಮ್ಮ ತಮ್ಮ ದೇವರನ್ನು ಪೂಜಿಸಲು ಅವಕಾಶ ಕೊಡುತ್ತಿದ್ದನು.

† ಇಂತು ಉಲ್ಮೆಯುವರಧಿಕಾರವು ಮುರಿದುಹೋದ ಬಳಿಕ ಬಾದಷಹನು ಉಲ್ಮೆಯ ಮುಖ್ಯಸ್ಥನನ್ನೂ ಮುಖ್ಯ ನ್ಯಾಯಾಧೀಶನನ್ನೂ ಮಕ್ಕಾ ಯಾತ್ರೆಗೆ ಕಳುಹಿದನೆಂದು ಟಾಲ್ಬಾಯ್ಸ್ ಹ್ವೀಲರ್ ಸಾಹೇಬರು ಬರೆಯುತ್ತಾರೆ.

**ಅಬುಲ್‌ಫಾಜಲ್ಲ**ನು ಈ ವಿಷಯವನ್ನು ಹೇಳಿದ ಕೂಡಲೆ, ಉಲ್ಮೆಯವರೆಲ್ಲರೂ ಹೆದರಿದರು. ಒಬ್ಬನು ಮತ್ತೊಬ್ಬನ ಮೋರೆಯನ್ನು ನೋಡತೊಡಗಿದನು. ಏನು ಉತ್ತರ ಕೊಡಬೇಕೆಂಬುದು ಅವರಿಗೆ ಹೊಳೆಯದೆ ಹೋಯಿತು. ಅವರು ಸಂಸಾರಿಗಳಾದುದರಿಂದ ತಮ್ಮ ಧರ್ಮಾಭಿಮಾನವನ್ನು ಕೆಲಮಟ್ಟಿಗೆ ಬಿಡಲೆಳಸಿದರು. ಇದಲ್ಲದೆ ಅವರು **ಬಾದಷಹ**ನ ಕಯ್ಕೆಳಗೆ ನ್ಯಾಯಾಧೀಶರೂ ಉಪನ್ಯಾಯಾಧೀಶರೂ ಆಗಿದ್ದರು. **ಬಾದಷಹ**ನಿಗೆ ವಿರುದ್ಧವಾದ ಅಭಿಪ್ರಾಯವನ್ನು ಕೊಟ್ಟರೆ ಅವರ ಅನ್ನಕ್ಕೆ ಕಲ್ಲು ಬೀಳುವ ಸಂಭವವಿತ್ತು. ಆದಕಾರಣ ಅವರು ಹೇಗೆಮಾಡಬೇಕೆಂಬ ವಿಚಾರದಲ್ಲಿ ಮುಳುಗಿದರು. ಎಷ್ಟೋ ದಿವಸ ಈ ವಿಷಯವಾಗಿ ಚರ್ಚೆಯಾಗಿ, ಕಟ್ಟಕಡೆಗೆ ಒಬ್ಬಿಬ್ಬರ ಹೊರತು ಉಳಿದವರೆಲ್ಲರು **ಬಾದಷಹ**ನೇ ಧರ್ಮದ ಮುಖ್ಯಸ್ಥನೆಂದು ಒಡಂಬಟ್ಟರು. ಗಾಳಿ ಬೀಸಿದಾಗ ತೂರಿಕೊಳ್ಳಬೇಕೆಂಬ ಗಾದೆಯಂತೆ **ಅಬುಲ್‌ಫಾಜಲ್ಲ**ನು ಆ ಕ್ಷಣವೇ ಒಂದು ಲೇಖನವನ್ನು ಬರಿಸಿ, ಅದಕ್ಕೆಲ್ಲರ ರುಜುವನ್ನು ಮಾಡಿಸಿದನು.

ಈ ಮೇರೆಗೆ **ಅಬುಲ್‌ಫಾಜಲ್ಲ**ನು ಮದ್ದಿಲ್ಲದೆ ಮುಸಲ್ಮಾನರ ಧರ್ಮದ್ವೇಷವೆಂಬ ಕೆಟ್ಟ ರೋಗವನ್ನು ಹೋಗಲಾಡಿಸಿದನು. ಇದಕ್ಕೆ ಈ ದೇಶದ ಮುಸಲ್ಮಾನರ **ಧರ್ಮಕ್ರಾಂತಿ** ಎನ್ನಲಿಕ್ಕೆ ಅಡ್ಡಿಯಿಲ್ಲ. ಇಂತಹ ದೊಡ್ಡ ಹೆಚ್ಚುಕಡಿಮೆಯನ್ನು ಇಷ್ಟು ಸುಲಭವಾಗಿ ಮಾಡಿದುದು **ಅಕ್ಬರ, ಅಬುಲ್‌ಫಾಜಲ್ಲ**ರ ಜಾಣ್ಮೆಯ ಫಲವೇ ಸರಿ. **ಧರ್ಮಕ್ರಾಂತಿ**ಯು ಇಷ್ಟು ನಿರಾಯಾಸವಾಗಿ ಆದ ಉದಾಹರಣೆಗಳು ಇತಿಹಾಸದಲ್ಲಿ ದೊರೆಯುವದು ಅಪೂರ್ವವೇ ಸರಿ.*

---

* ೧೬ನೆಯ ಶತಮಾನದಲ್ಲೇ ವಿಲಾಯತಿಯಲ್ಲೂ ಧರ್ಮಕ್ರಾಂತಿಯು ನಡೆಯಿತು. ಇಂಗ್ಲಂಡಿನ ಅರಸನಾದ ೮ನೆಯ ಹೆನ್ರಿಯು (೧೫೦೯-೪೭) ಯುರೋಪಖಂಡದ ಮುಖ್ಯ ಧರ್ಮ ಗುರುವಾದ ಪೋಪನೊಡನೆ ಜಗಳವಾಡಿ, ತನ್ನ ರಾಜ್ಯದಲ್ಲಿ ತಾನೇ ಧರ್ಮಮುಖ್ಯಸ್ಥನೆಂದು ಸಾರಿ, ಎಷ್ಟೋ ಮಠಗಳನ್ನು ಸುಲಿದು, ಧರ್ಮಬೋಧಕರನ್ನು ಪರಿಪರಿಯಿಂದ ಹಿಂಸೆಪಡಿಸಿದನು. ಅವನ ಮಗನಾದ ೬ನೆಯ ಎಡ್ವರ್ಡನು (೧೫೪೭-೫೩) ವಿರುದ್ಧ (ಪ್ರೊಟೆಸ್ಟೆಂಟ) ಮತವನ್ನು ನೆಲೆಗೊಳಿಸಲು ಎತ್ತುಗಡೆ ಮಾಡಿದನು. ಮುಂದೆ ಈ ಎಡ್ವರ್ಡನ ಅಕ್ಕನಾದ ಮೇರಿಯು ಪಟ್ಟವೇರಿ, ಕ್ಯಾಥೊಲಿಕ್ ಮತದವರ ಪಕ್ಷಹಿಡಿದು, ವಿರುದ್ಧ ಮತದವರನ್ನು ಹಿಂಸೆಪಡಿಸಿದಳು. ಹೀಗೆ ಇಂಗ್ಲಂಡಿನಲ್ಲಿ ಧರ್ಮಸಂಬಂಧವಾದ ಬಡಿದಾಟವು ೩ನೆಯ ವಿಲಿಯಮ್ಮನು (೧೬೮೯-೧೭೦೨) ಪಟ್ಟವೇರುವವರೆಗೆ ನಡೆಯಿತು (ಚರಿತ್ರ ಸಂಗ್ರಹ ೨ನೆಯ ಭಾಗ ಪುಟ ೧೬-೨೮ ನೋಡಿರಿ.

ಇಷ್ಟರಿಂದಲೇ **ಅಬುಲ್‌ಫಾಜಲ್ಲ**ನು ಸಂತುಷ್ಟನಾಗಲಿಲ್ಲ. ಮುಂದೆ ಭುತ್ತೊಂದು ದಿನ **ಇಬಾದತ್ ಖಾನೆ**ಯಲ್ಲಿ ಎಲ್ಲ ಜನರು ಕೂಡಿದಾಗ **ಅಕ್ಬರನೇ** ಮುಸಲ್ಮಾನರು ಪರೀಕ್ಷಿಸುವ ೧೨ನೆಯ **ಇಮಾಮ**ನಾಗಿದ್ದು ದರಿಂದ ಅವನು ಮುಸಲ್ಮಾನರಲ್ಲಿದ್ದ ೭೨ ಮತಗಳನ್ನು ಒಟ್ಟುಗೂಡಿಸುವನೆಂದು ಸಾರಿದನು. ಅದನ್ನು ಕೇಳಿ ಎಲ್ಲರೂ ಚಕಿತರಾಗಿ ತಲೆದೂಗಿದರು. ಅಂದಿನಿಂದ **ಬಾದಷಹ**ನು ಎಲ್ಲಾ ಧರ್ಮನಿಬಂಧನೆಗಳಿಂದ ಮುಕ್ತನಾದನು. ಅವನು ಮಾಡಿದುದಕ್ಕೆ ಅಡ್ಡಿ ತರುವವರಾರೂ ಇರಲಿಲ್ಲ. ಆದುದರಿಂದ ಅವನು ಪೆರೆಯುಜ್ಜಿದ ಹಾವಿನಂತಾದನು. ಅವನು ಮುಂದೆ **ದಿನ್-ಈ-ದಿಲಾಹಿ** (ದೇವರ ಧರ್ಮ) ಎಂಬ ಧರ್ಮಗ್ರಂಥವನ್ನು ಬರೆಯಿಸಿದನು. ಅದರೊಳಗಿನ ಮುಖ್ಯ ತತ್ವಗಳು ಯಾವುವೆಂದರೆ:—(೧) ದೇವರು ಒಬ್ಬನೇ ಇರುತ್ತಾನೆ; (೨) ಎಲ್ಲಾ ಜೀವಿಗಳಿಗೆ ಪುನರ್ಜನ್ಮವುಂಟು; (೩) ಜೀವಾತ್ಮನು ಪರಮಾತ್ಮನಲ್ಲಿ ಐಕ್ಯವಾಗುವದೇ ಮುಕ್ತಿಯು; (೪) ಅಗ್ನಿ ಸೂರ್ಯರು ದೇವತಾಂಶರಾಗಿರುತ್ತಾರೆ. ಇದಲ್ಲದೇ **ಬಾದಷಹ**ನು ಮುಸಲ್ಮಾನರು ದಿನಾಲು ಮಾಡುವ ದೇವತಾಸ್ತುತಿಯಲ್ಲಿ **ಪಾರ್ಸಿ** ಧರ್ಮಕ್ಕನುಸರಿಸಿ ಕೆಲವು ಹೆಚ್ಚು ಕಡಿಮೆಗಳನ್ನು ಮಾಡಿದನು; ಹಿಂದೂ ಜನರ ಪೂಜಾಪುರಸ್ಕಾರದ ಪದ್ಧತಿಯನ್ನು ಸ್ವೀಕರಿಸಿದನು; ತನ್ನ ರಾಜ್ಯದಲ್ಲೆಲ್ಲ **ಪಾರ್ಸಿ ಶಕ**ವೇ ನಡೆಯಬೇಕೆಂದು ಕಟ್ಟುಮಾಡಿದನು; ಮತ್ತು **ಭಗವಾನ್‌ದಾಸ, ಮಾನಸಿಂಗ, ತೋದರಮಲ್ಲ, ಬೀರಬಲ್** ಮುಂತಾದ ಹಿಂದೂಗೃಹಸ್ಥರಿಗೆ ದೊಡ್ಡ ದೊಡ್ಡ **ಮನಸಬ್ದಾರಿ**ಯನ್ನು ಕೊಟ್ಟನು.*

ಈ ಹೆಚ್ಚು ಕಡಿಮೆಗಳೆಲ್ಲವನ್ನೂ ನೋಡಿ **ವೀರಮುಹಮ್ಮದೀ**ಯರ ಹೊಟ್ಟೆಯಲ್ಲಿ ಬೆಂಕಿ ಬಿತ್ತು; ಇವುಗಳಿಂದ ಅವರ ಅನ್ನಕ್ಕೆ ಕಲ್ಲು ಬಿದ್ದಂತಾಯಿತು. ಆದರೆ ಮಾಡುವುದೇನು? ಹೊಟ್ಟೆಯಲ್ಲಿದ್ದ ಸಿಟ್ಟು ರಟ್ಟೆಯಲ್ಲಿರಲಿಲ್ಲ. ಅವರು ಮನಸ್ಸಿನಲ್ಲಿ ಈ ವಿಚಾರಮಾಡಿ ತಳಮಳಿಸಹತ್ತಿದರು. ಆದರೆ ಅವರಿಗೆ ಹೊಟ್ಟೆಯೊಳಗಿನ ವಿಚಾರಗಳನ್ನು ಹೊರಗೆ ಆಡಿ ತೋರಿಸ

* ರಾಜಾಮಾನಸಿಂಗನು ೭೦೦೦ ಮಂದಿ ಸವಾರರ ಮನಸಬ್ದಾರನಾಗಿದ್ದನು. ಬಾದಷಹನ ಮಕ್ಕಳ ಹೊರತು ಉಳಿದವರಿಗೆ ಇಷ್ಟು ದೊಡ್ಡ ಮನಸಬ್ದಾರಿಯು ದೊರೆಯುತ್ತಿರಲಿಲ್ಲ.

ಲಿಕ್ಕೆ ಧೈರ್ಯವಿರಲಿಲ್ಲ. ಅವರು ಈ ಅನರ್ಥಕ್ಕೆಲ್ಲಾ **ಅಬುಲ್‌ಫಾಜಲ್ಲ**ನೇ ಕಾರಣನೆಂದೆಣಿಸಿ ಅವನ ಮೇಲೆ ಕರಕರನೆ ಹಲ್ಲುಕಡಿಯುತ್ತಿದ್ದರು. **ಬಾದಷಹ**ನ ಹಿರಿಯ ಮಗನಾದ **ಸೆಲೀಮ**ನ ಅವಿನಯವು ಅವರ ದ್ವೇಷವೆಂಬ ವೃಕ್ಷದ ಫಲವೇ ಸರಿ. **ಅಬುಲ್‌ಫಾಜಲ್ಲ**ನ ಕೊಲೆಯೂ ಈ ಮಾತ್ಸರ್ಯಬುದ್ಧಿಯ ಪರಿಣಾಮವೇ.*

**ಅಕ್ಬರ**ನ ಆಶ್ರಯದಲ್ಲಿ ಹಲವು **ಹಿಂದೂ-ಮುಸಲ್ಮಾನ-ಸುಫಿ** ಧರ್ಮಜ್ಞರಾದ ಪಂಡಿತರಿದ್ದರು. ಈ ಯೆಲ್ಲ ಧರ್ಮಗಳ ತತ್ವಗಳು ಅವನಿಗೆ ಗೊತ್ತಾಗಿದ್ದುವು. ಆದರೆ **ಪೊರ್ತುಗೀಸ**ರು **ಗೋವೆ**ಯನ್ನು ಹಿಡಿದುಕೊಂಡಂದಿನಿಂದ ಅವನು ಕ್ರಿಸ್ತಮತದ ವಿಷಯವಾಗಿ ಎಷ್ಟೋ ಸಂಗತಿಗಳನ್ನು ಕೇಳಿದ್ದನು. ಆದುದರಿಂದ ಅವನಿಗೆ ಆ ಧರ್ಮದ ತತ್ವಗಳನ್ನು ಅರಿತುಕೊಳ್ಳಬೇಕೆಂಬ ಲವಲವಿಕೆಯುಂಟಾಯಿತು. ಅದನ್ನು ಪೂರ್ಣಮಾಡುವುದಕ್ಕೋಸುಗ **ಬಾದಷಹ**ನು **ಗೋವೆ**ಯ ಅಧಿಪತಿಗೆ ಕೆಲವು ಕ್ರಿಸ್ತಧರ್ಮ ವಿಶಾರದರನ್ನು ತನ್ನ ಕಡೆಗೆ ಕಳುಹಬೇಕೆಂದು ಕಾಗದ ಬರೆದನು. ಅದರಂತೆ **ರೊಡೊಲ್ಫೊ ಆಕ್ವಾವಿಧ್ವಾ, ಮೊನ್‌ಸೆರೆಟೊ, ಎನ್ರಿಕ್ವೀಸ**ರೆಂಬ ಮೂರು ಮಂದಿ **ಪಾದ್ರಿ**ಗಳು **ಫತ್ತೇಪುರ ಸಿಕ್ರಿ**ಗೆ ಬಂದರು. ಇವರೊಳಗೆ **ರೊಡೊಲ್ಫೊ ಆಕ್ವಾವಿಧ್ವಾ**ಯೆಂಬವನು ದೊಡ್ಡ ಪಂಡಿತನಾಗಿದ್ದನು. **ಬಾದಷಹ**ನು ಅವರು ತಂದ **ಬೈಬಿಲ್ಲೆಂಬ** ಧರ್ಮಪುಸ್ತಕವನ್ನು ಭಕ್ತಿಯಿಂದ ತಲೆಯ ಮೇಲಿಟ್ಟುಕೊಂಡು, **ಯೇಸು-ಮೇರಿ**ಯವರ ಮೂರ್ತಿಗಳನ್ನು ಮುತ್ತಿಕ್ಕಿಕೊಂಡುದಲ್ಲದೆ **ಫಾಯಿಜಿ**ಗೆ **ಬೈಬಿಲ್ಲ**ನ್ನು **ಪಾರ್ಸಿ**ಭಾಷೆಗೆ ಪರಿವರ್ತನಮಾಡಬೇಕೆಂದು ಹೇಳಿದನು. ಅದನ್ನು ನೋಡಿ ಪಾದ್ರಿಗಳಿಗೆ ಪರಮಹರ್ಷವಾಯಿತು. ಬಳಿಕ **ಬಾದಷಹ**ನು ಪಾದ್ರಿಗಳಿಗೂ ಉಳಿದ ಧರ್ಮದವರಿಗೂ ತನ್ನ ಸಮಕ್ಷದಲ್ಲಿ ಪ್ರತಿ ಶನಿವಾರ ವಾದವಾಗಬೇಕೆಂದು ಗೊತ್ತುಮಾಡಿದನು.

ಒಂದು ದಿನ **ಇಬಾದತ್-ಖಾನೆ**ಯಲ್ಲಿ **ಉಲ್ಮೆ**ಯವರೂ, ಬ್ರಾಹ್ಮಣರೂ, ಜೈನರೂ, ಬೌದ್ಧರೂ, ಕ್ರಿಸ್ತರೂ, ಪಾರ್ಸಿಯರೂ, ಯಹೂದಿಯರೂ ಒಟ್ಟುಗೂಡಿದರು. ಆಗ ಕ್ರಿಸ್ತಧರ್ಮದ ಸತ್ಯತೆಯ ಸಂಬಂಧವಾಗಿ

---

* ನಾಲ್ಕನೆಯ ಅಧ್ಯಾಯ ೭೬ನೆಯ ಪುಟವನ್ನು ನೋಡಿರಿ.

ಪ್ರಶ್ನೆಯು ಹೊರಟಿತು. ಬೇರೆ ಬೇರೆ ಧರ್ಮದವರು ತರತರದ ಆಕ್ಷೇಪಣೆಗಳನ್ನು ಮಾಡಿದರು. **ರೊಡೊಲ್ಫೊ ಆಕ್ವಾವಿವ್ಹಾನು** ಆ ಯೆಲ್ಲ ಆಕ್ಷೇಪಣೆಗಳನ್ನು ಖಂಡಿಸಿ **ಉಲ್ಮೆ**ಯವರ ಸಂಬಂಧವಾಗಿ **ಬಾದಷಹ**ನಿಗೆ ಹೇಳಿದುದೇನಂದರೆ:—"ಈ **ಉಲ್ಮೆ**ಯವರು ನಮ್ಮ ಧರ್ಮವನ್ನು ಹೀಗೆ ಹೀಯಾಳಿಸುತ್ತಾರಷ್ಟೇ: ಇವರಿಗೆ ತಮ್ಮ **ಕುರಾನಿ**ನಲ್ಲಿ ನಿಜವಾದ ನಂಬಿಕೆ ಇದ್ದರೆ, ನಾನು ಮಾಡುವ ಸೂಚನೆಗೊಪ್ಪಿಕೊಳ್ಳಲಿ; ನಾನು ನನ್ನ ಧರ್ಮಪುಸ್ತಕವಾದ **ಬೈಬಿಲ್ಲ**ನ್ನು ತೆಗೆದುಕೊಂಡು ಬೆಂಕಿಯಲ್ಲಿ ನಿಲ್ಲುವೆನು. ಇವರೂ ತಮ್ಮ **ಕುರಾನಿ**ನೊಡನೆ ಕಿಚ್ಚಿನಲ್ಲಿ ನಿಲ್ಲಲಿ. ಬಳಿಕ ನಮ್ಮೊಳಗೆ ಯಾರು ಉರಿಯಿಂದ ಸುಟ್ಟುಹೋಗುತ್ತಾರೋ ಅವರ ಧರ್ಮಪುಸ್ತಕವು ಸುಳ್ಳೆಂದು **ಬಾದಷಹ**ನೇ ತೀರ್ಪುಮಾಡಲಿ." ಈ ಧೈರ್ಯದ ಮಾತುಗಳನ್ನಾಲಿಸಿ ಎಲ್ಲಾ ಮುಸಲ್ಮಾನರು ತಲೆಯನ್ನು ತಗ್ಗಿಸಿದರು; **ಉಲ್ಮೆ**ಯವರು ತಮ್ಮ ತಮ್ಮೊಳಗೆ ಮಿಟಮಿಟನೆ ಮೋರೆಯನ್ನು ನೋಡತೊಡಗಿದರು. ಅವರಲ್ಲಿ ಧರ್ಮಭಕ್ತಿಯು ಹುಳಿತುಹೋಗಿದ್ದುದರಿಂದ ಒಬ್ಬನಿಗಾದರು **ರೊಡೊಲ್ಫೋ** ಎಂಬವನ ಸೂಚನೆಯಂತೆ ಮಾಡಲಿಕ್ಕೆ ಧೈರ್ಯಸಾಲಲಿಲ್ಲ. ಅದನ್ನು ನೋಡಿ **ಉಲ್ಮೆ**ಯವರ ಮೇಲಿದ್ದ **ಬಾದಷಹ**ನ ಪೂಜ್ಯಬುದ್ಧಿಯು ಮತ್ತಿಷ್ಟು ಕಡಿಮೆಯಾಯಿತು. ಅವರು ಡಂಭಾಚಾರದವರೂ ದುರಭಿಮಾನಿಗಳೂ ಎಂದು ಮನಗಂಡು ಅವನು ಅವರನ್ನು ಹೆಚ್ಚು ಜರಿಯತೊಡಗಿದನು.

**ಅಕ್ಬರ**ನು **ಮೇರಿ**ಯೆಂಬೊಬ್ಬ **ಪೋರ್ತುಗೀಸ** ಸ್ತ್ರೀಯನ್ನು ಮದುವೆ ಮಾಡಿಕೊಂಡಿದ್ದನೆಂದು ಕೆಲವು ಗ್ರಂಥಕಾರರು ಬರೆಯುತ್ತಾರೆ ಈಗಲೂ **ಫತ್ತೇಪುರ-ಸಿಕ್ರಿ**ಯಲ್ಲಿರುವ ಒಂದು ಮುರುಕು ಮನೆಯು ಆಕೆಯದೆಂದು ಜನರು ತೋರಿಸುತ್ತಾರೆ. ಒಂದು ದಿನ **ಅಕ್ಬರ**ನು "ನಿಮ್ಮ ಎಲ್ಲಾ ಗುಡಿಗಳಲ್ಲಿರುವ ಸಿಲುಬೆಗಳಿಗಿಂತ ಹೆಚ್ಚು ಸಿಲುಬೆಗಳು ನನ್ನ ಅರಮನೆಯಲ್ಲಿರುತ್ತವೆ" ಎಂದು ನುಡಿದುದನ್ನು ಕೆಲವು **ಪೋರ್ತುಗೀಸ**ರು ಬರೆಯುತ್ತಾರೆ. ಆದರೆ ಈ ವಿಷಯವಾಗಿ ನಮಗೆ ಸಾಕಾಗುವಷ್ಟು ಆಧಾರಗಳಿಲ್ಲ. ಇವು ಪಾದರಿಗಳ ಬಡಾಯಿಯ ಮಾತುಗಳೆಂದು ಹೇಳಬಹುದು.

**ಬಾದಷಹ**ನು **ಗೋವೆ**ಯ ಪಾದ್ರಿಗಳಿಗೆ ಆತಿಥ್ಯವನ್ನು ಮಾಡಿದನೆಂದು ಮೇಲೆ ಬರೆದಿರುತ್ತೇವಷ್ಟೆ. ಮುಂದೆ ಕೆಲವು ದಿವಸಗಳ ಮೇಲೆ ಅವನು ತನ್ನ ಅರಮನೆಯ ಹತ್ತಿರ ಒಂದು ತಮ್ಮ ಗುಡಿಯನ್ನು ಕಟ್ಟಲಿಕ್ಕೆ ಅವರಿಗೆ ಅಪ್ಪಣೆಯನ್ನಿತ್ತನು. ಒಂದು ದಿನ ಅವನು **ಅಬುಲ್‌ಫಾಜಲ್ಲ**ನೊಡನೆ ಆ ಗುಡಿಗೆ ಹೋಗಿ, ಯೇಸುವಿನ ಮೂರ್ತಿಗೆ ಸಾಷ್ಟಾಂಗವೆರಗಿದನು; ಒಬ್ಬ **ಕ್ಯಾಥೊಲಿಕ್ಕ**ನು ಸಾಯಲು, ಕ್ರಿಸ್ತಧರ್ಮದಂತೆ ಆ ಶವಕ್ಕೆ ಸಂಸ್ಕಾರಮಾಡಗೊಟ್ಟನು. ಈ ಯೆಲ್ಲಾ ಅನುಕೂಲಕೃತ್ಯಗಳನ್ನು ನೋಡಿ, ಪಾದ್ರಿಗಳು ಉಬ್ಬಿದರು. **ಬಾದಷಹ**ನು ಕೆಲವು ದಿವಸದಲ್ಲೇ ತಮ್ಮ ಧರ್ಮದ ದೀಕ್ಷೆಯನ್ನು ತೆಗೆದುಕೊಳ್ಳುವನೆಂಬ ಆಶೆಯಿಂದ ಹಿಗ್ಗಿದರು. ಆದರೆ ಅವರ ಆಶೆಯು ಕಯ್ಗೂಡಲಿಲ್ಲ, ಆದುದರಿಂದ ಅವರು ಭಗ್ನಮನೋರಥರಾದರು. ಏಕೆಂದರೆ ಅವರು **ಅಕ್ಬರ-ಅಬುಲ್‌ಫಾಜಲ್ಲ**ರ ವಿಚಾರಗಳನ್ನು ಚೆನ್ನಾಗಿ ತಿಳಿದುಕೊಳ್ಳದೆ ಬಯಲಾಶೆಗೊಳಗಾದರು. **ಅಕ್ಬರ, ಅಬುಲ್‌ಫಾಜಲ್ಲ**ರು ದೇವರು ಸರ್ವಾಂತರ್ಯಾಮಿಯೆಂಬ ಹಿಂದೂಮತದ ಗೌರವದ ತತ್ವವನ್ನು ನೆರೆನಂಬಿದ್ದರು. **ಪರಮಾತ್ಮ**ನು ಅಣು-ರೇಣು-ತೃಣ-ಕಾಷ್ಠ ಪಾಷಾಣಗಳಲ್ಲಿ ಇರುತ್ತಾನೆಂದು ತಿಳಿದುಕೊಂಡಿದ್ದರು. ಬೇರೆ ಬೇರೆ ಜನರು **ಯೇಸು, ಅಲ್ಲಾ, ವಿಷ್ಣು** ಮುಂತಾದ ಭಾಷಾಭೇದದಿಂದುಂಟಾದ ಹೆಸರುಗಳಿಂದ ಕರೆದರೂ **ಪರಮಾತ್ಮ**ನು ಒಬ್ಬನೇ ಇರುತ್ತಾನೆಂಬ ನಂಬಿಕೆಯು ಅವರಲ್ಲಿ ನೆಲೆಗೊಂಡಿತ್ತು. ಆದುದರಿಂದ ಅವರು ಕ್ರಿಸ್ತರ ಗುಡಿಯಲ್ಲಿ ನಮುಸ್ಕಾರಮಾಡಲು ಅನುಮಾನಮಾಡಲಿಲ್ಲ. ಎಲ್ಲ ಧರ್ಮದವರು ಮನಸ್ಸಿಗೆ ಪ್ರಶಸ್ತ ಕಂಡಂತೆ ತಂತಮ್ಮ ಧರ್ಮಾಚರಣೆಯನ್ನು ಮಾಡಲಿಕ್ಕೆ ಅಡ್ಡಿಯಿರಬಾರದೆಂಬ ಗೌರವದ ತತ್ವವನ್ನನುಸರಿಸಿ, **ಬಾದಷಹ**ನು ಯಾರಿಗೂ ತೊಂದರೆಯನ್ನು ಕೊಡಲಿಲ್ಲ. ಪಾದರಿಗಳು **ಬಾದಷಹ**ನ ವಿಚಾರಗಳನ್ನು ಲಕ್ಷ್ಯಗೊಟ್ಟು ತಿಳಿದುಕೊಳ್ಳದೆ ಅವನು ಕ್ರಿಸ್ತಮತಕ್ಕೊಲಿದನೆಂಬ ಭ್ರಾಂತಿಯುಲ್ಲಿ ಬಿದ್ದರು.

೧೫೮೭ರಲ್ಲಿ ಒಂದು ಸೋಜಿಗದ ಸಂಗತಿಯು ನಡೆಯಿತು. ಆ ಕಾಲದಲ್ಲಿ **ಬಾದಷಹ**ನು **ಲಾಹೋರಿ**ನಲ್ಲಿದ್ದನು. ಅವನು **ನವರೋಜ್** ಹಬ್ಬದ ಉದ್ದೇಶವಾಗಿ ಊರ ಹೊರಗಿನ ಬಯಲಲ್ಲಿ ತನ್ನ ವಿಸ್ತೀರ್ಣವಾದ

ಡೇರೆಯನ್ನು ಹೊಡಿಸಿ, ಅದರೊಳಗೆ ತನ್ನ ಸಿಂಹಾಸನವನ್ನಿಡಿಸಿ, ಅದರ ಮೇಲೆ ರತ್ನಕೆತ್ತಿಸಿದ ಚಿನ್ನದ ಸೂರ್ಯನ ಪ್ರತಿಮೆಯನ್ನು ಇರಿಸಿದ್ದನು. ಆಗ ಒಮ್ಮಿಂದೊಮ್ಮೆ ಸಿಡಿಲು ಬಿದ್ದು ಸಿಂಹಾಸನವು ಛಿನ್ನಭಿನ್ನವಾಯಿತು; ಡೇರೆಯು ಸುಟ್ಟುಹೋಯಿತು; ಬೆಂಕಿಯು ಊರಲ್ಲಿ ಹಬ್ಬಿ ಅರಮನೆ ಮುಂತಾದುವುಗಳನ್ನು ಸುಟ್ಟು ಬೂದಿಮಾಡಿತು; ಬಂಡಾರದಲ್ಲಿದ್ದ ಬೆಲೆಯುಳ್ಳ ನಾಣ್ಯಗಳು ಕರಗಿದುದರಿಂದ ಬೀದಿಗಳಲ್ಲಿ ಚಿನ್ನ ಬೆಳ್ಳಿಗಳ ರಸದ ಕಾಲುವೆಗಳು ಹರಿಯತೊಡಗಿದುವು.

ಈ ಅದ್ಭುತವಾದ ಅನಾಹುತವನ್ನು ನೋಡಿ **ಬಾದಷಹನು** ಬೆರಗಾದನು. ಆ ಸಮಯದಲ್ಲಿ ಅವನು **ಕಾಶ್ಮೀರಕ್ಕೆ** ಹೋಗುವ ಆವಶ್ಯಕವಿತ್ತು. ಆದುದರಿಂದ ಅವನು ಈ ದೇವತಾಕ್ಷೋಭೆಗೆ ಏನು ಕಾರಣವೆಂಬುದನ್ನು ತಿಳಿದುಕೊಳ್ಳುವುದಕ್ಕಾಗಿ ಕೆಲವು ಜನ ಪಾದರಿಗಳನ್ನು ತನ್ನ ಸಂಗಡ ಕರೆದುಕೊಂಡುಹೋದನು. ಈ ಪಾದರಿಗಳಿಗೆ ಏನೂ ತೋರಲಿಲ್ಲ. ಇವರು ಅನೇಕ ಉಪಾಯಗಳಿಂದ ಎಷ್ಟು ಪ್ರಯತ್ನ ಮಾಡಿದರೂ **ಅಕ್ಬರನು** ತನ್ನ ಹೊಸ ಧರ್ಮವನ್ನು ಬಿಡಲೊಡಂಬಡಲಿಲ್ಲ.

**ಅಕ್ಬರನು** ಮಹಮ್ಮದೀಯ ಧರ್ಮವನ್ನು ಸಂಪೂರ್ಣವಾಗಿ ಬಿಡದೆ* ಹೊಸದೊಂದು ಮತವನ್ನು ಸ್ಥಾಪಿಸಿದನು. ಇದಕ್ಕೆ **ದೇವತಾಮತವೆಂದು** ಹೆಸರು. ಇದಕ್ಕೆ ಸೇರಿದವರು "**ಅಲ್ಲಾಹುಅಕ್ಬರ್**"† ಎಂಬ ಬೀಜ ಮಂತ್ರವನ್ನು ಜಪಿಸಬೇಕಾಗುತ್ತಿತ್ತು. ಅವರು ತಮ್ಮ ಹುಟ್ಟಿದ ದಿವಸಗಳನ್ನು ಬಹು ಸಮಾರಂಭ (ಸಂಭ್ರಮ)ದಿಂದ ಮಾಡಿ, ಆ ದಿನ ಬಡಬಗ್ಗರಿಗೆ ದಾನವನ್ನು ಕೊಡುತ್ತಿದ್ದರು; ಅವರು ಮಾಂಸವನ್ನು ತಿನ್ನುತ್ತಿರಲಿಲ್ಲ; ಈ ಹೊಸ ಮತಕ್ಕೆ **ಅಬುಲ್‌ಫಾಜಲ್** ಮುಂತಾದ ೧೮ ಮಂದಿ ದರಬಾರಿನ ಪ್ರಮುಖರು ಸೇರಿದ್ದರು. ಅವರೊಳಗೆ **ಬೀರಬಲ್** ಎಂಬ ಒಬ್ಬ ದೇಶಸ್ಥ ಬ್ರಾಹ್ಮಣನು ಇದ್ದನು. ಇವನು ಸೂರ್ಯನಿಂದ ಎಲ್ಲಾ ಗಿಡಗಂಟಿಗಳೂ,

---

* ಅಕ್ಬರನ ತಾಯಿಯು ೮೩ ವರುಷದವಳಾಗಿ ತೀರಿಹೋದಳು. ಆಕೆಗೆ ಮಹಮ್ಮದೀಯ ಧರ್ಮದಲ್ಲಿ ಪೂರ್ಣವಿಶ್ವಾಸವಿತ್ತು. ಮುಪ್ಪಿನ ತಾಯಿಯ ಮನಸ್ಸನ್ನು ನೋಯಿಸಬಾರದೆಂದು ಅಕ್ಬರನು ಕಡೆತನಕ ಮುಸಲ್ಮಾನ ಧರ್ಮವನ್ನು ಬಿಡಲಿಲ್ಲವೆಂದು ಕೆಲವರು ಊಹಿಸುತ್ತಾರೆ.

† ಇದು (೧) ದೇವರು ದೊಡ್ಡವನು, (೨) ಅಕ್ಬರನು ದೇವರು ಎಂದು ದ್ವ್ಯರ್ಥಪದವಾಗಿರುತ್ತದೆ.

ಹಣ್ಣುಹಂಪಲುಗಳೂ, ಕಾಳುಕಡ್ಡಿಗಳೂ ಆಗುವುದರಿಂದ, ಅವನೇ ಜಗತ್ತಿನ ಮೂಲಕಾರಣನೆಂತಲೂ, ಪ್ರಾರ್ಥನೆಯನ್ನು ಮಾಡುವಾಗ ಪೂರ್ವದಿಕ್ಕಿಗೆ ತಿರುಗಿಕೊಂಡು ನಡೆಯಿಸಬೇಕೆಂತಲೂ, ಆಕಳು, ಬೆಂಕಿ, ನೀರು, ಕಲ್ಲು, ಕಟ್ಟಿಗೆ ಮುಂತಾದುವುಗಳನ್ನು ಪೂಜಿಸುವುದು ಸರಿಯೆಂದೂ **ಬಾದಷಹ**ನನ್ನು ಒಡಂಬಡಿಸಿದನು.*

ಮುದುಕರು **ಅಕ್ಬರ-ಬೀರಬಲ್ಲ**ರ ಎಷ್ಟೋ ಚಾತುರ್ಯದ ಕಥೆಗಳನ್ನು ಹೇಳುತ್ತಾರೆ. ಅವುಗಳಲ್ಲಿ ಮಾದರಿಗಾಗಿ ಎರಡು ಕಥೆಗಳನ್ನು ಇಲ್ಲಿ ಕೊಟ್ಟಿದೆ.

೧. ಒಂದುದಿನ **ಬಾದಷಹ**ನು, **ಪಂಚಪಾಂಡವ**ರಂತೆ ತಾನು ಎಷ್ಟೋ ಮಹತ್ಕಾರ್ಯಗಳನ್ನು ಮಾಡಿದುದರಿಂದ ತನ್ನ ಒಂದು **ಮಹಾಭಾರತ**ವನ್ನು ಬರೆಯಿಸಬೇಕೆಂದು **ಬೀರಬಲ್ಲ**ನಿಗೆ ಹೇಳಿದನು. ಆಗ **ಬೀರಬಲ್ಲ**ನು ಅದಕ್ಕೆ ತಗಲುವ ವೆಚ್ಚಕ್ಕಾಗಿ ೨-೩ ಲಕ್ಷ ರೂಪಾಯಿಗಳನ್ನು ತೆಗೆದುಕೊಂಡು, ಒಂದು ವರುಷದ ಅವಧಿಯನ್ನು ಮಾಡಿಕೊಂಡು ಹೋದನು. ಮುಂದೆ ೭-೮ ತಿಂಗಳುಗಳ ವರೆಗೆ ಸಾವಿರಾರು ಬ್ರಾಹ್ಮಣರಿಗೆ ಊಟಕ್ಕಿಟ್ಟು, ಅವರು ಊಟಮಾಡಿದ ಎಂಜಲೆಲೆಗಳನ್ನು ರಾಶಿಹಾಕಿ, **ಬಾದಷಹ**ನ ಸಮೀಪಕ್ಕೆ ಬಂದು ಅರಿಕೆಮಾಡಿಕೊಂಡುದು ಏನೆಂದರೆ:— "ಖಾವಂದ್, ತಮ್ಮ ಅಪ್ಪಣೆಯಂತೆ **ಮಹಾಭಾರತ**ದ ಉಪಕರಣಗಳನ್ನು ಸಂಗ್ರಹಿಸುವ ಕೆಲಸವು ನಡೆದಿರುತ್ತದೆ; ಆದರೆ ಆ ವಿಷಯದಲ್ಲಿ ನನಗೆ ಒಂದು ಸಂಶಯವು ಬಂದಿರುತ್ತದೆ. ಅದೇನೆಂದರೆ:—**ಪಾಂಡವ**ರು ೫ ಜನರಿದ್ದರು; ಅವರೆಲ್ಲರಿಗೂ **ದ್ರೌಪದಿ**ಯು ಒಬ್ಬಳೇ ಹೆಂಡತಿಯಾಗಿದ್ದಳು; ತಾವು ಒಬ್ಬರೇ ಆದರೂ ತಮಗೆ ೮-೧೦ ಮಂದಿ ಹೆಂಡಂದಿರು ಇರುತ್ತಾರೆ. ಈ ವ್ಯತ್ಯಾಸವನ್ನು ಹೇಗೆ ದೂರಮಾಡಬೇಕು?" ಅದನ್ನು ಕೇಳಿ **ಬಾದಷಹ**ನು—"ಒಬ್ಬ ಹೆಂಗಸಿಗೆ ೫ ಮಂದಿ ಗಂಡಂದಿರು ಇದ್ದುದು ಅಬದ್ಧವೇ ಸರಿ; ಅಂತಹ **ಮಹಾಭಾರತ**ವು ನಮಗೇನೂ ಬೇಡ; ಈಗ ಬರೆಯಿಸಿದುದನ್ನು ನಾಳೆ ಬೆಳಗ್ಗೆ ಸುಡಿಸಿಬಿಡಿ; ನಾವು ನೋಡಲಿಕ್ಕೆ ಬರುವೆವು" ಎಂದನು. ಬಳಿಕ **ಬೀರಬಲ್ಲ**ನು ಅಪ್ಪಣೆಯಂತೆ ಆಗಲೆಂದು ಹೋಗಿ ಮರುದಿವಸ

---

* ಈ ಬೀರಬಲ್ಲನು ಹಿಂದೆ ಸ್ವಾಟ್ಟರ ಯುದ್ಧದಲ್ಲಿ ಮಡಿದನು (ಪುಟ ೬೭ ನೋಡಿರಿ).

ಎಂಜಲೆಲೆಯ ಗುಂಪಿಗೆ ಬೆಂಕಿ ಹಚ್ಚಿಸಿ **ಬಾದಷಹ**ನಿಗೆ ಹೇಳಿ ಕಳುಹಿದನು. ಆ ಉರಿಯುನ್ನು ನೋಡಿ **ಬಾದಷಹ**ನು ಬೆರಗಾಗಿಬಿಟ್ಟನು.

೨. ಒಂದು ಸಲ **ಇರಾನ್** ದೇಶದ ಒಬ್ಬ ವ್ಯಾಪಾರಿಯು ಕುದುರೆಗಳನ್ನು ಮಾರಲಿಕ್ಕೆ ತರಲು **ಅಕ್ಬರಬಾದಷಹ**ನು ಒಂದು ಉತ್ತಮವಾದ ಹೆಣ್ಣುಕುದುರೆಗೆ ೫,೦೦೦ ರೂಪಾಯಿಗಳನ್ನು ಕೊಟ್ಟು ತೆಗೆದುಕೊಂಡು ಮರುದಿವಸ ಅರಮನೆಗೆ ಬರುವಂತೆ ಆ ವ್ಯಾಪಾರಿಗೆ ಹೇಳಿದನು. ಅದರಂತೆ ಅವನು ಬರಲು—

**ಬಾದಷಹನು**—"ಈ ಹೆಣ್ಣುಕುದುರೆಯ ಜೋಡಿಯ ಗಂಡುಕುದುರೆಯು ನಮಗೆ ಬೇಕಾಗಿರುತ್ತದೆ.

**ವ್ಯಾಪಾರಿ**—ಖುದಾವಂದ್, ಈ ಹೆಣ್ಣುಕುದುರೆಯು ಅಪ್ರತಿಮವಾಗಿರುತ್ತದೆ. ಎಷ್ಟೋ ಜನರು ಇದನ್ನು ಕೇಳಿದರು. ಆದರೆ ಅವರಿಗೆ ಕೊಡದೆ ತಮಗೆ ಕೊಡಬೇಕೆಂದು ಇಲ್ಲಿಗೆ ತಂದೆನು. ನಾನು ಅವರಿಗೆ ಕೊಟ್ಟಿದ್ದರೆ ನನಗೆ ಇನ್ನೂ ೨-೩ ಸಾವಿರ ರೂಪಾಯಿ ಹೆಚ್ಚಾಗಿ ಬರುತ್ತಿತ್ತು.

**ಬಾದ**—ಅದಿರಲಿ, ನೀನು ಇದರಂತಹ ಒಂದು ಗಂಡುಕುದುರೆಯನ್ನು ತಂದುಕೊಡಲೇಬೇಕು. ನೀನು ಕೇಳಿದಷ್ಟು ಬೆಲೆಯನ್ನು ಕೊಡುವೆನು.

**ವ್ಯಾ**—**ಬಾದಷಹ**ರ ಅನುಗ್ರಹವಿದ್ದರೆ ನಾನು ಅಂತಹ ಕುದುರೆಯನ್ನು ಪ್ರಯಾಸಪಟ್ಟು ತಲಾಷು (ತಪಾಸು) ಮಾಡುವೆನು.

**ಬಾದ**—ತಲಾಷ್ ಗಿಲಾಷ್ ನಾವು ಕೇಳುವುದಿಲ್ಲ. ೬ ತಿಂಗಳೊಳಗಾಗಿ ಒಂದನ್ನು ತಂದುಕೊಡಬೇಕು. ಏನು ಹೇಳುತ್ತೀ ?

**ವ್ಯಾ**—ಖುದಾವಂದ್, ಇಷ್ಟು ಸ್ವಲ್ಪಕಾಲದಲ್ಲಿ ತಮಗೆ ಕುದುರೆ ಬೇಕಾದರೆ ನಾನು ಬಹಳ ಶ್ರಮಪಡಬೇಕಾಗುವುದು, ಮತ್ತು ಹಣವನ್ನು ನೀರಿನಂತೆ ಖರ್ಚುಮಾಡಬೇಕಾಗುವುದು.

**ಬಾದ**—ಹಣದ ಬಗ್ಗೆ ಚಿಂತೆ (ಕಾಳಜಿ) ಮಾಡಬೇಡ. ಇದಕ್ಕೆ ೫,೦೦೦ ರೂಪಾಯಿ. ಅದಕ್ಕೆ ೧೦,೦೦೦ ರೂಪಾಯಿ ಕೊಡುವೆನು.

**ವ್ಯಾ**—ಇಂತಹ ಕುದುರೆಯನ್ನು ಗೊತ್ತುಮಾಡಲಿಕ್ಕೆ ನನಗೆ ೪-೫ ಸಾವಿರ ರೂಪಾಯಿ ವೆಚ್ಚತಗಲಬಹುದು.

**ಬಾದ**—ಹಾಗಾದರೆ ಹಣ ಕನಿಷ್ಠಪಕ್ಷ ಎಷ್ಟು ಬೇಕು ಹೇಳು.

**ವ್ಯಾ**—**ಬಾದಷಹ**ರು ಈಗ ೧೫,೦೦೦ ರೂಪಾಯಿ ಕೊಟ್ಟರೆ ನಾನು ವಿಶ್ವ ಪ್ರಯತ್ನಮಾಡಿ ಆರು ತಿಂಗಳಲ್ಲಿ ಇದರ ಜೋಡಿಯ ಗಂಡುಕುದುರೆಯನ್ನು ತಂದುಕೊಡುವೆನು. ಇಲ್ಲವಾದರೆ ಸರ್ವಥಾ ನನ್ನಿಂದ ಆಗದು, ಕ್ಷಮಿಸಿರಿ.

**ಬಾದ**—ಒಳ್ಳೆಯದು. ಈ ಸರದಾರನ ಸಂಗಡ ಖಜಾನೆಗೆ ಹೋಗಿ ಕರಾರು ಬರೆದುಕೊಟ್ಟು ೧೫,೦೦೦ ರೂಪಾಯಿ ತೆಗೆದುಕೊಂಡು ಹೋಗು. ೬ ತಿಂಗಳಲ್ಲಿ ತರಲೇಬೇಕು. ಕಂಡೆಯಾ? ಎಚ್ಚರವಿರಲಿ.

**ವ್ಯಾ.**—ಅಪ್ಪಣೆ.

ವ್ಯಾಪಾರಿಯು ಹಣ ತೆಗೆದುಕೊಂಡು ಹೋದ ಕೆಲವು ದಿವಸಗಳ ಮೇಲೆ **ಬಾದಷಹ**ನು ತಾನು ಯುಕ್ತಿಯಿಂದ ವ್ಯಾಪಾರಿಯನ್ನು ಒಡಂಬಡಿಸಿದ ಬಗೆಯನ್ನು **ಬೀರಬಲ್ಲ**ನಿಗೆ ತಿಳಿಸಿದನು.

**ಬೀರ.**—ವ್ಯಾಪಾರಿಯು ಹಣವನ್ನು ತೆಗೆದುಕೊಂಡು ಹೊರಟು ಹೋದನೋ?

**ಬಾದ.**—ಅವನನ್ನು ಇಲ್ಲಿ ಇಟ್ಟುಕೊಂಡು ಮಾಡುವುದೇನು? ನಮಗೆ ಕುದುರೆಯು ಬೇಗನೆ ಬೇಕಾಗಿಲ್ಲವೆ?

**ಬೀರ.**—ಅಹುದು; ಆದರೆ—

**ಬಾದ.**—ಆದರೇನು? ನಾವು ಹಣಕೊಡದಿದ್ದರೆ ಅವನು ಅದನ್ನು ತರುವ ಬಗೆಹೇಗೆ? ಈಗ ಅವನು ಅದನ್ನು ತರಲೇಬೇಕು.

**ಬೀರ.**—ಮಹಾಸ್ವಾಮಿ, ನನಗೇನೂ ತಿಳಿಯಲೊಲ್ಲದು.

**ಬಾದ.**—ಏನು ತಿಳಿಯಲೊಲ್ಲದು? ಹಣತೆಗೆದುಕೊಂಡುದರಿಂದ ವ್ಯಾಪಾರಿಯು ಕರಾರಿಗೆ ಸಿಕ್ಕಿಕೊಂಡನೋ ಇಲ್ಲವೋ?

**ಬೀರ.**—ಒಡೆಯರೇ, ನನಗೆ ತಿಳಿದುದನ್ನು ಹೇಳಲಿಕ್ಕೆ ಅಪ್ಪಣೆಯಾದರೆ ಹೇಳುವೆನು.

**ಬಾದ.**—ನಿಶ್ಶಂಕೆಯಿಂದ ಹೇಳಬಹುದು.

**ಬೀರ.**—ತಾವು ದಡ್ಡರೊಳಗೆಲ್ಲ ಶ್ರೇಷ್ಠರೆಂದು ನನ್ನ ಅಲ್ಪಮತಿಗೆ ತೋರುತ್ತಿದೆ.

**ಬಾದ.**—'ಹಾಗೋ! ಆ ವ್ಯಾಪಾರಿಯು ಹೇಳಿದಂತೆ ಕುದುರೆ ತಂದು ಕೊಟ್ಟರೆ?

**ಬೀರ.**—ಆ ಪಕ್ಷದಲ್ಲಿ ತಮ್ಮ ಹೆಸರನ್ನು ತೆಗೆದುಹಾಕಿ ಅಲ್ಲಿ ಆ ವ್ಯಾಪಾರಿಯ ಹೆಸರನ್ನು ಬರೆಯುವೆನು.

ಈ ಉತ್ತರವನ್ನು ಕೇಳಿ **ಬಾದಷಹ**ನು ಗಹಗಹಿಸಿ ನಕ್ಕನು.

---

# ೮ನೆಯ ಅಧ್ಯಾಯ

## ಅಕ್ಬರನ ಗುಣಾತಿಶಯ

ಹಿಂದಿನ ಅಧ್ಯಾಯಗಳಲ್ಲಿ ವಿವರಿಸಿದ ವಿಷಯಗಳಿಂದ **ಅಕ್ಬರಬಾದಷಹ**ನ ಸ್ವಭಾವವು ವಾಚಕರಿಗೆ ಗೊತ್ತಾಗಿರಬಹುದು. ಅದನ್ನು ವಿಶೇಷವಾಗಿ ವರ್ಣಿಸುವುದೇ ಈ ಅಧ್ಯಾಯದ ಮುಖ್ಯವಾದ ಉದ್ದೇಶವು.

ಪೂರ್ವಕಾಲದಲ್ಲಿ ಈ ದೇಶದಲ್ಲಿ ಆಳಿದ **ರಾಮ, ಧರ್ಮ, ಚಂದ್ರಹಾಸ** ಮುಂತಾದ ಸಾರ್ವಭೌಮರೊಡನೆ **ಅಕ್ಬರಬಾದಷಹ**ನನ್ನು ಹೋಲಿಸುವುದು ಸರಿಯಲ್ಲ. ಏಕೆಂದರೆ ಇವರ ವರ್ಣನೆಯು ಏಕದೇಶೀಯವಾಗಿರುತ್ತದೆ. ಇವರ ವಿಷಯವಾಗಿ **ವ್ಯಾಸ, ವಾಲ್ಮೀಕಿ**ಗಳು ಬರೆದುದೇ ಆಧಾರವಾಗಿರುತ್ತದೆ. ಈ ಗ್ರಂಥಕರ್ತರು ತಾವು ವರ್ಣಿಸುವ ವೀರರ ಕುಂದುಗಳನ್ನು ಬಚ್ಚಿಟ್ಟಿರಬಹುದು; ಅವರ ಕೊರತೆಗಳನ್ನು ಅಣಗಿಸಿ (ಮರೆಮಾಚಿ)ರಬಹುದು. ಆದರೆ **ಅಕ್ಬರ**ನ ಚರಿತ್ರವು ಹಾಗಲ್ಲ. ಅವನ ಕಾಲದಲ್ಲಿ ಜನರಲ್ಲಿ ವಿದ್ಯವು ಹೆಚ್ಚಾಗಿತ್ತು; ಗ್ರಂಥಕಾರರು ಹೆಚ್ಚಾಗಿದ್ದರು; **ಬಾದಷಹ**ನ ಆಶ್ರಯದಲ್ಲಿದ್ದ ವಿದ್ವಾಂಸರು ಮಾತ್ರವಲ್ಲದೆ ಉಳಿದವರೂ ಅವನ ವಿಷಯದಲ್ಲಿ ತಂತಮ್ಮ ವಿಚಾರಗಳನ್ನು ಬರೆದಿಡುವುದಕ್ಕೆ ಅನುಕೂಲತೆಯಿತ್ತು. ಅವನ ಆಶ್ರಯದಲ್ಲಿದ್ದ **ಬಡೌನಿ** ಮುಂತಾದ ಗ್ರಂಥ

ಕರ್ತರು ಧರ್ಮದ್ವೇಷದಿಂದಾಗಲಿ ಬೇರೆ ಯಾವ ಕಾರಣದಿಂದಾಗಲಿ ಅವನ ಹುಳುಕನ್ನು ಹೊರಗೆ ಹಾಕಲಿಕ್ಕೆ ಹವಣಿಸುತ್ತಿದ್ದರು.

**ಪೌರಾಣಿಕ** ಕಾಲದಿಂದೀಚೆಗೆ ಈ **ಭರತಖಂಡ**ದಲ್ಲಿ ಇದ್ದ ಅರಸರಲ್ಲಿ **ಅಕ್ಬರ**ನು ಮೇಲಾಗಿದ್ದನೆನ್ನಲಿಕ್ಕೆ ಅಡ್ಡಿಯಿಲ್ಲ. ಇತ್ತಲಾಗಿ **ತೈಮೂರ್ ಲೆಂಗ್, ನಾದಿರ್ ಷಹ**ರಂತಹ ಶೂರರು ದೇಶಗಳನ್ನು ಸುಲಿದು ಕೊಳ್ಳೆ ಹೊಡೆದುಕೊಂಡು ಹೋದರು. **ಗಜನಿ ಮಹಮ್ಮದ್, ಔರಂಗ ಜೇಬ್, ನೆಪೋಲಿಯನ್ ಬೋನಾಪಾರ್ಟ**ರಂತಹ ವೀರರು ಒಂದಾದ ಮೇಲೊಂದು ದೇಶವನ್ನು ಗೆದ್ದು ಜನರಗೋಳುಹೊಯ್ದುಕೊಂಡರು. ಇವರು ಮಾಡಿದ ಕೆಲಸಗಳು ಅದ್ಭುತವಾದುವುಗಳಾದರೂ ಮನಃಪೂರ್ವಕವಾಗಿ ಹೊಗಳಲಿಕ್ಕೆ ತಕ್ಕವುಗಳಲ್ಲ. ಮನುಷ್ಯರ ಶರೀರವನ್ನು ಅಭ್ಯಾಸದಿಂದ ಬೇಕಾದ ಹಾಗೆ ಮಣಿ (ಬಗ್ಗಿ)ಸಬಹುದು; ಆದರೆ ಅವರ ಮನಸ್ಸನ್ನು ಮೇಣದಂತೆ ಮೃದುಮಾಡಿ ಅದಕ್ಕೆ ಇಷ್ಟಬಂದ ರೂಪವನ್ನು ಕೊಡುವುದು ಶ್ರಮದ ಕೆಲಸವೇ ಸರಿ; ಅದರೊಳಗೆ ಭಿನ್ನದೇಶದ, ಭಿನ್ನಜಾತಿಯ, ಭಿನ್ನಧರ್ಮದ, ಭಿನ್ನಪ್ರಕೃತಿಯ, ಭಿನ್ನಾಚಾರವಿಚಾರಗಳುಳ್ಳ ಜನರನ್ನು ಒಲಿಸಿಕೊಳ್ಳುವುದಂತೂ ಬಹು ಶ್ರಮಸಾಧ್ಯವಾದ ಕೆಲಸವೇ ಸರಿ. ಇಂತಹ ಅಘಟಿತಘಟನೆಯನ್ನು **ಅಕ್ಬರಬಾದಷಹ**ನು ಮಾಡಿದುದರಿಂದ ಅವನೇ ಹೆಚ್ಚಿನವನು; ಅವನೇ ಹೊಗಳಿಸಿಕೊಳ್ಳಲು ತಕ್ಕವನು. ಅವನ ತರುವಾಯ ಈ ದೇಶದಲ್ಲಿ ಆಳಿದ ಅರಸರಲ್ಲಿ ಈಗ ನಮ್ಮನ್ನು ಆಳುತ್ತಿರುವ ಪರಮ ಧಾರ್ಮಿಕರಾದ ಆಂಗ್ಲೇಯರ ಹೊರತು ಉಳಿದವರು ಯಾರೂ ಈ ರೀತಿಯ ಹೊಗಳಿಕೆಗೆ ಪಾತ್ರರಲ್ಲ.

ದೃಢ ಶರೀರದಲ್ಲಿ ದೃಢ ಮನಸ್ಸು ಇರುತ್ತದೆಂಬ **ಲ್ಯಾಟಿನ್** ಬಾಷೆಯ ಗಾದೆಯನ್ನು ವಾಚಕರು ಕೇಳಿರಬಹುದು. ಈ ತತ್ವಕ್ಕನುಸರಿಸಿ ಪಾಶ್ಚಾತ್ಯ ಪಂಡಿತರು ಮಾನಸಿಕ ಶಿಕ್ಷಣವೂ ಶಾರೀರಕ ಶಿಕ್ಷಣವೂ ಕೂಡಿ ನಡೆಯಬೇಕೆಂದು ಪ್ರತಿಪಾದಿಸುತ್ತಾರೆ. ಆದಕಾರಣ **ಅಕ್ಬರಬಾದಷಹ**ನ ಗುಣಗಳನ್ನು ವರ್ಣಿಸುವುದಕ್ಕಿಂತ ಮೊದಲು ಅವನ ಆಕೃತಿರೂಪಗಳನ್ನು ತುಸ ವರ್ಣಿಸುವುದು ಆವಶ್ಯಕವಾಗಿದೆ.

**ಅಕ್ಬರ**ನು ಗಿಡ್ಡನಾಗಿರಲಿಲ್ಲ; ಅವನು ಚೆಲುವನೂ, ವಿಶಾಲ ವಾದ ಎದೆಯುಳ್ಳವನೂ, ಆಜಾನುಬಾಹುವೂ ಆಗಿದ್ದನು. ಅವನ ಬಣ್ಣವು ವಸುಗೆಂಪು. ಅವನಕಾಯಶಕ್ತಿಯು ವಿಶೇಷವಾಗಿದ್ದುದರಿಂದ ಹೊಗಳುವಂತಹುದೇ ಸರಿ. ಅವನ ಎದೆಗಾರಿಕೆಯು ಪ್ರಶಂಸೆಗೆ ತಕ್ಕು ದಾಗಿತ್ತು. ಅವನು ಮಾವುತನನ್ನು ಕೊಂದುಹಾಕಿದ್ದ ಮದ್ದಾನೆಯನ್ನು ಟಣ್ಣನೆ ಹಾರಿ ಹತ್ತಿ, ಅದನ್ನು ಬೇಕಾದಕಡೆಗೆ ನಡೆಯಿಸುತ್ತಿದ್ದನು. ಅವನು **ನೆಪೋಲಿಯನ್ ಬೋನೋಪಾರ್ಟ**ನಂತೆ ಒಂದು ಸ್ಥಳ ದಿಂದ ಮತ್ತೊಂದು ಸ್ಥಳಕ್ಕೆ ಬಲುಬೇಗನೆ ಹೋಗಿ, ಹಗೆಗಳನ್ನು ಆಶ್ಚರ್ಯ ಗೊಳಿಸಿ, ಅವರನ್ನು ಮುರಿಯುಬಡಿಯುತ್ತಿದ್ದನು.* ಇದಕ್ಕೋಸ್ಕರ ಅವನು ೫೦೦ ಒಂಟೆಗಳನ್ನಿಟ್ಟದ್ದನು. ಅವನು ಇಟ್ಟ ಗುರಿಯು ತಪ್ಪುತ್ತಿರಲಿಲ್ಲ. **ಸಿಂಗರಾಮ**ವೆಂಬುದು ಒಂದು ಅವನ ಪ್ರೀತಿಯ ತುಬಾಕಿಯಾಗಿತ್ತು. ಅದರಿಂದ ಅವನು ಎಷ್ಟೋ ಮೃಗಗಳನ್ನೂ, ಹಕ್ಕಿಗಳನ್ನೂ ಹೊಡೆದಿದ್ದನು. ಅದರಿಂದಲೇ ಅವನು ರಜಪೂತ ಕಲಿಯಾದ **ಜೇಮಲ್ಲ**ನನ್ನು ಕೊಂದು ಹಾಕಿದ್ದನು.

**ಅಕ್ಬರ**ನು ಸಶಕ್ತನೂ, ಗಟ್ಟಿಗನೂ, ಧೈರ್ಯಶಾಲಿಯೂ ಆಗಿದ್ದನು. ಮದ್ದಾನೆಗಳನ್ನು ಮಣಿಸುವುದರಲ್ಲಿ ಅವನು ಬಲುಚತುರನು. ೧೫೬೧ರಲ್ಲಿ ಮಾಳವದಿಂದ ತಿರುಗಿ ಬರುವಾಗ ದಾರಿಯಲ್ಲಿ ಒಂದು ದೊಡ್ಡ ಹೆಣ್ಣುಹುಲಿ ಯನ್ನು ಕತ್ತಿಯ ಒಂದೇ ಹೊಡತದಿಂದ ಕೊಂದನು. ಮುಂದೆ ಕೆಲವು ದಿವಸಗಳ ಮೇಲೆ **ಆಗ್ರಾ**ದಲ್ಲಿರುವಾಗ **ಹವಾಯಿ** (ಗಾಳಿಯನ್ನು ಹೋಲುವ) ಎಂಬ ಪ್ರಚಂಡವಾದ ಮದ್ದಾನೆಯನ್ನೇರಿ ಅದನ್ನು **ರಣವಾಘ** ಎಂಬ ಮತ್ತೊಂದು ಬಲುಸಿಟ್ಟಿನ ಆನೆಯೊಡನೆ ಕಾದಬಿಟ್ಟನು. ಅವೆರಡು ಕಾದಾ ಡುತ್ತ ಯಮುನಾನದಿಯನ್ನು ಹೊಕ್ಕವು. ಅವುಗಳ ಅರ್ಭಟವನ್ನೂ ಕುಚೇಷ್ಟೆಗಳನ್ನೂ ನೋಡಿ ಬೆನ್ನುಗಾವಲುಗಾರರು ಹೆದರಿ ಅವನ ಹತ್ತಿರ ದಲ್ಲೇ ಈಸತೊಡಗಿದರು. **ಬಾದಷಹ**ನು ಎಳ್ಳಷ್ಟಾದರೂ ಅಂಜದೆ ವಿನೋದಪಡುತ್ತಿದ್ದನು. ಕಟ್ಟಕಡೆಗೆ ಅವನ ಆನೆಯು ಮುಂದಿನ ದಂಡೆ ಯನ್ನು ಸೇರಿತು.

---

* ಹಿಂದೆ ಪುಟ ೧೨೦-೧೨೧ನ್ನು ನೋಡಿರಿ.

ವಿಕ್ರಮಾದಿತ್ಯರಾಜ್ಯನಂತೆ **ಅಕ್ಬರ**ನು ವೇಷಬದಲಿಸಿಕೊಂಡು ಇರುಳು ಪಟ್ಟಣದೊಳಗೆ ತಿರುಗಾಡಿ ಜನರ ವಿಚಾರಗಳನ್ನು ತಿಳಿದುಕೊಳ್ಳುತ್ತಿದ್ದನು. ಒಂದುದಿನ ರಾತ್ರಿ ಒಬ್ಬನು ಅವನನ್ನು ಗೊತ್ತುಹಿಡಿದು ಬೇರೆಯವರಿಗೆ ತಿಳಿಸಿದ ಕೂಡಲೆ ಪ್ರಸಂಗಾವಧಾನವುಳ್ಳ **ಬಾದಷಹ**ನು ಮೆಳ್ಳನಂತೆ ಕಣ್ಣುಸೊಟ್ಟಮಾಡಿಕೊಂಡು ನಿಂತನು. ಉಳಿದವರು ಆತನಿದ್ದೆಡೆಗೆ ಬಂದು ನೋಡಿ ಅವನು **ಬಾದಷಹ**ನಲ್ಲೆಂದು ನಿಶ್ಚಯಿಸಿ, ಹೇಳಿದವನ ಚೇಷ್ಟೆ ಮಾಡತೊಡಗಿದರು. ಅದೇ ಸಂಧಿಯಲ್ಲಿ **ಅಕ್ಬರ**ನು ಮೆಲ್ಲಗೆ ಜಾರಿ ಕೊಂಡು ಹೋಗಿ ಅರಮನೆಯನ್ನು ಸೇರಿದನು. ಈ ಸಂಗತಿಯನ್ನು **ಅಕ್ಬರ**ನು ಸ್ವತಃ **ಆಬುಲ್‌ಫಾಜಲ್ಲ**ನಿಗೆ ಹೇಳಿದನು.

**ಅಕ್ಬರ**ನು ಸಾವಿಗೆ ಎಷ್ಟುಮಾತ್ರವೂ ಹೆದರುತ್ತಿದ್ದಿಲ್ಲವೆಂದರೆ ಅತಿ ಶಯೋಕ್ತಿಯಾಗಲಾರದು. ಈಗಿನ ಸೇನಾಪತಿಗಳಂತೆ ದಂಡಿನಿಂದ ದೂರ ವಾಗಿ ನಿಂತು ಆತನು ಕಾಳಗವನ್ನು ನಡಿಸುತ್ತಿರಲಿಲ್ಲ. ದಂಡಾಳು ಗಳು ಹೆದರುವ ಲಕ್ಷಣಕಂಡರೆ ಅವನು **ನೆಪೋಲಿಯನ್ ಬೋನೋ ಪಾರ್ಟ**ನಂತೆ ಭೂಮಿಯಲ್ಲಿ ಹೋಗಿನಿಂತು ಕಾದುತ್ತಿದ್ದನು. ಜೀವಕ್ಕೆ ಅಪಾಯಸಂಭವಿಸಬಹುದೆಂಬ ಹೆದರಿಕೆಯು ಅವನಿಗೆ ಬರುತ್ತಿದ್ದಿಲ್ಲ. ಈ ಸಂಬಂಧದಿಂದ ಅವನು ಒಮ್ಮೆ **ಅಬುಲ್ಫಾಜಲ್ಲ**ನಿಗೆ ಹೇಳಿದ್ದೇನಂದರೆ:— ನಾನು **ದೇವರ** ಮನಸ್ಸಿಗೆ ಬಾರದ ಮಹತ್ವಾಕಾಂಕ್ಷೆಯುಳ್ಳವನಾದರೆ ಅಥವಾ ದೇವರಿಗೆ ಬೇಡಾದ ಕೆಲಸವನ್ನು ಕಯ್ಕೊಂಡರೆ, ದೇವರು ನನಗೆ ಮರಣವನ್ನು ತರಲಿ. ದೇವರ ಇಚ್ಛೆಯ ವಿರುದ್ಧವಾಗಿ ಜೀವಿಸುವುದು ಎಂದೂ ಸರಿಯಾಗಲಾರದು. ೧೫೬೨ರಲ್ಲಿ ಸಂಯುಕ್ತಪ್ರಾಂತದ **ಎಟವಾ** ಜಿಲ್ಲೆಯ ೮ ಹಳ್ಳಿಯ ಜನರು ಪುಂಡಾಟಮಾಡತೊಡಗಿದ್ದಾರೆಂಬ ಸು ದ್ದಿಯು ಬಂದುದರಿಂದ ೨೦೦ ಸ್ವಾರರನ್ನೂ ಕೆಲವು ಆನೆಗಳನ್ನೂ ತನ್ನ ಸಂಗಡ ತೆಗೆದುಕೊಂಡು ಬಂಡುಗಾರರ ಮುಖ್ಯಹಳ್ಳಿಯಾದ **ಪರೊಂಖ** ಎಂಬಲ್ಲಿಗೆ ಹೋದನು. ೪೦೦ ಬಿಲ್ಲುಗಾರರು ಈ ದಂಡಿನ ಮೇಲೆ ಬಾಣ ವೃಷ್ಟಿಯನ್ನು ಕರೆಯಲಾರಂಭಿಸಿದರು. ದಂಡಿನವರು ಚದರಿದರು. **ಅಕ್ಬ ರ**ನು ಅವರನ್ನು ಒಟ್ಟುಗೂಡಿಸುವ ಪ್ರಯತ್ನಮಾಡದೆ ಧೈರ್ಯದಿಂದ ಊ ರನ್ನು ಒಳನುಗ್ಗಿದನು. ಆವನ ಆನೆಯ ಕಾಲು ಕಾಳಿನ ಹಗೆಯೊಳಗೆ

ಹೋಯಿತು; ಹಿಂದೆ ಕುಳಿತವನು ಅವನ ಮೇಲೆ ಬಿದ್ದನು; ಶತ್ರುಗಳ ಏಳು ಬಾಣಗಳು ಅವನಿಗೆ ತಗಲಿದವು. ಇಷ್ಟಾದರೂ ಹೆದರದೆ ಯುಕ್ತಿಯಿಂದ ಆನೆಯನ್ನು ಎಬ್ಬಿಸಿ ಮುಂದರಿದು ಹೋಗಿ ಮುಖ್ಯಸ್ಥನ ಮನೆಯನ್ನು ಕೆಡವಿಸಿ ಅದಕ್ಕೆ ಬೆಂಕಿ ಹಚ್ಚಿಸಿದನು. ೧೦೦೦ ಮಂದಿ ಬಂಡುಗಾರರು ಅಗ್ನಿನಾರಾಯಣನಿಗೆ ಆಹುತಿಯಾದರು. ಅವನ ಶೌರ್ಯಧೈರ್ಯ ಸಾಹಸಗಳನ್ನು ನೋಡಿ ಬಂಡುಗಾರರೂ ದಿಕ್ಕುಪಾಲಾಗಿ ಶರಣುಬಂದುದ ರಿಂದ **ಅಕ್ಬರ**ನು ಜಯಭೇರಿಯನ್ನು ಹೊಡಿಸುತ್ತ ಮರಳಿ ಬಂದನು. ಇದು ಅತ್ಯದ್ಭುತಸಾಹಸವಲ್ಲವೇ?

ಆಳಿಗೇ ಆಗಲಿ ಅರಸನಿಗೇ ಆಗಲಿ ವ್ಯವಹಾರಜ್ಞಾನವು ಅವಶ್ಯ ವಾಗಿರುತ್ತದೆ. ಆದರೆ ಕೆಲವರ ಮನಸ್ಸು ಅಸಂಸ್ಕೃತವಾಗಿರುತ್ತದೆ. ಅವ ರಲ್ಲಿ ವ್ಯವಹಾರಜ್ಞಾನವು ಇಲ್ಲದುದರಿಂದ ಅವರ ವಿಚಾರಶಕ್ತಿಯು ಬೆಳೆದಿ ರುವುದಿಲ್ಲ. ಒಮ್ಮೆ ಬರಗಾಲವು ಬಂದಿದ್ದಾಗ ಒಬ್ಬ ಬಡಮನುಷ್ಯನು ಜೀವ ನಕ್ಕೆ ಕಾಳು ದೊರೆಯುವುದಿಲ್ಲವೆಂದು ಒಬ್ಬ ಅರಸನ ಮುಂದೆ ಹೇಳಲು, ಅವನು “ ಹಾಗಾದರೆ ಹಾಲನ್ನವನ್ನುಣ್ಣು ” ಎಂದು ಹೇಳಿದ ಸಂಗತಿಯನ್ನು ಎಲ್ಲರೂ ಕೇಳಿರಬಹುದು. ಈ ತರದ ಅಜ್ಞಾನಾಂಧಕಾರದಲ್ಲಿ ಮುಳು ಗಿರುವ ಅರಸರು ಕನಿಕರಕ್ಕೆ ಪಾತ್ರರಲ್ಲವೇ ?

**ಅರಿಸ್ಟಾಟಲ**ನಂತಹ ಗುರುವಿನ ಕಯ್ಕೆಳಗಿದ್ದ **ಮ್ಯಾಸಿಡೋನಿಯಾ** ದೇಶದ **ಬಾದಷಹ**ನಾದ **ಅಲೆಗ್ಝಾಂಡರ್, ಡೇನರ** ಕಾಟದಿಂದ ತಪ್ಪಿ ಸಿಕೊಂಡು ಜಗತ್ತಿನ ಅನುಭವವನ್ನು ಹೆಚ್ಚಾಗಿ ಸಂಪಾದಿಸಿದ **ಆಲ್ಫ್ರೆಡ್ ಮಹಾಶಯ** ತನ್ನ ಪ್ರಜೆಗಳನ್ನು ಅಭಿವೃದ್ಧಿಗೆ ತರಲಿಕ್ಕೆ ಸಾಧಾರಣ ಬಡ ಗಿಯಂತೆ ಇಂಗ್ಲೆಂಡ್‌ದೇಶದೊಳಗಿರುವ **ಡೆಪ್ಟಫರ್ಡಿ**ನಲ್ಲಿ ಕೆಲಸಮಾಡಿದ ರಷ್ಯಾದೇಶದ ಅರಸನಾದ **ಪೀಟರ್ ಮಹಾಶಯ,*** ಇವರಂತೆ **ಅಕ್ಬರ ಬಾದಷಹ**ನೂ ಅಸಾಧಾರಣಪುರುಷನಾಗಿದ್ದನು. **ಹುಮಾಯೂನ**ನು ರಾಜ್ಯವನ್ನು ಕಳೆದುಕೊಂಡು ಊರಿಂದೂರಿಗೆ ಓಡಿಹೋಗುತಿದ್ದಾಗ **ಅಕ್ಬ**

---

* ಪೀಟರ್ ಮಹಾಶಯನು ೧೬೭೨ರಲ್ಲಿ ಹುಟ್ಟಿದನು. ಇವನು ಜರ್ಮನಿ, ಹಾಲೆಂಡ್, ಇಂಗ್ಲೆಂಡ್ ಮುಂತಾದ ದೇಶಗಳಿಗೆ ಹೋಗಿ, ಬೇರೆ ಬೇರೆ ಕಲೆಗಳನ್ನು ಕಲಿತು ತನ್ನ ಪ್ರಜೆಗಳನ್ನು ತಿದ್ದುಪಾಟಿನದಾರಿಗೆ ತಂದು ರಷ್ಯದೇಶವನ್ನು ಅಭಿವೃದ್ಧಿಗೆ ತಂದು ೧೭೨೫ರಲ್ಲಿ ತೀರಿಹೋದನು.

ರನು ದಾರಿಯಲ್ಲಿ ಹುಟ್ಟಿದನು. ಅವನು ಮುಂದೆ ೭-೮ ವರ್ಷದವನಾಗುವ ವರೆಗೆ ತನ್ನ ಚಿಕ್ಕಪ್ಪನ ಮನೆಯಲ್ಲಿ ಸೆರೆಯಾಳಾಗಿರಬೇಕಾಯಿತು. ತರುವಾಯ **ಹುಮಾಯೂನ**ನು **ಕಾಬೂಲ**ನ್ನು ಹಿಡಿದುಕೊಂಡ ಬಳಿಕ ತನ್ನ ತಾಯಿತಂದೆಗಳಿಗೆ ದೊರೆತನು. ಆಗ **ಹುಮಾಯೂನ**ನ ರಾಜ್ಯವು ಬಹು ಸಣ್ಣದಾಗಿತ್ತು; ದೇಶದಲ್ಲಿ ಶಾಂತಿಯೂ ಇರಲಿಲ್ಲ. **ಹುಮಾಯೂನ**ನು ಈ ದೇಶಕ್ಕೆ ಒಳನುಗ್ಗಿದ ಮೇಲೆ ಮೊಗಲರಿಗೆ **ಸರಹಿಂದ್, ಪಾಣಿಪಟ್**ಗಳಲ್ಲಿ ಗೆಲವು ಆದರೂ ದೊಡ್ಡ ರಾಜ್ಯವಾವುದೂ ದೊರೆಯಲಿಲ್ಲ. ಮುಂದೆ **ಅಕ್ಬರ**ನು ತನ್ನ ಸ್ವಂತಶ್ರಮದಿಂದ ರಾಜ್ಯವನ್ನು ಬೆಳೆಯಿಸಿ ಘನತೆಯನ್ನು ಹೊಂದಿದನು. ಆದಕಾರಣ ಅವನು ಸಿರಿಯಿಂದ ಎಚ್ಚರತಪ್ಪಲಿಲ್ಲ; ಮತ್ತು ಅಧಿಕಾರದಿಂದ ಮದಾಂಧನಾಗಲಿಲ್ಲ.

**ಅಕ್ಬರ**ನು ಬಹಳ ದಯಾಳುವಾಗಿದ್ದನು. ಅವನಲ್ಲಿ ಕನಿಕರವು ಹೆಚ್ಚಾಗಿತ್ತು. ಚಿಕ್ಕಂದಿನಲ್ಲೇ ಅವನಲ್ಲಿ ಈ ಗುಣವು ತೋರುತ್ತಿತ್ತು. ಹಿಂದೆ ವಿವರಿಸಿದಂತೆ (ಪುಟ ೨೩) **ಬೈರಾಮ್‌ಖಾನ**ನು **ಹೇಮು**ವನ್ನು ಕೊಲ್ಲಲಿಕ್ಕೆ ಕತ್ತಿಯನ್ನು ಕೊಟ್ಟಾಗ ಕನಿಕರಪಟ್ಟು, ತನ್ನಿಂದ ಅವನನ್ನು ಕಡಿಯುವುದಾಗದೆಂದು ಕತ್ತಿಯನ್ನುಕೆಳಗಿಟ್ಟನು. ಹಾಗೆಯೇ **ಪ್ರತಾಪಸಿಂಗ**ನು ನಿರ್ವಿಣ್ಣನಾದಬಳಿಕ, **ಬಾದಷಹ**ನು ಅವನಿಗೆ ಹೆಚ್ಚು ಉಪದ್ರವ ಕೊಡಲಿಕ್ಕೆ ಮನಸ್ಸುಮಾಡಲಿಲ್ಲ.

**ಅಕ್ಬರ**ನಲ್ಲಿ ಕ್ಷಮಾಗುಣವು ಹೆಚ್ಚಾಗಿತ್ತು. ತಮಗೆ ಕೇಡುಬಗೆದವರು ತಮ್ಮ ಕಯ್ಯಲ್ಲಿ ಸಿಕ್ಕಿದ ಬಳಿಕ ಅವರನ್ನು ಕ್ಷಮಿಸಿ ಬಿಟ್ಟುಬಿಡುವುದು ದೊಡ್ಡ ಗುಣವೇ ಸರಿ. ಇಂತಹ ಗುಣವುಳ್ಳ ಅರಸರು ಅಪೂರ್ವ. ಅರಸುತನದಿಂದ ಕೊಬ್ಬೇರಿದ ಸ್ವೇಚ್ಛಾಚಾರಿಗಳಾದ ರಾಜರು, ತಮ್ಮ ಹಗೆಗಳು ಅಥವಾ ದ್ರೋಹಿಗಳು ಕೈಗೆ ಸಿಕ್ಕಿದ ಕೂಡಲೆ ಅವರನ್ನು ಪರಿಪರಿಯಿಂದ ಪೀಡಿಸಿ, ಅವರ ಪ್ರಾಣಹರಣವನ್ನು ಮಾಡಿದ ಉದಾಹರಣಗಳು ಎಲ್ಲಾ ದೇಶಗಳ ಇತಿಹಾಸಗಳಲ್ಲಿಯೂ ಹೇರಳವಾಗಿ ದೊರೆಯುತ್ತವೆ. ಆದರೆ ಇಂತಹವರನ್ನು ಕ್ಷಮಿಸಿ, ಹಾದಿಗೆ ತರಲಿಕ್ಕೆ ಪ್ರಯತ್ನಮಾಡಿದ ಚಕ್ರವರ್ತಿಯು **ಅಕ್ಬರ**ನು ಒಬ್ಬನೇ ಎಂದರೂ ಸಲ್ಲುವುದು. ರಾಜದ್ರೋಹಿಗಳೇ ಆಗಲಿ, ಶತ್ರುಗಳೇ ಆಗಲಿ ತನಗೆ ವಶವಾದ ಬಳಿಕ

ಅವರು ಪಶ್ಚಾತ್ತಾಪಪಟ್ಟರೆಂದರೆ ತೀರಿತು; **ಬಾದಷಹ**ನು ಅವರಿಗೆ ಮತ್ತೆ ಆಶ್ರಯಕೊಟ್ಟು ಅವರನ್ನು ಸಲಹುತ್ತಿದ್ದನು. ಹಿಂದಿನ ಅಧ್ಯಾಯಗಳಲ್ಲಿ ವಿವರಿಸಿದಂತೆ, ಅವನು ಸೋತ ಅರಸರ ಹೆಂಡರುಮಕ್ಕಳನ್ನು ಸೆರೆಯಾಳುಗಳನ್ನಾಗಿ ಮಾಡುವ ಕಾಡುಪದ್ಧತಿಯನ್ನು ನಿಲ್ಲಿಸಿದನು. ಈ ಕ್ಷಮಾಗುಣದಲ್ಲಿ ಅವನು ಅಪ್ರತಿಮನಾಗಿದ್ದನೆನ್ನಲಿಕ್ಕೆ ಅಡ್ಡಿಯಿಲ್ಲ; ಅದೇಕೆ? ಈ ಗುಣವು ಅವನಲ್ಲಿ ಅತಿಶಯವಾಗಿತ್ತೆಂದು ಕೆಲವರು ಅವನಲ್ಲಿ ದೋಷವನ್ನೆಣಿಸುತ್ತಾರೆ. ಅವನಿಗೆ ತಾಯಿತಂದೆಗಳಲ್ಲಿ ಭಕ್ತಿಯೂ, ಮಕ್ಕಳುಗಳಲ್ಲಿ ಪ್ರೇಮವೂ, ಪತ್ನಿಯರುಗಳಲ್ಲಿ ಅನುರಾಗವೂ ವಿಶೇಷವಾಗಿದ್ದುವು . . . . . . ಎಂದು **ಮ್ಯಾಲೆಸನ್** ಸಾಹೇಬರು ಬರೆಯುತ್ತಾರೆ. ಅವನು ಪಿತೃದ್ರೋಹಿಯಾದ **ಸೆಲೀಮ**ನನ್ನು ಕ್ಷಮಿಸಿ ಅವನಿಗೆ ಪಟ್ಟಗಟ್ಟಿದುದೇ ಅವನ ಪ್ರೇಮಕ್ಕೆ ದೃಷ್ಟಾಂತವು.

**ಅಕ್ಬರ**ನು ತಾನು ಸ್ವತಃ ಕಠಾರಿಯ ಗೆಳೆಯನಾಗಿದ್ದರೂ, ವಿದ್ಯಾಭಿಮಾನಿಯಾಗಿದ್ದನು. ಅವನಿಗೆ ಒಣಹೆಮ್ಮೆಯವರು ಸೇರುತ್ತಿರಲಿಲ್ಲ. **ಉಲ್ಮೆ**ಯವರು ಈ ತರದ ಜನರಾಗಿದ್ದುದರಿಂದ ಅವನು ಸ್ವಾಭಾವಿಕವಾಗಿ ಅವರನ್ನು ಜರಿಯುತ್ತಿದ್ದನು. ಮುಸಲ್ಮಾನರು ಅವನನ್ನು ಎಷ್ಟು ಹೀಯಾಳಿಸಿದರೂ, ಅವನು ವಿದ್ಯಾಪಕ್ಷಪಾತಿಯಾಗಿ ಇದ್ದನು ಎನ್ನಲು ಅಡ್ಡಿಯಿಲ್ಲ. ಅವನು ಹಿಂದೆ ಹೆಸರುವಾಸಿಯಾಗಿದ್ದ **ಭೋಜರಾಜ**ನಷ್ಟು ವಿದ್ಯಾಪಕ್ಷಪಾತಿಯಾಗದಿದ್ದರೂ, **ಭೋಜರಾಜ**ನ ತರುವಾಯ ಈ ದೇಶದಲ್ಲಿ ಆಳಿದ ಅರಸರಿಗಿಂತ ಹೆಚ್ಚಾಗಿ ವಿದ್ವಾಂಸರಿಗೆ ಆಶ್ರಯಕೊಟ್ಟನೆನ್ನಬಹುದು. **ಅಬುಲ್‌ಫಾಯಿಜಿ, ಅಬುಲ್‌ಫಾಜಲ್, ಬೀರಬಲ್, ತೋಡರಮಲ್, ಬಡೌನಿ** ಮುಂತಾದವರು ಅವನ ದರಬಾರಿನ ರತ್ನಗಳಾಗಿದ್ದರು. ಮತವಿಷಯಗಳಲ್ಲಿ ವಿರುದ್ಧರಾದ ಮುಸಲ್ಮಾನರಿಗೂ ಅವನು ಆಶ್ರಯ ಕೊಡುತ್ತಿದ್ದನು. **ಬಡೌನಿ**ಯು ಈ ತರದ ಗೃಹಸ್ಥನಾಗಿದ್ದನು. ಇದೇ ವರ್ಗದ ಮತ್ತೊಬ್ಬ ಗೃಹಸ್ಥನು **ಅಕ್ಬರ**ನ **ಧಾತ್ರಿ**ಯ ಮಗನಾದ **ಖಾನ-ಈ-ಅಜಮ್ ಮಿರ್ಜಾ** ಎಂಬುವನಾಗಿದ್ದನು. ಇವನು ಮೊದಲು **ಬಾದಷಹ**ನ ಹೊಸಮತವನ್ನು ಜರಿದು **ಅಬುಲ್‌ಫಾಯಿಜಿ, ಅಬುಲ್‌ಫಾಜಲ್ಲ**ರನ್ನು ಹಾಸ್ಯಮಾಡುತ್ತಿದ್ದನು. ಮುಂದೆ ಅವನು **ಮಕ್ಕಾ**

ಯಾತ್ರೆಗೆ ಹೋದನು. ಅಲ್ಲಿಯ ಮುಲ್ಲಾಗಳು ಮೋಸದಿಂದ ಅವನ ದುಡ್ಡನ್ನೆಲ್ಲಾ ಕಿತ್ತುಕೊಂಡುದರಿಂದ, ಅವನಿಗೆ ಅವರ ಮೇಲೆ ಬೇಸರವು ಹುಟ್ಟಿತು. ತಿರುಗಿ ಬಂದ ಬಳಿಕ ಅವನು **ಬಾದಷಹನ** ಮತಕ್ಕೆ ಸೇರಿದನು. ಅವನು ವಿದ್ಯಾವಂತನೂ ಕಬ್ಬಿಗನೂ ಆಗಿದ್ದನು.*

**ಅಕ್ಬರಬಾದಷಹನ** ಆಶ್ರಯದಿಂದ ಎಷ್ಟೋ ಹೊಸಗ್ರಂಥಗಳು ಹುಟ್ಟಿದುವು. **ಬೈರಾಮ್‌ಖಾನನ** ಮಗನಾದ **ಮಿರ್ಜಾಅಬ್ದುಲ್‌ರಹಿಮನು, ಬಾದಷಹನ** ದರಬಾರಿನಲ್ಲಿ **ಖಾನ್‌ಖಾನನು** (ಶ್ರೇಷ್ಠನಾದ ಸರದಾರನು) ಆಗಿದ್ದನು. ಇವನು ಕಾಳಗದಲ್ಲಿ ಧುರೀಣನಾಗಿದ್ದಷ್ಟೇ, ವಿದ್ಯದಲ್ಲಿಯೂ ಪ್ರವೀಣನಾಗಿದ್ದನು. ಇವನು **ತುರ್ಕಿ**ಭಾಷೆಯಲ್ಲಿದ್ದ **ಬಾಬರನ** ಸ್ವಚರಿತ್ರವನ್ನು **ಫಾರ್ಸಿ** ಭಾಷೆಗೆ ಪರಿವರ್ತಿಸಿ ಅದನ್ನು **ಬಾದಷಹ**ನಿಗೆ ಕಾಣಿಕೆಯಾಗಿ ಕೊಟ್ಟನು. **ನಿಜಾಮುದ್ದೀನ ಅಹಮ್ಮದ**ನೆಂಬ ಮತ್ತೊಬ್ಬ ಗೃಹಸ್ಥನು **ತಬಾಖತ್-ಈ-ಅಕ್ಬರೀ** ಅಥವಾ "**ಅಕ್ಬರನ ಆಳಿಕೆಯ ವರ್ಣನೆ**" ಎಂಬ ಪುಸ್ತಕವನ್ನು ಬರೆದನು. ಅದರಂತೆ **ಅಬುಲ್‌ಕಾದಿರ್ ಬಡೌನಿ** ಎಂಬುವನು **ತರೀಖ-ಈ-ಬಡೌನಿ**† ಎಂಬ ಇತಿಹಾಸ ಗ್ರಂಥವನ್ನು ಬರೆದನು. ಇವನೇ ಸಂಸ್ಕೃತ **ರಾಮಾಯಣ**ವನ್ನೂ, **ಮಹಾಭಾರತದ** ಕೆಲವು ಭಾಗಗಳನ್ನೂ **ಪಾರ್ಸಿ**ಭಾಷೆಗೆ ಪರಿವರ್ತಿಸಿದನು. ಇವುಗಳ ಹೊರತು **ಅಬುಲ್‌ಫಾಜಲ್ಲನ ಅಯಿನ್-ಅಕ್ಬರಿ, ಅಬುಲ್‌ಫಾಯಿಜಿಯ ಬೈಬಲ್ಲಿನ** ಪರಿವರ್ತನ—ಇವೇ ಮುಂತಾದುವುಗಳು ಹೆಸರಾಗಿವೆ.

---

* ಇವನು ಚಮತ್ಕಾರವಾಗಿ ಮಾತನಾಡುವನೆಂದು ಹೆಸರಾಗಿದ್ದನು. ಈ ಮಾತುಗಳಲ್ಲಿ ಒಂದನ್ನು ಇಲ್ಲಿ ಕೊಡುತ್ತೇವೆ. ಮನುಷ್ಯನು ನಾಲ್ಕು ಮಂದಿ ಹೆಂಡಂದಿರನ್ನು ಮಾಡಿಕೊಳ್ಳಬೇಕು. ಖೊರಾಸಾನಿ ಜಾತಿಯ ಹೆಂಡತಿಯು ಮನೆಗೆಲಸವನ್ನು ಚೆನ್ನಾಗಿ ಮಾಡುವಳು; ಹಿಂದೂ ಜಾತಿಯ ಹೆಂಡತಿಯು ಮಕ್ಕಳನ್ನು ಚೆನ್ನಾಗಿ ನೋಡಿಕೊಳ್ಳುವಳು; ಪಾರ್ಸಿ ಜಾತಿಯ ಮಡದಿಯು ಮಾತಿನಲ್ಲಿ ಜಾಣಳಾಗಿರುವಳು; ತುರ್ಕಿ ಜಾತಿಯ ಹೆಂಡತಿಯು ಮೇಲೆ ಹೇಳಿದ ಮೂರು ಮಂದಿ ಹೆಂಡಂದಿರಿಗೆ ಎಚ್ಚರಗೊಡುವಂತೆ ಬೋಧಿಸಲು ಯೋಗ್ಯಳಾಗಿರುವಳು.

† ಬಡೌನಿಯು ಈ ಗ್ರಂಥವನ್ನು ಅಕ್ಬರನು ಬದುಕಿದ್ದಾಗ ಹೊರಗೆ ತೆಗೆಯಲಿಲ್ಲ. ಅವನು ೧೬೦೫ರಲ್ಲಿ ತೀರಿಹೋದ ಬಳಿಕ ಜಹಂಗೀರನ ಆಳಿಕೆಯಲ್ಲಿ ಇದು ಹೊರಗೆ ಬಂತು. ಇದರಲ್ಲಿ ಅಕ್ಬರನ ಮತದ ವಿಷಯದಲ್ಲಿ ತಪ್ಪುಗಳು ತೋರಿಸಲ್ಪಟ್ಟಿವೆ.

**ಅಕ್ಬರ**ನಿಗೆ ಓದುಬರಹ ಬಾರದಿದ್ದರೂ ಅವನಿಗೆ ಪುಸ್ತಕಗಳ ಮೇಲೆ ಪ್ರೀತಿಯು ವಿಶೇಷವಾಗಿತ್ತು. ಅವನ ಪುಸ್ತಕಾಲಯದಲ್ಲಿ ಬೇರೆ ಬೇರೆ ವಿಷಯಗಳ ನೂರಾರು ಗ್ರಂಥಗಳಿದ್ದುವು. ಅವನು ಹೊಸಪುಸ್ತಕ ಗಳನ್ನು ಬರೆದವರಿಗೆ ಅಥವಾ ತಂದವರಿಗೆ ಬಹುಮಾನಕೊಡುತ್ತಿದ್ದನು; ಪ್ರತಿದಿವಸ ಯಾವುದಾದರೊಂದು ಪುಸ್ತಕವನ್ನೋದಿಸಿ, ಬಿಟ್ಟಲ್ಲಿ ತನ್ನ ಕಯ್ಯಿಂದೊಂದು ಗುರುತುಮಾಡಿ, ಓದಿದವನಿಗೆ ಅವನ ಶ್ರಮಕ್ಕನುಸಾರ ವಾಗಿ ಹಣವನ್ನು ಕೊಟ್ಟು ಕಳುಹುತ್ತಿದ್ದನು. ಶಾಸ್ತ್ರೀಯಪುಸ್ತಕಗಳಲ್ಲಿ ಯೂ, ಐತಿಹಾಸಿಕಗ್ರಂಥಗಳಲ್ಲಿಯೂ, ತತ್ವವಿಚಾರದ ಪುಸ್ತಕಗಳಲ್ಲಿಯೂ ಅವನ ಮುಂದೆ ಓದದಿದ್ದ ಪುಸ್ತಕವು ಒಂದಾದರೂ ಇರಲಿಲ್ಲವೆಂದು **ಅಬುಲ್‌ಫಾಜಲ್ಲ**ನು ಬರೆಯುತ್ತಾನೆ.

**ಅಕ್ಬರ**ನು ಬಹು ಬುದ್ಧಿಶಾಲಿಯೂ, ಶೋಧಕನೂ ಆಗಿದ್ದನು. ತೋಪುಗಳನ್ನೂ ಬೇರೆ ಆಯುಧಗಳನ್ನೂ ಹೊಯ್ಯುವ ಕಲೆಯು ಅವನಿಗೆ ಚೆನ್ನಾಗಿ ಗೊತ್ತಿತ್ತು. ಇವುಗಳನ್ನು ಮಾಡುವ ಔದ್ಯೋಗಿಕಶಾಲೆಗಳು ಅರಮನೆಯ ನೆರೆಯಲ್ಲೇ ಇದ್ದುವು. **ಬಾದಷಹ**ನು ಆಗಾಗ ಅಲ್ಲಿಗೆ ಹೋಗಿ, ಹೀಗೆ ಹೀಗೆ ಮಾಡಬೇಕೆಂದು ಶಿಲ್ಪಿಗಳಿಗೆ ಹೇಳುತ್ತಿದ್ದನು. ಅವನು ಒಂದು ಬಂಡಿಯನ್ನೂ, ತುಬಾಕಿಗಳನ್ನು ಸ್ವಚ್ಛಮಾಡುವ ಚಕ್ರ ವನ್ನೂ, ಆನೆಗಳ ಮೇಲೆ ಹಾಕುವ ಸಾಮಾನುಗಳನ್ನೂ, ತನ್ನ ಅಂದಾಜಿನ ಹೊಸಮಾದರಿಯಂತೆ ಮಾಡಿಸಿದನೆಂದು **ಅಯಿನ್-ಅಕ್ಬರಿ**ಯಲ್ಲಿ ಬರೆ ದಿದೆ. ರಾಜ್ಯದ ಎಲ್ಲ ಕೆಲಸಗಳಲ್ಲಿಯೂ, ಅವನು ಅನುಭವಸ್ಥರಾದ ಅಧಿಕಾರಿಗಳು ಸಹ ತಲೆದೂಗುವಂತಹ ಆಕ್ಷೇಪಣೆಗಳನ್ನು ಮಾಡು ತ್ತಿದ್ದನು.

**ಅಕ್ಬರ**ನಲ್ಲಿ ಶೋಧಕಬುದ್ಧಿಯು ಹೆಚ್ಚಾಗಿತ್ತೆಂದು ಮೇಲೆ ಹೇಳಿ ರುತ್ತದೆಯಷ್ಟೆ. ಅವನು **ಗಂಗಾ**ನದಿಯ ಉಗಮುವನ್ನು* ಗೊತ್ತುಮಾಡ ಲಿಕ್ಕೆ ಕೆಲವು ಜನರನ್ನು ಕಳುಹಿದನು. ಒಂದು ದಿನ **ಇಬಾದತ್‌ಖಾನೆ** ಯಲ್ಲಿ ಬೇರೆ ಬೇರೆ ಜನಾಂಗಕ್ಕೆ ಸೇರಿದ ವಿದ್ವಾಂಸರು ತಮ್ಮ ತಮ್ಮ ನುಡಿಗಳು ಮೊತ್ತಮೊದಲು ಹುಟ್ಟಿದನೆಂತಲೂ, ಕೂಸುಗಳಿಗೆ ಅವುಗಳ

* ಮೂಲ.

ಸಂರಕ್ಷಕರು ತಮ್ಮ ತಮ್ಮ ಭಾಷೆಗಳನ್ನು ಕಲಿಸದಿದ್ದರೆ, ಅವು ತಾವು ಅನಾದಿಯಾದುದೆಂದು ಹೇಳುವ ನುಡಿಯನ್ನೇ ಆಡುವವೆಂತಲೂ, ಪ್ರತಿಪಾದಿಸಿದರು. ಈ ಮಾತನ್ನು ಪರೀಕ್ಷಿಸುವುದಕ್ಕೆ **ಬಾದಷಹ**ನು ಹನ್ನೆರಡು ಕೂಸುಗಳನ್ನು ತರಿಸಿ, ಅವು ಯಾವ ನುಡಿಯ ಶಬ್ದಗಳನ್ನಾದರೂ ಕೇಳದಂತೆ ಹನ್ನೆರಡು ಮಂದಿ ಮೂಕರಿಂದ ಸಂರಕ್ಷಿಸಲ್ಪಡಬೇಕೆಂದು ಕಟ್ಟಮಾಡಿದನು. ಮುಂದೆ ಹನ್ನೆರಡು ವರ್ಷಗಳು ತುಂಬಿದ ಬಳಿಕ ಆ ಹುಡುಗರನ್ನು ದರಬಾರಿಗೆ ತರಿಸಿ ನೋಡಲು, ಒಬ್ಬರಿಗೂ ಮಾತಾಡಲಿಕ್ಕೆ ಬರುತ್ತಿರಲಿಲ್ಲ. ಆಗ **ಬಾದಷಹ**ನು ಯಾವ ನುಡಿಯೂ ಅನಾದಿಯಲ್ಲವೆಂದು ಸರ್ವಾನುಮತದಿಂದ ನಿರ್ಣಯಿಸಿದನು.

**ಅಕ್ಬರ**ನ ಸ್ಮರಣಶಕ್ತಿಯು ಅದ್ಭುತವಾಗಿತ್ತು. ಅವನಿಗೆ ತನ್ನ ಎಲ್ಲಾ ಆನೆಕುದುರೆಗಳ ಹೆಸರುಗಳು ಗೊತ್ತಿದ್ದುವು. ಅವನು ತನ್ನ ಕಯ್ಕೆಳಗಿನವರು ಎಂದೆಂದು ಏನೇನು ಮಾಡಿದರೆಂಬುದನ್ನು ನೆನಪಿನಲ್ಲಿಡುತ್ತಿದ್ದನು. ಇದಲ್ಲದೆ ಅವನು ಮನುಷ್ಯರ ಪರೀಕ್ಷೆಯನ್ನು ಬಲು ಬೇಗನೆ ಮಾಡುತ್ತಿದ್ದನು.* ಇದಕ್ಕೊಂದು ದೃಷ್ಟಾಂತವುಂಟು. ಅದೇನೆಂದರೆ:—**ಬೀರಬಲ್ಲ**ನೆಂಬೊಬ್ಬ ಬ್ರಾಹ್ಮಣನು **ಅಕ್ಬರ**ನ ಮಂತ್ರಿಯಾಗಿದ್ದನಷ್ಟೆ; ಒಂದು ದಿನ **ಬಾದಷಹನ** ಒಬ್ಬ ಮುಸಲ್ಮಾನಜಾತಿಯ ರಾಣಿಯು, ಈ **ಬೀರಬಲ್ಲ**ನ ಕೆಲಸವನ್ನು ತನ್ನ ತಮ್ಮನಿಗೆ ಕೊಡಬೇಕೆಂದು ಹಟಹಿಡಿದಳು. **ಬಾದಷಹ**ನು ಅವನು ಆ ಕೆಲಸಕ್ಕೆ ಯೋಗ್ಯನಲ್ಲವೆಂದು ಎಷ್ಟು ಹೇಳಿದರೂ ಆಕೆಯು ಕೇಳಲಿಲ್ಲ. ಆಗ **ಬಾದಷಹ**ನು "ಒಳ್ಳೆಯದು; ಅವನು ನಾಳೆ ದರಬಾರಿಗೆ ಬರಲಿ; ನಾನು ಕೇಳುವ ಪ್ರಶ್ನೆಗೆ ಅವನು ಸರಿಯಾದ ಉತ್ತರವನ್ನು ಕೊಟ್ಟರೆ, ಅವನಿಗೇ **ಬೀರಬಲ್ಲ**ನ ಕೆಲಸವನ್ನು ಕೊಡುವೆನು" ಎಂದು ಮಾತು ಕೊಟ್ಟನು. ಗೊತ್ತಾದಂತೆ ಮರುದಿವಸ **ಬಾದಷಹ**ನ ಬಾವಮೈದನು ದರಬಾರಿಗೆ ಬರಲು, **ಬಾದಷಹ**ನು ಅವನಿಗೆ "ಈಗ ಈ ದರಬಾರಿನ ಜನರ ಮನಸ್ಸಿನಲ್ಲಿ ಯಾವ ವಿಚಾರವಿರುತ್ತದೆ?" ಎಂದು ಕೇಳಲು, ಆ ಶುಂಠನು ಉತ್ತರ ಕೊಡಲಿಕ್ಕೆ

---

* ಹಿಂದೂ ಧರ್ಮದ ಜೋಗಿಗಳಿಂದ ಜನರ ಪರೀಕ್ಷೆಯನ್ನು ಮಾಡುವ ಕಲೆಯನ್ನು ಬಾದಷಹನು ಕಲಿತಿದ್ದನೆಂದು ಮುಸಲ್ಮಾನ ಇತಿಹಾಸಕರ್ತನಾದ ಬಡಾಉನಿಯು ಬರೆಯುತ್ತಾನೆ.

ಶಕ್ತಿಯಿಲ್ಲದೆ, ಜೋಲುಮೋರೆಹಾಕಿಕೊಂಡು ಸುಮ್ಮನೆ ನಿಂತನು. ಬಳಿಕ ಅದೇ ಪ್ರಶ್ನವನ್ನು **ಬೀರಬಲ್ಲ**ನಿಗೆ ಕೇಳಲು ಅವನು "ಸಾರ್ವಭೌಮರೇ, ಈ ಕಾಲದಲ್ಲಿ ದರಬಾರಿನವರೆಲ್ಲರ ಮನಸ್ಸಿನಲ್ಲಿಯೂ ತಮಗೆ **ದೇವರು** ಸದಾ ಕಲ್ಯಾಣವಮಾಡಲೆಂದು ಇರುತ್ತದೆ, ಇದರ ನಿಜತ್ವದ ವಿಷಯದಲ್ಲಿ ತಮಗೆ ಸಂಶಯುವಿದ್ದರೆ, ತಾವು ಎಲ್ಲರನ್ನೂ ಕೇಳಬಹುದು" ಎಂದನು. ಆಗ **ಬೀರಬಲ್ಲ**ನ ಈ ಪ್ರಸಂಗಾವಧಾನವನ್ನು ನೋಡಿ ಎಲ್ಲರೂ ತಲೆದೂಗಿದರು. **ಬಾದಷಹ**ನಿಗೆ ಪರಮಾನಂದವಾಯಿತು. **ಬಾದಷಹ**ನ ಬಾವಮೈದನು ನಾಚಿಕೊಂಡು ಯಾರಿಗೂ ಮುಖವನ್ನು ತೋರಿಸದೆ ಮನೆಗೆ ಹೊರಟು ಹೋದನು.

**ಅಕ್ಬರ**ನಿಗೆ ಆಟನೋಟಗಳಲ್ಲಿಯೂ, ಸಂಗೀತಗಾಯನಗಳಲ್ಲಿಯೂ ವಿಶೇಷವಾದ ಅಭಿರುಚಿಯಿತ್ತು. ಅವನು ಆಟನೋಟಗಳಲ್ಲಿ ತೊಡಗಿರುವಾಗ ರಾಜ್ಯದ ದೊಡ್ಡ ದೊಡ್ಡ ಕೆಲಸಗಳನ್ನು ಮಾಡುತ್ತಿದ್ದನು. ಅವನಿಗೆ ಕುಸ್ತಿಯಾಟದಲ್ಲಿ ಎಷ್ಟು ಪ್ರೀತಿಯಿತ್ತೆಂಬುದು **ಇಕ್ಕೇರಿ**ಯ **ಸಂಕನಾಯಕ**ನು ಅವನ ಆಶ್ರಯದಲ್ಲಿದ್ದ **ಅಂಕುಶಖಾನ**ನೆಂಬ ಮಲ್ಲನನ್ನು ಸೋಲಿಸಿ, **ಬಾದಷಹ**ನಿಂದ ಸಂಪಾದಿಸಿದ ಉಂಬಳಿಯಿಂದ ಸಿದ್ಧವಾಗುತ್ತದೆ.* ಅವನು ಸಂಗೀತಪ್ರಿಯನಾದ್ದರಿಂದ ೧೫೬೨ರಲ್ಲಿ **ಗ್ವಾಲ್ಹೇರಿ**ನ ಪ್ರಸಿದ್ಧಗಾಯಕನಾದ **ತಾನ್ಸೇನ** ಎಂಬವನನ್ನು ಕರಿಸಿ ತನ್ನ ಆಶ್ರಯದಲ್ಲಿಟ್ಟುಕೊಂಡನು.

**ಅಕ್ಬರ**ನು ಊಟದಲ್ಲಿ ಮಿತಿಯುಳ್ಳವನಾಗಿದ್ದನು. ಅವನು ಮಾಂಸವನ್ನು ಹೆಚ್ಚಾಗಿ ತಿನ್ನುತ್ತಿರಲಿಲ್ಲವೆಂದು ಹಿಂದೆ ಹೇಳಿರುತ್ತೇವೆ. ದಿನವಹಿ ಅವನು ಹಾಲನ್ನೂ, ಅನ್ನವನ್ನೂ, ಮಿಟಾಯಿಯನ್ನೂ ಒಮ್ಮೆಮಾತ್ರ ತೆಗೆದುಕೊಳ್ಳುತ್ತಿದ್ದನು. ಅವನಿಗೆ ಹಣ್ಣುಹಂಪಲುಗಳ ಮೇಲೆ ಬಹಳ ಪ್ರೀತಿಯಿತ್ತು. ಆದುದರಿಂದ ಅವನು **ಇರಾಣ್-ತುರಾಣ್** ಮುಂತಾದ ಪ್ರದೇಶಗಳಿಂದ ತೋಟಗರನ್ನು ಕರೆತರಿಸಿ, ತರತರದ ಹಣ್ಣಿನ ಗಿಡಗಳನ್ನು **ಆಗ್ರಾ** ಪಟ್ಟಣದಲ್ಲಿ ಬೆಳಿಸತೊಡಗಿದನು. ಆ ಕಾಲದಲ್ಲಿ **ಕಾಬೂಲ್,**

---

* ಕರ್ನಾಟಕದ ವರ್ಣನೆಯೂ ಇತಿಹಾಸವೂ ಪುಟ ೮೬ ನೋಡಿರಿ.

**ಕಂದಹಾರ್, ಕಾಶ್ಮೀರ್, ಬದಕ್ಷಾನ್, ಸಮರ್ಕಂದ್** ಮುಂತಾದ ಪ್ರದೇಶಗಳಿಂದ ಬೇರೆ ಬೇರೆ ಜಾತಿಯ ಹಣ್ಣುಗಳು ಈ ದೇಶಕ್ಕೆ ಬರುತ್ತಿದ್ದುವು. ಇಲ್ಲಿಯ ಮಾವಿನ ಹಣ್ಣುಗಳು ಈಗಿನಂತೇ ಆಗಲೂ ಹೆಸರಾಗಿದ್ದುವು.

ಬೇಗನೆ ಮಲಗಿ ಬೇಗನೆ ಏಳುವ ಮನುಷ್ಯನು ಆರೋಗ್ಯವುಳ್ಳವನೂ, ಹಣವುಳ್ಳವನೂ, ಜಾಣನೂ ಆಗುತ್ತಾನೆಂದು ಹೇಳುವ ಪಾಶ್ಚಾತ್ಯರ ಗಾದೆಯನ್ನು ವಾಚಕರು ಕೇಳಿರಬಹುದು. ಇದು ಎಷ್ಟು ಮಟ್ಟಿಗೆ ಅನುಭವದ ಮಾತೆಂಬುದು **ಅಕ್ಬರ**ನ ಉದಾಹರಣದಿಂದ ತಿಳಿಯುತ್ತದೆ. ಅವನು ಸಂಜೆಯಾದ ಮೇಲೆ ೨-೩ ಗಂಟೆಯ ವರೆಗೆ ವಿದ್ವಾಂಸರೊಡನೆ ಮಾತಾಡುತ್ತಾ ಕುಳಿತು, ಬಳಿಕ ಮೂರು ತಾಸು ಮಾತ್ರ ಮಲಗಿಕೊಳ್ಳುತ್ತಿದ್ದನು. ಮುಂಜಾವದಲ್ಲಿ* ಗಾಯಕರ ಇಂಪಾದ ಹಾಡುಗಳನ್ನು ಕೇಳಿ ಎಚ್ಚತ್ತು, ಜಳಕಮಾಡಿ, ದರಬಾರಿನ ಕೆಲಸವನ್ನು ಮುಗಿಸಿ, ಒಂದು ಹೊತ್ತಿನ ಊಟವನ್ನು ತೀರಿಸಿಕೊಂಡು, ಬಳಿಕ ಬಿಸಿಲಿನ ಹೊತ್ತಿನಲ್ಲಿ ಮೂರು-ನಾಲ್ಕು ತಾಸುಗಳವರೆಗೆ ಸ್ವಸ್ಥವಾಗಿ ಮಲಗಿಕೊಂಡು, ಸಂಜೆಗೆ ಮುಂದೆ ಎದ್ದು, ಆಟನೋಟದಲ್ಲಿ ಸ್ವಲ್ಪಹೊತ್ತು ಕಳೆಯುತ್ತಿದ್ದನು. ಒಮ್ಮೊಮ್ಮೆ ಮುಂಜಾವದಲ್ಲಿ ಎದ್ದು ಬೇಟೆಯಾಡಲಿಕ್ಕೆ ಹೋಗುತ್ತಿದ್ದನು.

**ಅಕ್ಬರ**ನಲ್ಲಿ ಮೂಢಭಕ್ತಿಯು ಕೆಲವು ಮಟ್ಟಿಗೆ ಇದ್ದಂತೆ ತೋರುತ್ತದೆ.† ಅವನಿಗೆ ಶಕುನಹೇಳುವವರಲ್ಲಿಯೂ, ಜೋಗಿಗಳಲ್ಲಿಯೂ ವಿಶ್ವಾಸವಿತ್ತು. ಅವನು ತನ್ನ ಹಿಂದೂರಾಣಿಗಳ ಜತೆಯಲ್ಲಿ ಹವನಹೋಮಗಳನ್ನು ಮಾಡುತ್ತಿದ್ದನು. ಅವನು ಆಗ ಗೊತ್ತಾದ ೭ ಗ್ರಹಗಳು ವಾರದ ೭ ದಿವಸಗಳ ಅಧಿದೇವತೆಗಳಾಗಿರುತ್ತವೆಂದೆಣಿಸಿ, ಆ ಗ್ರಹಗಳ ಸಮಾಧಾನಾರ್ಥವಾಗಿ ಪ್ರತಿದಿನ ಬೇರೆ ಬೇರೆ ಬಣ್ಣದ ತೊಡಿಗೆಗಳನ್ನು ಹಾಕಿಕೊಳ್ಳುತ್ತಿದ್ದನು.

---

* ಬೆಳಗ್ಗೆ.

† ಸ್ನಾನಮಾಡಿ ಜೋಧಬಾಯಿಯು ಸಲೀಮನನ್ನು ಬಸುರಿನಲ್ಲಿದ್ದಾಗ ಆಕೆಯು ಸುಸೂತ್ರವಾಗಿ ಹಡೆದರೆ ಶುಕ್ರವಾರದಿವಸ ಬೇಟೆಗೆಹೋಗುವುದಿಲ್ಲವೆಂದು ಅಕ್ಬರನು ಹರಕೆಮಾಡಿಕೊಂಡಿದ್ದನೆಂತಲೂ, ಅದರಂತೆ ತಾನು ಹುಟ್ಟಿದ ಬಳಿಕ ಅಕ್ಬರನು ಆ ದಿವಸ ಬೇಟೆಯಾಡಲಿಕ್ಕೆ ಹೋಗುತ್ತಿರಲಿಲ್ಲವೆಂತಲೂ ಜಹಂಗೀರನು ತನ್ನ ಚರಿತ್ರದಲ್ಲಿ ಬರೆದಿದ್ದಾನೆ.

**ಅಕ್ಬರ**ನಲ್ಲಿ ಧರ್ಮಸಹನಶೀಲತೆಯೆಂಬುದೊಂದು ಬಲುದೊಡ್ಡ ಗುಣವಿತ್ತು. ಮುಸಲ್ಮಾನರಲ್ಲಿ ಈ ಗುಣವಿರುವುದು ಅಪೂರ್ವವಾದ ಸಂಗತಿಯೇ ಸರಿ. ಮೊದಲಿನಿಂದಲೂ ಮುಸಲ್ಮಾನರು ಧರ್ಮಾಭಿಮಾನದಿಂದ ಪರದೇಶಗಳನ್ನು ನುಗ್ಗಿ, ಪರಚಕ್ರಗಳನ್ನು ಸೋಲಿಸಿ, ಅವರ ರಾಜ್ಯಗಳನ್ನು ಸೆಳೆದುಕೊಂಡರು. **ಅಕ್ಬರ**ನ ಅಜ್ಜನಾದ **ಬಾಬರ**ನಲ್ಲಿ ಈ ಧರ್ಮಾಭಿಮಾನವು ತಕ್ಕಮಟ್ಟಿಗಿತ್ತು. ಅವನ ತಂದೆಯಾದ **ಹುಮಾಯೂನ**ನು ಅದಕ್ಕೂ ಕಡಿಮೆ ಧರ್ಮಾಭಿಮಾನಿಯಾಗಿದ್ದುದರಿಂದ ಅವನು **ಚಿತ್ತೂರಿ**ನ ರಾಣಿಗೆ ನೆರವಾಗಿ ರಜಪೂತರೊಡನೆ ಸ್ನೇಹಬೆಳಿಸಿದನು. **ಅಕ್ಬರ**ನು ತನ್ನ ಧರ್ಮವೇ ಶ್ರೇಷ್ಠವಾದುದೆಂದು ಎಣಿಸಿರಲಿಲ್ಲ; ಅದೇ ಮುಕ್ತಿಗೆ ಸಾಧನವೆಂದೂ ತಿಳಿದಿರಲಿಲ್ಲ; ಮತ್ತು ಉಳಿದ ಧರ್ಮಿಗಳು ಪಾಷಂಡರೆಂದು ಭಾವಿಸಿರಲಿಲ್ಲ. ಅವನು ಎಲ್ಲಾ ಧರ್ಮದವರು ಸದ್ಗುಣಗಳಿಗೆ ಬಹುಮಾನಕೊಡುತ್ತಾರೆಂತಲೂ, ಎಲ್ಲಾ ಧರ್ಮಗಳಲ್ಲಿಯೂ ಕೆಟ್ಟ ಜನರೂ ಒಳ್ಳೆಯ ಜನರೂ ಇರುತ್ತಾರೆಂತಲೂ ಚೆನ್ನಾಗಿ ನಂಬಿದ್ದನು. ಈ ತರದ ಅವನ ಉದಾರಬುದ್ಧಿಯ ವಿಚಾರಗಳಿಂದಲೂ, ದೀರ್ಘದೃಷ್ಟಿಯಿಂದಲೂ ಮೊಗಲರ ರಾಜ್ಯವು ನೆಲೆಗೊಳಿಸಲ್ಪಟ್ಟಷ್ಟು, ಅವನ ಕಲಿತನದಿಂದ ನೆಲೆಗೊಳಿಸಲ್ಪಡಲಿಲ್ಲವೆನ್ನಬಹುದು. ಆ ಕಾರಣದಿಂದಲೇ ಅವನ ಅಜ್ಜನ ಕಡುಹಗೆಗಳಾದ ರಜಪೂತರು, ಅವನ ರಾಜ್ಯದ ವೈಭವವನ್ನು ಹೆಚ್ಚಿಸಲಿಕ್ಕೆ ತನುಮನಧನಗಳಿಂದ ನೆರವಾದರು. ಅವರು ಅವನ ರಾಜ್ಯವೆಂಬ ಕಟ್ಟಡಕ್ಕೆ ಕಂಬಗಳಂತಿದ್ದರು. ಅವನು ಧರ್ಮದುರಭಿಮಾನವಿಲ್ಲದೆ ಹಿಂದೂಜನರನ್ನೂ ಮುಸಲ್ಮಾನರನ್ನೂ ಸರಿಯಾಗಿ ನೋಡಿಕೊಳ್ಳುತ್ತಿದ್ದುದರಿಂದ ಅವನನ್ನು ಪ್ರಜೆಗಳು ಕೊಂಡಾಡುತ್ತಿದ್ದರು. ಎಷ್ಟೋ ರಜಪೂತರು ಅವನೊಡನೆ ಶರೀರಸಂಬಂಧವನ್ನು ಮಾಡಲಿಕ್ಕೆ ಹವಣಿಸಿದರು. ಅವನ ದರಬಾರಿನಲ್ಲಿ ಹಿಂದೂಜನರು ದೊಡ್ಡ ದೊಡ್ಡ ಅಧಿಕಾರಗಳನ್ನು ಹೊಂದಿದರು. ಈಮೇರೆಗೆ, ಅವನು ಪರದೇಶದ ಅರಸನೆಂದು ತನ್ನ ಪ್ರಜೆಗಳಿಗೆ ತೋರಿಸಿಕೊಳ್ಳಲಿಲ್ಲ. ಇಂತು ಪರದೇಶದ ಪ್ರಜೆ

ಗಳನ್ನು ಹೀಗೆ ಒಲಿಸಿಕೊಂಡು ಹೆಸರುವಾಸಿಯಾದ ದೊರೆಯು **ಅಕ್ಬ ರನೊಬ್ಬನೇ** ಎನ್ನಬಹುದು.*

ಈ ಜಗತ್ತಿನಲ್ಲಿ ಸದ್ಗುಣಗಳಿಂದ ಪೂರ್ಣವಾಗಿ ತುಂಬಿದ ಮನುಷ್ಯರನ್ನು ಕಾಣುವುದು ಅಸಂಭವವೇ ಸರಿ. **ಅಕ್ಬರನು** ಸದ್ಗುಣಗಳ ಗಣಿಯಾಗಿದ್ದನೆಂದರೆ ಅತಿಶಯೋಕ್ತಿಯಾಗಬಹುದು. ಅವನಲ್ಲಿಯೂ ಕೆಲವು ಕುಂದುಗಳಿದ್ದವು: ಅವನು ಸುಳ್ಳುನೆವಹೇಳಿ ತನ್ನ ರಾಜ್ಯಾಧಿಕಾರವನ್ನು ಸಂಪಾದಿಸಿದನು. ಅದು ಹೇಗೆಂದರೆ,—ಅವನು ತನ್ನ ತಾಯಿಯ ಮೈಯಲ್ಲಿ ಸ್ವಸ್ಥವಿಲ್ಲವೆಂದು ಹೇಳಿ **ಬೈರಾಮ್ ಖಾನನ** ಪಾಳೆಯವನ್ನು ಬಿಟ್ಟು **ಆಗ್ರಾಕ್ಕೆ** ಹೋಗಿ, ತಾನು ರಾಜ್ಯವನ್ನು ಕಯ್ಕೊಂಡೆನೆಂದು ಎಲ್ಲಾ ಅಧಿಕಾರಿಗಳಿಗೆ ಆಜ್ಞಾಪತ್ರಗಳನ್ನು ಕಳುಹಿದನು. ಇದಲ್ಲದೆ ಅವನು ಸ್ತುತಿಪ್ರಿಯನೂ ಸೊಕ್ಕಿನವನೂ ಆಗಿದ್ದನೆಂದು ಕೆಲವರ ಅಭಿಪ್ರಾಯವಾಗಿದೆ. ಆದರೆ ಇವೆಲ್ಲವುಗಳಿಗಿಂತ ಹೆಚ್ಚಿನ ಎರಡು ದೋಷಗಳು ಕೆಲವುಮಟ್ಟಿಗೆ ಅವನಲ್ಲಿದ್ದಂತೆ ತೋರುತ್ತದೆ. ಅವಾವೆಂದರೆ: ವಿಷಯಾಸಕ್ತಿಯೂ, ಕುಡಿಕತನವೂ.

---

* ಅಕ್ಬರ, ಔರಂಗಜೇಬರ ಸ್ವಭಾವವನ್ನು ಹೋಲಿಸಿ ನೋಡಿರೆಂದು ಹಲವು ಪರೀಕ್ಷೆಗಳಲ್ಲಿ ಕೇಳುತ್ತಾರಷ್ಟೆ. ಆದರೆ ಅವರಿಬ್ಬರಿಗೂ ಸಾಮಾನ್ಯವಾದ ಗುಣಗಳು, ಬಹಳ ಸ್ವಲ್ಪ. ಅವರಿಬ್ಬರೂ ಕಲಿಗಳಾಗಿದ್ದರು; ಅಕ್ಬರನಿಗೆ ಓದುಬರಹ ಬರುತ್ತಿರಲಿಲ್ಲ; ಆದರೆ ಔರಂಗಜೇಬನು ಓದುಬರಹ ಬಲ್ಲವನಾಗಿದ್ದನು; ಅವನು ಬರೆದ ಕುರಾನಿನ ಒಂದು ಪ್ರತಿಯನ್ನು ಟೀಪುಸುಲ್ತಾನನು ೮೦,೦೦೦ ರೂಪಾಯಿಗಳಿಗೆ ತೆಗೆದುಕೊಂಡಿದ್ದನಂತೆ. ಅಕ್ಬರನು ದೀರ್ಘದೃಷ್ಟಿಯುವನಾಗಿದ್ದನು; ಆದರೆ ಔರಂಗಜೇಬನು ಅಲ್ಪದೃಷ್ಟಿಯುವನಾಗಿದ್ದನು. ಅಕ್ಬರನು ಜಾತಿಪಕ್ಷಪಾತವಿಲ್ಲದೆ ಹಿಂದೂಜನರಿಗೆ ದೊಡ್ಡ ದೊಡ್ಡ ಕೆಲಸಗಳನ್ನು ಕೊಟ್ಟು ಅವರನ್ನು ಒಲಿಸಿಕೊಂಡನು. ಆದರೆ ಔರಂಗಜೇಬನು ಹಾಗೆ ಮಾಡದೆ, ಹಿಂದೂಜನರ ಹಗೆತನವನ್ನು ಕಟ್ಟಿಕೊಂಡನು. ಅಕ್ಬರನು ತನ್ನ ಕಯ್ಕೆಳಗಿನ ಜನರಲ್ಲಿ ವಿಶ್ವಾಸವಿಡುತ್ತಿದ್ದನು; ಆದರೆ ಔರಂಗಜೇಬನು ಯಾರನ್ನೂ ನಂಬುತ್ತಿರಲಿಲ್ಲ. ಅಕ್ಬರನಲ್ಲಿ ಪರಾರ್ಥಬುದ್ಧಿಯಿತ್ತು; ಆದರೆ ಔರಂಗಜೇಬನು ಯಾವಾಗಲೂ ಸ್ವಾರ್ಥಕ್ಕೆ ತೊಳಲುತ್ತಿದ್ದನು. ತನ್ನ ದಳವಾಯಿಗಳು ದೊಡ್ಡ ಗೆಲುವನ್ನು ಸಂಪಾದಿಸಿದರೆ ಅಕ್ಬರನು ಸಂತೋಷಪಟ್ಟು ಅವರಿಗೆ ಮಚ್ಚುಗೊಡುತ್ತಿದ್ದನು; ಆದರೆ ಔರಂಗಜೇಬನು ಇಂತಹವರನ್ನು ಹೊಟ್ಟೆಕಿಚ್ಚಿನಿಂದ ಅಭಿವೃದ್ಧಿಗೆ ಬರಗೊಡುತ್ತಿರಲಿಲ್ಲ. ಅಕ್ಬರನಲ್ಲಿ ಕ್ಷಮಾಗುಣವು ವಿಶೇಷವಾಗಿತ್ತು; ಆದರೆ ಔರಂಗಜೇಬನು ಕ್ರೂರನೂ, ಕೃತಘ್ನನೂ, ಮೋಸಗಾರನೂ ಆಗಿದ್ದನು. ಅಕ್ಬರನಲ್ಲಿ ಧರ್ಮದುರಭಿಮಾನವಿಲ್ಲದುದರಿಂದ, ಅವನು ಎಲ್ಲಾಪ್ರಜೆಗಳನ್ನು ಸರಿಯಾಗಿ ನಡಿಸಿ (ನೋಡಿ)ಕೊಂಡು, ಎಲ್ಲರಿಗೂ ಬೇಕಾದವನಾದನು; ಆದರೆ ಔರಂಗಜೇಬನು ಧರ್ಮದುರಭಿಮಾನದಿಂದ ಹಿಂದೂಜನರ ಮೇಲೆ ಜಿಜಿಯಾ ಮುಂತಾದ ತೆರಿಗೆಗಳನ್ನು ಹಾಕಿ ಎಲ್ಲರಿಗೂ ಬೇಡದವನಾದನು. ಈ ಸ್ವಭಾವಭೇದದಿಂದ ಅಕ್ಬರನು ಮೊಗಲರ ರಾಜ್ಯವನ್ನು ನೆಲೆಗೊಳಿಸಿದನು; ಆದರೆ ಔರಂಗಜೇಬನು ಅದು ಹಾಳಾಗಲಿಕ್ಕೆ ಬೇಕಾಗುವಷ್ಟು ಸಾಧನಗಳನ್ನು ಸಂಗ್ರಹಿಸಿಟ್ಟು ಸತ್ತನು.

೧. ಹಿಂದೆ ೧೦೭ನೆಯ ಪುಟದ ಟಿಪ್ಪಣದಲ್ಲಿ **ಪೃಥ್ವೀರಾಜನು ಪ್ರತಾಪಸಿಂಗ**ನಿಗೆ ಬರೆದ ಪತ್ರದ ತಾತ್ಪರ್ಯವನ್ನು ಕೊಟ್ಟಿರುತ್ತೇವಷ್ಟೆ? ಈ ಪತ್ರದಲ್ಲಿ ಸಾಧಾರಣವಾಗಿ ಎಲ್ಲಾ ರಜಪೂತಹೆಂಗಸರು ತಮ್ಮ ಪಾತಿವ್ರತ್ಯವನ್ನು ನಾಶಮಾಡಿಕೊಂಡರೆಂದು ಅವನು ಬರೆದುದರ ಅರ್ಥವೇನು? ರಜಪೂತರು ಮೊಗಲರೊಡನೆ ಶರೀರಸಂಬಂಧವನ್ನು ಮಾಡಿದುದರಿಂದ ಹೀಗೆ ಬರೆದಿರಬಹುದೋ? ಹಾಗಲ್ಲ. ಇದರ ವೃತ್ತಾಂತವನ್ನು **ಜೇಮ್ಸ ಟಾಡ್** ಸಾಹೇಬರು ಬರೆದಿರುವುದನ್ನು ಕೆಳಗೆ ಕೊಟ್ಟಿದೆ:—

“**ಅಕ್ಬರ**ನ ಕಾಲದಲ್ಲಿ ಪ್ರತಿತಿಂಗಳಿನ ದೊಡ್ಡ ಹಬ್ಬದ ೯ನೆಯ ದಿವಸ ಅರಮನೆಯಲ್ಲಿ ಒಂದು ಜಾತ್ರೆ ಕೂಡುತ್ತಿತ್ತು. ಆಗ ವ್ಯಾಪಾರಿಗಳ ಹೆಂಡಿರು ಬೇರೆ ಬೇರೆ ನಾಡಿನ ತರತರದ ಸರಕುಗಳನ್ನು ಮಾರಾಟಕ್ಕೆ ತರುತ್ತಿದ್ದರು. ಆ ದಿವಸ **ಬಾದಷಹ**ನ ಕುಟುಂಬದವರೂ, ಸರದಾರರ ಮನೆಯ ಹೆಂಗಸರೂ ಆ ಜಾತ್ರೆಗೆ ಬಂದು, ತಮಗೆ ಬೇಕಾದ ಒಡವೆಗಳನ್ನು ಕೊಂಡುಕೊಳ್ಳುತ್ತಿದ್ದರು. ಆ ಕಾಲದಲ್ಲಿ **ಅಕ್ಬರ**ನು ವೇಷಮರೆಯಿಸಿಕೊಂಡು ಅಲ್ಲಿ ಓಡಾಡಿ, ತನ್ನ ಮನಸ್ಸಿಗೆ ಬಂದ ಸ್ತ್ರೀಯನ್ನು ಹಾದಿ ತಪ್ಪಿಸಿ ಕರೆದೊಯ್ದು, ಆಕೆಯ ಪಾತಿವ್ರತ್ಯವನ್ನು ಹೀರಿಕೊಳ್ಳುತ್ತಿದ್ದನಂತೆ.

**ಅಕ್ಬರ**ನಂತಹ ಗುಣಿಯು ಇಂತಹ ನೀಚವಾದ ಜಾರಕರ್ಮದಲ್ಲಿ ತೊಡಗಿದ್ದನೆಂಬುದು ಸೋಜಿಗದ ಮಾತೇ ಸರಿ. ಈ ಮಾತನ್ನು ನಂಬಲಿಕ್ಕೆ ಕೆಲವರು ಹಿಂದೆ ಮುಂದೆ ನೋಡಬಹುದು.* ಆದರೆ ವಿಚಾರಾಂತ್ಯದಲ್ಲಿ ಇದು ದಿಟವೆಂದು ಕಂಡುಬಂತು. ಏಕಂದರೆ:—

**ಅ. ಟಾಡ್** ಸಾಹೇಬರಂತಹ ನಿಷ್ಪಕ್ಷಪಾತಿಗಳಾದ ಗ್ರಂಥಕರ್ತರು ಇದರ ನಿಜತ್ವದ ವಿಷಯದಲ್ಲಿ ತಮಗೇನೂ ಸಂಶಯವಿಲ್ಲವೆಂದು ಬರೆಯುತ್ತಾರೆ.

---

† ಇದನ್ನು ಓದಿದ ಕೂಡಲೆ ನಂಬಲಿಕ್ಕೆ ಈ ಗ್ರಂಥಕರ್ತನಿಗೂ ಮನಸ್ಸಾಗಲಿಲ್ಲ. ಆದರೆ ಮುಂದೆ ವಿಚಾರಮಾಡಲು ಈ ಮಾತು ನಿಜವಿರಬಹುದೆಂದು ಕಂಡಿತು. ಆತನ ಕೆಲವು ಮಿತ್ರರು ಇಂತಹ ಸಂಗತಿಯನ್ನು ಬರೆದು ಅಕ್ಬರನ ದೋಷವನ್ನು ಬಯಲಿಗೆ ತರಬಾರದೆಂದು ಹೇಳಿದರು. ಆದರೆ ಅವರ ಮತಕ್ಕೆ ಗ್ರಂಥಕರ್ತನು ಒಪ್ಪಲಿಲ್ಲ. ಇದ್ದ ಸಂಗತಿಯನ್ನು ಮಾಜದೆ ಬರೆಯುವುದೇ ಚರಿತ್ರಕಾರರ ಕರ್ತವ್ಯವಾದುದರಿಂದ ಈ ಸಂಗತಿಯನ್ನು ಮುಚ್ಚಿಡುವದು ಸರಿಯೆಂದು ತೋರುವುದಿಲ್ಲ. ಆಲಿವರ್ ಕ್ರಾಮವೆಲ್ ಎಂಬ ಆಂಗ್ಲೇಯನು, ಒಮ್ಮೆ ಒಬ್ಬ ಚಿತ್ರಗಾರ್ತಿಗೆ ಎಂದುದೇನಂದರೆ: “ನಾನು ಇದ್ದಹಾಗೆ ನನ್ನ ಚಿತ್ರವನ್ನು ತೆಗೆ; ನನ್ನಲ್ಲಿರುವ ಒಂದು ಕಲೆಯನ್ನು ಬಿಟ್ಟರೆ, ನಾನು ನಿನಗೆ ಒಂದು ಪೈಯನ್ನಾದರೂ ಕೊಡುವದಿಲ್ಲ.”

**ಇ.** ತಮ್ಮ ಸ್ತ್ರೀಯರ ಸಂಬಂಧವಾಗಿ ಹಿಂದೂಜನರಿಗೆ ಎಷ್ಟು ಅಭಿಮಾನವಿರುತ್ತದೆಂಬ ಮಾತು ಪ್ರತಿಯೊಬ್ಬ ಹಿಂದುವಿಗೂ ಗೊತ್ತಿದೆ. ಹೆಂಗಸರನ್ನು ಕುರಿತು ಕೆಟ್ಟ ಶಬ್ದಗಳನ್ನು ಉಪಯೋಗಿಸಲಿಕ್ಕೆ ನಾವು ಹೆದರುವಷ್ಟು ಉಳಿದ ಜನಾಂಗದವರು ಹೆದರುವುದಿಲ್ಲ. ಆದುದರಿಂದ ತಥ್ಯಾಂಶವೇನಾದರೂ ಇಲ್ಲದೆ, **ಪೃಥ್ವೀರಾಜ**ನೆಂದಿಗೂ ರಜಪೂತಹೆಂಗಸರು ಪಾತಿವ್ರತ್ಯವನ್ನು ಕಳೆದುಕೊಂಡರೆಂದು ಬರೆಯಲಾರನು.

**ಉ. ಪೃಥ್ವೀರಾಜ**ನು ಸಾಮಾನ್ಯರಜಪೂತಹೆಂಗಸರ ವಿಷಯವಾಗಿ ಬರೆದಿದ್ದರೆ ಸಂಶಯಕ್ಕೆ ಸ್ವಲ್ಪ ಆಸ್ಪದವಿತ್ತು. ಆದರೆ ಅವನು ತನ್ನ ಅತ್ತಿಗೆಯೂ **ಬಾದಷಹ**ನನ್ನು ಕೂಡಿ, ಅನೇಕಾಭರಣಗಳನ್ನು ತೆಗೆದುಕೊಂಡು ತಿರುಗಿ ಮನೆಗೆ ಬಂದಳೆಂತಲೂ, ತನ್ನ ಹೆಂಡತಿ ಮಾತ್ರ ತನ್ನ ಪ್ರಸಂಗಾವಧಾನದಿಂದಲೂ, ನಿಸ್ಸೀಮಪಾತಿವ್ರತ್ಯದಿಂದಲೂ **ಅಕ್ಬರ**ನು ಒಡ್ಡಿದ ಬಲೆಯಲ್ಲಿ ಸಿಲುಕದೆ ಪಾರಾಗಿ ಬಂದಳೆಂತಲೂ ಬರೆದಿದ್ದಾನೆ.

**ಎ. ಆಕ್ವೇವಿವ**ನೆಂಬ ಒಬ್ಬ ಜೆಸುಯಿಟ ಪಾದ್ರಿಯು ೧೫೮೨ರಲ್ಲಿ ಜಾರಕರ್ಮದ ಬಗ್ಗೆ **ಅಕ್ಬರ**ನನ್ನು ಸ್ಪಷ್ಟವಾಗಿ ದೂಷಿಸಲು, ಅವನು ಸಿಟ್ಟಿಗೇಳದೆ ಸುಳ್ಳುಸೊಟ್ಟ ನೆವಗಳನ್ನು ಹೇಳಿ ಆ ಪಾಪವಿಮೋಚನಾರ್ಥವಾಗಿ ಕೆಲದಿವಸ ಉಪವಾಸಮಾಡಿದನೆಂದು ಲೇಖವಿದೆ.

ಈ ಕಾರಣಗಳಿಂದ **ಅಕ್ಬರ**ನು ವಿಷಯಾಸಕ್ತನಾಗಿದ್ದನೆಂದು ತೋರುತ್ತದೆ. ಸದ್ಗುಣರಾಶಿಯಲ್ಲಿ ಇದೊಂದು ದುರ್ಗುಣವಿದ್ದುದು ಅತಿ ಶೋಚನೀಯವಾದ ಸಂಗತಿಯೇ ಸರಿ; ನಟ್ಟಡವಿಯಲ್ಲಿರುತ್ತಿದ್ದು ಕಂದಮೂಲಾದಿಗಳಿಂದ ಜೀವಿಸುತ್ತಿದ್ದ **ಋಷ್ಯಶೃಂಗ, ವಿಶ್ವಾಮಿತ್ರ** ಮುಂತಾದ ದೊಡ್ಡ ದೊಡ್ಡ ತಪಸ್ವಿಗಳು ಸ್ತ್ರೀಪಾಶದಲ್ಲಿ ಸಿಲುಕಿದ ಬಳಿಕ **ಅಕ್ಬರ**ನಂತಹ ಸಂಸಾರಿಗಳಾದ ಸಾರ್ವಭೌಮರ ಪಾಡೇನು ? *

---

* ವಿಹಿತಾಚಾರಮನನ್ವಯಾಗತಗುಣಪ್ರಖ್ಯಾತಿಯಂ ದುಷ್ಟನಿ |
ಗ್ರಹಶಿಷ್ಟಪ್ರತಿಪಾಲನಪ್ರಭುತೆಯಂ ಕಯ್ಗಾಯದನ್ಯಾಂಗನಾ ||
ಸ್ಪೃಹೆಯಂ ತಾಳ್ದಿದನಲ್ತೆ ಕಾಲವಶದಿಂ ಲಂಕೇಶ್ವರಂ ವಿಸ್ಮಯಾ |
ವಹಮಲ್ತಬ್ಧಿಯುಮೊರ್ಮೆ ಕಾಲವಶದಿಂ ಮರ್ಯಾದೆಯಂ ದಾಂಟಿದೇ ||

ರಾಮಚಂದ್ರಚರಿತಪುರಾಣ.

೨. **ಅಕ್ಬರ**ನು ಕುಡಿಕನಿದ್ದನೆಂಬ ಬಗ್ಗೆ ಏನೂ ಸಂಶಯವಿಲ್ಲ. ಹಿಂದೆ ೫೦ನೆಯ ಪುಟದಲ್ಲಿ, ಅವನು ಅಳತೆಗೆಟ್ಟು ಕುಡಿದು ಗೊಂದಲ ಹಾಕಿದ್ದನ್ನು ಬರೆದಿರುತ್ತೇವಷ್ಟೇ. ಅವನ ಮಗನಾದ **ಸೆಲೀಮ**ನು, "ನನ್ನ ತಂದೆಯು ಕುಡಿದಾಗಾಗಲಿ, ಎಚ್ಚರದಿಂದ ಇದ್ದಾಗಾಗಲಿ ನನ್ನನ್ನು **ಸುಲ್ತಾನಸೆಲೀಮ**ನೆಂದು ಕರೆಯದೆ ಯಾವಾಗಲು **ಶೇಖುಬಾಬಾ** ಎಂದು ಕರೆಯುತ್ತಿದ್ದನು" ಎಂದು ಬರೆದಿಟ್ಟದ್ದಾನೆ. ಇದಲ್ಲದೆ ಜೆಸುಯಿಟ ಪಾದ್ರಿಗಳು ಅವನು ಬಹಳ ಕುಡಿಯುತ್ತಿದ್ದನೆಂದು ಬರೆಯುತ್ತಾರೆ. ಅವನ ಇಬ್ಬರು ಮಕ್ಕಳು ಕುಡಿಕತನದಿಂದಲೇ ಸತ್ತರು. ಆನುವಂಶಿಕವಾದ **ಸೆಲೀಮ**ನ ಕುಡಿಕತನವನ್ನು **ನೂರಜಹಾನ**ಳು ಕೆಲಮಟ್ಟಿಗೆ ಬಿಡಿಸಿದಳಂತೆ.

ಅದು ಹೇಗೇ ಇರಲಿ; ಈ ಜಗತ್ತಿನಲ್ಲಿ ಅನೇಕ ಸದ್ಗುಣಗಳುಳ್ಳವರಿಗೆ ಸದ್ಗುಣಿಯೆನ್ನುತ್ತಾರೆ. ಆದುದರಿಂದ **ಅಕ್ಬರ**ನು ಸದ್ಗುಣಿಯಾಗಿದ್ದನೆನ್ನಲು ಸಂಶಯವಿಲ್ಲ. **ಅಕ್ಬರ**ನು, ದೀರ್ಘದೃಷ್ಟಿಯುವನೂ, ಚತುರನೂ, ಭೂತದಯೆಯುಳ್ಳವನೂ, ಗುಣಗ್ರಾಹಿಯೂ, ವಿಚಾರಿಯೂ, ಮಾನವಸ್ವಭಾವವರಿತವನೂ, ರಾಜನೀತಿಬಲ್ಲವನೂ, ವಿದ್ಯಾಪಕ್ಷಪಾತಿಯೂ, ತಾಳ್ಮೆಯುಳ್ಳವನೂ, ಧರ್ಮದುರಭಿಮಾನರಹಿತನೂ ಆಗಿದ್ದನು. ಆದುದರಿಂದ ಅವನು ಗುಣಸಾಗರನಾಗಿದ್ದನೆಂದರೂ ಸಲ್ಲುವುದು. ನಮ್ಮ ಜನರು ಅವನೊಬ್ಬ ಅವತಾರಪುರುಷನೆಂದು ಈಗಲೂ ನಂಬುತ್ತಾರೆ. ಅವನ ಮೊಹರನ್ನು ತೊಳೆದು ನೀರು ಕುಡಿಸಿದರೆ, ಬೇನೆ ಹತ್ತಿದ ಬಸುರ ಹೆಂಗಸರು ಬೇಗನೆ ಹಡೆಯುತ್ತಾರೆಂಬ ನಂಬಿಕೆಯು ಈ ದೇಶದಲ್ಲೆಲ್ಲ ಈಗಲೂ ಹಬ್ಬಿರುತ್ತದೆ. ಇಂತಹ ಆಚಂದ್ರಾರ್ಕಕೀರ್ತಿಯನ್ನು ಹೊಂದಿದ ಅರಸನು ನಮ್ಮನ್ನು ಆಳಿದುದು ನಮ್ಮ ಪುಣ್ಯವೇ ಸರಿ.



# ಪರಿಶಿಷ್ಟ (ಅ).

## ರಾಜನೀತಿಯ ಪದ್ಯಗಳು.

### ಜೈಮಿನಿ ಭಾರತ.

ವಾ. ಷ. ಭೂಪಾಲ ಕೇಳ್ಧರ್ಮಸಾರಮಿದುಜಗದೊಳ್ಮ |
ಹೀಪತಿಗಳರ್ಥಲೋಲುಪ್ತಿ[1]ಯಿಂ ತಮ್ಮಯ ಸ |
ಮೀಪದೊಳ್ದ್ಯೂ[2]ತರತನಾಸ್ತಿಕರನೈದೆ ಪಿಸುಣರನಸೂ[3]ಯಕರೆನಿ [ಪರ ||
ಸೋಪಚಾರದೊಳಿರಿಸಿಕೊಂಡಿರುತಿರಲ್ಪ್ರಜಾ |
ಲೋಪಮುಪ್ಪುದು ರಾಜ್ಯಮುದಱನಪಕೀರ್ತಿಯಿಂ |
ಪಾಪದಿಂದರಸುಗಳಿಗಿಹಪರಂ ಕೆಡುಗುಮಿದನಱಯದಿರಬಹುದೆ
ನೃಪರು || ೧ ||

---

### ಕರ್ನಾಟಕ ಕಾದಂಬರಿ.

ಕಂ. ಅರಸಾಗಲೊಡಂ ಮೆಯ್ಮಱೆ |
ದು ರಾಜ್ಯಸುಖಸನ್ನಿಪಾತನಿದ್ರೆಯ ಕಯ್ಕೊಂ |
ಡಿರುಳುಂ ಪಗಲುಂ ಜಾಡ್ಯ[4]ದೆ |
ಮಱೆ[5]ವಟ್ಟೆಚ್ಚಱುವರಲ್ಲವೆಂತುಂ ಭೂಪರ್ || ೨ ||

ಕಂ. ಪರಲೋಕಾ[6]ಲೋಕನಮುಂ |
ಪರಿಹರಿಸಿದೆವಲ್ತೆ ನೋಡಿಮೆಂದೀಗಳುದಾ |
ಹರಿಸುವ ತೆಱದಿಂ ಪಿಡಿಯಿಪ |
ರರಸುಗಳೆಡೆವಿಡದೆ ಮೇಘ[7]ಡಂಬರತ[8]ತಿಯುಂ || ೩ ||

---

1 ಲೋಭದಿಂದ. 2 ಜೂಜಿನಲ್ಲಿ ಮನಸ್ಸುಳ್ಳ. 3 ಹೊಟ್ಟೆಕಿಚ್ಚು ಪಡುವವರನ್ನು. 4 ಜಡಸ್ವಭಾವದಲ್ಲಿ. 5 ಮರೆತು. 6 ನೋಡೋಣ. 7 ಕೊಡೆ. 8 ಸಮೂಹ, ಸಾಲು.

ಕಂ. ಪೊಡೆದುದು ಗರ[1]ವತಿಕೋಪದೆ ।
ಪಿಡಿದುದು ಪುಲಿ ಗಾಳಿ ಸೋಂಕಿದತ್ತು ಪಿಶಾಚಂ ॥
ತೊಡರ್ದುದು ಭೂತಂ ಬನ್ನಂ[2] ।
ಬಡಿಸಿದುದೆನೆ ಸಿರಿಯೊಳರಸುಗಳ್ಮೆಯ್ಯಱಿಯರ್[3] ॥ ೪ ॥

ಕಂ. ಇರದೀಗಳ್ಸತ್ತಪರೆನಿ ।
ಪರವೊಲ್ನಂಟರುಮನಱಿವರಲ್ಲರ್ಭೂಪರ್ ।
ಪಿರಿದುಂ ಕಣ್ಗಾಣದರಂ ।
ತಿರೆ ಕಾಣಲ್ಕಾಱರ[4]ಲ್ತೆ ತೇಜಸ್ವಿಗಳಂ ॥ ೫ ॥

ಚಂ. ಪಿತೃಗಳುಪಾರ್ಜಿಸಿ[5]ಟ್ಟ ಸಿರಿ ಜವ್ವನದೇೞ್ಗೆ ಪೆಱಂಗಿದಿಲ್ಲೆನಿ ।
ಪ್ಪತಿಶಯರೂಪುಶಕ್ತಿಗಳಿವಲ್ಲವೆ ಹಾನಿಯುಬಳ್ಳಿ[6]ವಳ್ಳಿ ನಿ ॥
ಶ್ಚಿತಮಿವನೊಂದನೊಂದನೆ ವಿಚಾರಿಪೊಡುಳ್ಳವಿನೀತಿ[7]ಗೆಲ್ಲಮಾ ।
ಯತನ[8]ಮೆನಿಪ್ಪುದೊರ್ವನೊಳಿವೆಲ್ಲವಿರಲ್ಬಳಿಕೇನನೆಂಬುದೊ ॥ ೬ ॥

ಚಂ. ಮೊಱೆದು ಹಿತೋಪದೇಶಮನೆ ಕೇಳಲೊಡಂ ಸಿಡಿಲೇೞ್ಗೆಯೆಟ್ಟುದಮೆ ।
[9]ಯ್ಮಱುಗಿ ನಯಂ ಕಿಡಲ್ಗಜನಿಮೀಲನದಿಂದವಧೀ[10]ರಿಸುತ್ತೆ ತ ॥
ನ್ಮಱೀತಮಿದೇತಕೆಂದುಗುರುಸಂಕುಳಮುಂಮಱೆದಿಂತುಮಮ್ಮಲಂ ।
ಮಱುಗಿಪರಲ್ತೆ ತಮ್ಮ ನಿಜಗರ್ವದೆ ಮಾಯ್ದ[11] ನೃಪರ್ಧರಿತ್ರಿಯೊಳ್ ॥ ೭ ॥

ಮ. ಮೊದಲೊಳ್ ರಾಜ್ಯಾಭಿಷೇಕಪ್ರಬಲಜಲಮೆ ಕರ್ಚಿ[12]ತ್ತು ದಾಕ್ಷಿ
ಣ್ಯಮುಂ ಹೋ । ಮದ ಧೂಮಂ ಚಿತ್ತದೊಳ್ತೊಟ್ಟನೆಮಲಿನತೆಯುಂ
ಪೊರ್ದಿಸಿತ್ತೊಪ್ಪಿರಲ್ಕ॥ ಟ್ಟದ ಪಟ್ಟಂಬರ್ಪ ಮುಪ್ಪಂ ಮಱೆಯಿಸಿತಧಿಕ
ಕ್ಷಾಂತಿಯುಂ ವಿಪ್ರವರ್ಗಾ । ಸ್ಪದದರ್ಭಾನೀತಸಮ್ಮಾರ್ಜನಿಕಳೆ
ದುದೆನಲ್ದುಷ್ಟರಪ್ಪರ್ನೃಪಾಲರ್ ॥ ೮ ॥

1 ಗ್ರಹ. 2 ಕಷ್ಟ. 3 ಎಚ್ಚರವಿಲ್ಲದವರಾಗುವರು. 4 ಸಮರ್ಥರಾಗುವದಿಲ್ಲ. 5 ಗಳಿಸಿ. 6 ಪರಂಪರೆ. 7 ದುರ್ನೀತಿ. 8 ಮನೆ. 9 ಮನಸ್ಸಿನಲ್ಲಿ ಸಂಕಟಪಟ್ಟು. 10 ತಿರಸ್ಕರಿಸುತ್ತ. 11 ಸೊಕ್ಕಿದ. 12 ತೊಳೆಯಿತು.

ಚಂ. ಮುನಿದೊಡೆ ಭಸ್ಮವಾದಪುದು ಲೋಕಮೆನಲ್ಕೊಸಲೊಳ್ತ್ರುತೀಯು[1]
ಲೋ । ಚನಮೆಮಗುಂಟು ತೋಲ[2]ಮಱೆಯಿಂದದು ತೋಱಪುದಿಲ್ಲೆ
ನುತ್ತವಿಶಾ ॥ ಮನುಜರ ಗೆಯ್ತ[3]ಮಂ ಬಿಸುಟು ದೇವ[4]ರೆಮೆಂಬಭಿ
ಮಾನಮೇರೆಮು । ಯ್ವೊ[5]ನೆಗಳ ನೋಳ್ಪರಿನ್ನೆರಡುತೋಳೊಳವೆಂಬ
ವೊಲುರ್ವರೇಶ್ವರರ್ ॥ ೯ ॥

ಮ. ವೊದಲೊಳ್ತಮ್ಮನೆ ನೋಡಲಿತ್ತ[6]ಪದದೊಳ್ಕಯ್ಕೊ[7]ಂಡವರ್ತಾನೆ ನೋ
ಡಿದೊಡೋರಂತುಪಕಾರಮಂಮೆಱೆದವರ್ಮಾತಾಡಿದಂದರ್ಥರಾ ॥
ಜ್ಯದಪೆಂ[8]ಪಂದಯೆಗೆಯ್ದುವರ್ಬೆಸಸಿದಂದಾಗಳ್ವರಂಗೊಟ್ಟವ ।
ರ್ಪದ[9]ಪಿಂಮುಟ್ಟಿದರೆಯ್ದೆ ರಕ್ಷಿಸಿದವರ್ಭೂಪರ್ಧರಾಚಕ್ರದೊಳ್ ॥೧೦॥

ಕಂ. ಗುರುಗಿದಿರೇಳ್ವರೆ ಪೊ[10]ಡವಡು ।
ವರೆ ದೇವರನರ್ಚಿಸುವರೆ ಪಾರ್ವರನಱಿದಾ ।
ದರಿಪರೆ ಮಾನ್ಯರಮನ್ನಿಸು ।
ವರೆ ಪೂಜ್ಯರ ಪಿರಿಯರೆನಿಪ ಗರ್ವದೆ ಭೂಪರ್ ॥ ॥ ೧೧ ॥

ಕಂ. ಪಿರಿದುಮಧರ್ಮದೆ ಗತಿಗೆ ।
ಟ್ಟರಸುಗಳೆಲೆ ಪೆಟ[11]ವುಗೊಂಡರೆಂಬಂತೆ ವಲಂ[12] ॥
ಕರವಿಡಿದು ಸಾರ್ಚುವೆತ್ತುವ ।
ತುರಿಪ[13]ದೆ ಕಯ್ಯುಗುಡುವುದಕ್ಕೆ ಲಜ್ಜಿಸರರೆಬರ್[14] ॥ ೧೨ ॥

ಕಂ. ಮಱೆಯದಹೋರಾತ್ರಂ ಕ ।
ಯ್ಮ[15]ಱೆದಿಲ್ಲದ ಗುಣಮನಂತೆ ಬಿಡದೇರಿಸಿ ಪೊ ॥
ಚ್ಚ[16]ರಿಸುತ್ತಮಿರ್ಪ ಪಿ[17]ದ್ಗ ।
ರ್ಗರಗುವರಱಿವಿಲ್ಲದವನಿಪಾಲರ್ಜಗದೊಳ್ ॥ ೧೩ ॥

---

1 ಹಣೆ. 2 ಚರ್ಮದ. 3 ಕೆಲಸ. 4 ದೇವರುಗಿದ್ದೇವೆ. 5 ಭುಜ ಶಿರಸ್ಸು. 6 ಅವಕಾಶವನ್ನು ಕೊಟ್ಟಮಾತ್ರದಿಂದ. 7 ಅನುಗ್ರಹಿಸಿದವರು. 8 ಆಳಿಕೆ, ವೈಭವ. 9 ಚಂದ, ಪ್ರೀತಿ. 10 ನಮಸ್ಕಾರಮಾಡು. 11 ಹೆಳವುತನ. 12 ನಿಶ್ಚಯವಾಗಿ, ಚೆನ್ನಾಗಿ. 13 ಬೇಗನೆ. 14 ಕೆಲವರು. 15 ಆಶ್ಚರ್ಯಪಡು. 16 ಉಬ್ಬಿಸು. 17 ವಿಟರು.

ಕಂ. ಅವರನೆ ಪೊರೆವರ್ಪೆರ್ಚಿಪ |
ರವರನೆ ಸಾ[1]ರಿರಿಪರವರನವರೊಳೆ ನುಡಿ ನೋ |
ಡವರ್ಗಳೆ ನಂಟರ್ಕೂಡುವ |
ರವರೊಳೆ ಮನ್ನಿಪುದುಮವರನವರೊಳೆ ಕೂಟಂ || || ೧೪ ||

---

## ಕನ್ನಡ ಭಾರತ.

ಭಾ. ಷ. ಪರಮಧರ್ಮವ ಬಿಟ್ಟು ಲೋಭದೆ |
ಪಿರಿದೆನಿಸುವನ್ಯಾಯದಲಿ ನಡೆ |
ವರನು ರಣಭೂಮಿಯಲಿ ಮರ್ದಿ[2]ಸಿ ರಕ್ತನದಿಗಳನೂ ||
ಹರಿಸಿದಾಕ್ಷತ್ರಿಯಗೆ ಭಾವಿಸೆ |
ದುರಿತವೆಳ್ಳನಿತಿಲ್ಲ ಕೇಳಾ |
ನರಪತಿಯೆ ಕೃತಪುಣ್ಯನೆನಿಸುವನೆಂದು ನೇಮಿಸಿದಾ || ೧೫ ||

ಭಾ. ಷ. ದೇವತೆಗಳನು ಭಕ್ತಿಯಲಿ ಭೂ |
ದೇವತೆಗಳನು ಲೇಸ ಬಯಸುವ |
ಭೂವರನು ಪೂಜಿಸಲು ಬೇಹುದು ಮೊದಲ ಧರ್ಮವಿದು ||
ಭಾವಿಸಿದಡಿಹಪರಕೆ ಸುಖಗಳ |
ನೀವುದದು ನೀನದನಱಿದು ಸಂ |
ಭಾವ[3]ನೆಯ ಮಾಡವರಿಗವನೀಪಾಲ ಕೇಳೆಂದ || ೧೬ ||

ಭಾ. ಷ. ದಾಂ[4]ತಿಶೀಲ ಜಿತಾತ್ಮವೃ[5]ತ್ತಿಸು |
ಶಾಂತಿ ಪಿರಿದಾಗುಳ್ಳ ಧರಣೀ |
ಕಾಂತನಾವವನಾತನಿಗೆ ಸೇರಿಹುದು ಚಿರಕಾಲ ||
ಸಂತತಮಹಾಸೌಖ್ಯಲಕ್ಷ್ಮಿಯು |
ನಂ[6]ತಶಯನಾಭ್ಯುದಯ ಬಹುಶುಭ |
ಸಂತತಿಗಳೆಂಬಿವು ಯುಧಿಷ್ಠಿರನೃಪತಿ ಕೇಳೆಂದ || ೧೭ ||

---

1 ಸಮೀಪದಲ್ಲಿಟ್ಟುಕೊಳ್ಳುವರು. 2 ಕೊಂದು. 3 ಮಾನ. 4 ಇಂದ್ರಿಯಗಳನ್ನು ತಡಿಯೋಣ. 5 ಇಂದ್ರಿಯನಿಗ್ರಹ, ಆತ್ಮಸಂಯಮನ. 6 ಮಹಾಶೇಷ.

ಭಾ. ಷ. ಅರಸ ಪ್ರಕೃ[1]ತಿಗಳೇಳನಡೆಸುತ |
ಲಿರಲು ಬೇಹುದದಕ್ಕೆ ಸಾಧನ |
ಪರಮುಸತ್ತ್ವಾ[2]ರ್ಜವಗಳೆಂಬಿವು ದಂಡ[3]ನೀತಿಯಿದು ||
ಧರೆಯನಾಳ್ದರೆ ಮುಖ್ಯವಹುದೆ |
ಲ್ಲರಿಗೆ ರಕ್ಷೆಯದರುಹವರಿದದ |
ವಿರಚಿಸುವುದೇರಾಜಧರ್ಮರಹಸ್ಯವರಿಯೆಂದಾ || ೧೮ ||

ಭಾ. ಷ. ಜನಪ ಗುರುತಲ್ಪ[4]ಗನ ಪರಧನ |
ಹನನ ರಾಜದ್ವೇಷಿಯನು ವಿ |
ಪ್ರನನು ಕೊಂದನ ಖಳನ ಭೂಸುರನೆಂದುಮನ್ನಿಸದೆ ||
ಮುನಿದು ದೇಶದೆ ಪೊಱಮಡಿಪುದಾ ||
ತನನು ದೇಶದೊಳಿರಿಸೆ ದೋಷವು |
ಮನುಜನಾಥಂಗಹುದು ತನುನಿಗ್ರಹವು ಬೇಡೆಂದ || ೧೯ ||

ಭಾ. ಷ. ಭಾವಿಸಲು ದು[5]ರ್ಗಂಗಳವು ನಾ |
ನಾವಿಧಗಳಾಗಿಪ್ಪವದಱೊಳು |
ಭೂವರಗೆ ನರದುರ್ಗವೇ ಪಿರಿದೆನಿಪುದದಱಿಂದ ||
ನೋವಮಾಡದೆಸಲಹಬೇಹುದಿ |
ಳಾವಲಯದಲಿ ನಾಲ್ಕು ವರ್ಣವ |
ನಾವಕಾಲಕ್ಕಾದೊಡಾನೃಪ ಕೆಡನು ಕೇಳೆಂದ || ೨೦ ||

ಭಾ. ಷ. ಕೇವಲಕ್ಷಮೆಯಿಂದ ಸಾಧುವು |
ದಾ[6]ವಳವ ಹೋಲುವನುನೃಪನೆಂ |
ದೀವಿಷಯದಲಿ ದಿವಿಜಮಂತ್ರಿಯ ವಾಕ್ಯವೊಂದುಂಟು ||

---

1 ಒಡೆಯು, ಮಂತ್ರಿ, ಗೆಳೆಯು, ಬೊಕ್ಕಸ, ದೇಶ, ಕೋಟೆ, ದಂಡು ಈ ಏಳು ಸಪ್ತಪ್ರಕೃತಿಗಳು. 2 ಸತ್ಯೃತ್ತವಿನಯುಗಳು. 3 ರಾಜನೀತಿ. 4 ಗುರುಪತ್ನೀಗಮನ ಮಾಡಿದವನನ್ನು. 5 ದುರ್ಗವು ಸ್ಥಾನಗಳು, ಕೋಟೆಗಳು. 6 ಮದದಾನೆ.

ಭಾವಿಸುವಡತಿಸಾಧುವಲ್ಲದೆ |
ಯಾವಗವುತಿಕ್ರೂರನಲ್ಲದೆ |
ಭೂವಲಯವನು ಸಲಹುತಿಪ್ಪುದೆ ನೃಪಗೆ ಮತವೆಂದ || ೨೧ ||

ಭಾ. ಷ. ಅರಸ ಮೃದುವಾಗಿರಲು ಸಾಧು |
ದ್ವಿರದ[1]ವನು ಮಾವತಿಗನೇರುವ |
ಪರಿಯುಲಾತನ ಮೆಟ್ಟಿಯಾಳ್ವುದು ನೀಚಭೃತ್ಯಜನ ||
ಪಿರಿದೆನಿಸಿ ತಾ ಕ್ರೂರನಾದೊಡೆ |
ನರರಳುಕಿ ಹೋಹರು ವಸಂತನ |
ಖರಕಿರಣ[2]ನಂತಿವನ ವರ್ತನವಾಗಬೇಕೆಂದ || ೨೨ ||

ಭಾ. ಷ. ಪದರಿ[3] ಸಕಲಪ್ರಜೆಯ ನೋಯಿಸ |
ಲದು ನೃಪಗೆ ಲೇಸಲ್ಲ ಗರ್ಭಿಣಿ |
ಯುದರಶಿಶು ಬದುಕುವರೆ ತಕ್ಕೂಟಗಳನುಂಬಂತೆ ||
ಪದುಳ[4]ದಲಿ ಭೂಪ್ರಜೆಯು ಕೆಡದಂ |
ದದಲಿ ರಕ್ಷಿಪ ಬಗೆಯ ವಿರಚಿಸು |
ವುದೆ ವಿಚಾರಿಸೆ ಧರ್ಮಸಾಧನವೆಂದನಾ ಭೀಷ್ಮ || ೨೩ ||

ಭಾ. ಷ. ಜನಪ ಕೇಳ್ ಕರ್ತವ್ಯವರಿಯದೆ |
ಅನವರತ ದೌರಾತ್ಮ್ಯದಿಂದಲಿ |
ಮನಕೆ ಬಂದಂದದಲಿಯನುಚಿತದಿಂದ ನಡೆವವನ ||
ತನಗವನು ಗುರುವಾದಡಾಗಲಿ |
ಮುನಿದು ಶಿಕ್ಷಿಸಿ ಬಿಡಲು ಬೇಕದ |
ಕಿನಿತುಪೇಕ್ಷಿಸಿಯಮ್ಮ[5]ದಿರ್ದೊಡೆ ಕಿಡುವನರಸೆಂದ || ೨೪ ||

ಭಾ. ಷ. ಅರಸು ನಾನಾವರ್ಣಧರ್ಮೋ |
ತರ[6]ದ ರಕ್ಷೆಯ ಮಾಡಬೇಹುದು |
ಪಿರಿದೆನಿಸುತಿಹ ಸಂಧಿವಿಗ್ರಹಮುಖ್ಯಷಡ್ಗುಣ[7]ವ ||

---

1 ಆನೆ. 2 ಸೂರ್ಯ. 3 ಕಾಡಿ. 4 ಸಂತೋಷ, ಸೌಖ್ಯ. 5 ಅಧಿಕಾರ ನಡಿಸದಿದ್ದರೆ. 6 ಸಮೂಹ. 7 ಸಂಧಿ, ವಿಗ್ರಹ, ಯಾನ, ಆಸನ, ದ್ವೈಧ, ಆಶ್ರಯಗಳನ್ನು.

ಅರಿಯೊಳಾಂತಿರಬೇಕು ಮಿಗೆ ಕಾ |
ತರಿಸದರ್ಥೋಪಾರ್ಜನವನಾ |
ದರಿಸಿ ಮಾಡಲು ಬೇಹುದೆಲೆ ಭೂಪಾಲ ಕೇಳೆಂದ || ೨೫ ||

ಭಾ. ಷ. ಕಡುಗಿ[1] ಕೊಂಡೆಯ[2]ದವರ ಮಾತಿಗೆ |
ಬಡವರನು ಬಾಧಿಸದೆತಪ್ಪುಗ |
ಳಡಸಿದಲ್ಲಿ ಯಥಾಪರಾಧಕೆ ತಕ್ಕನಿತು ಧನವ ||
ಪಿಡಿದುಕೊಂಡಾಧನವ ಬಯ್ತಿ ||
ಟ್ಟಡದೆ ಸತ್ಪಾತ್ರಕ್ಕೆ ದಾನವ |
ಕೊಡುವುದುತ್ತಮಧರ್ಮ ರಾಜರಿಗರಸ ಕೇಳೆಂದ || ೨೬ ||

ಭಾ. ಷ. ಮನಕೆ ನಂಬುಗೆಯಾದಡೇನದು |
ಜನಪ ಪಿರಿದುಂ ನಂಬಲಾಗದು |
ಮನುಜರನು ನೆಱೆನಂಬದಿರಲೂಬಾರದಿನ್ನಿದಕೆ ||
ಅನುವಱಿತು ಕಾರ್ಯೋಚಿತಕೆತ |
ಕ್ಕನಿತರಲಿ ನಿಜಬುದ್ಧಿಯಲಿ ಸ |
ಜ್ಜನರನೋಡಿ ಪರೀಕ್ಷಿಸಿಯೆ ನಂಬುವುದು ಕೇಳೆಂದ || ೨೭ ||

ಭಾ. ಷ. ಧನದ ಮೇಲಣ ಕಾಂಕ್ಷೆ[3]ಯಿಂದಲೆ |
ಮುನಿದು ಸುಜನರಬಂಧುಗಳ ತ |
ನ್ನನುಚರರ[4] ಪ್ರಜೆಗಳನು ಬಾಧಿಪ ಲುಬ್ಧನಹನೃಪಗೆ ||
ಜನಪದ[5]ದ ಪ್ರಜೆಯಿಂದಲಾಗಲಿ |
ಮುನಿದ ಶತ್ರುಗಳಿಂದಲಾಗಲಿ |
ಯನುಚರರ ದೆಸೆಯಿಂದಲಾಗಲಿ ಕೇಡು ಬಹುದೆಂದ || ೨೮ ||

ಭಾ. ಷ. ಪಿರಿದುಧನಗಳ ಧರ್ಮದಿಂದವ |
ಧರಿಸುವರ ನೆಱೆಧರ್ಮಪಥದಲಿ |
ಚರಿಸುವರ ಪರರಿಂಗಿತಜ್ಞರ ಲೌಲ್ಯ[6]ರಹಿತರನೂ ||

---

1 ಸಿಟ್ಟಾಗಿ. 2 ಜಾಡಿಯುವರು. 3 ಆಶೆಯಿಂದ. 4 ಸೇವಕರನ್ನು. 5 ದೇಶದ.
6 ಚಾಂಚಲ್ಯ.

ಪರಮನೀತಿಯೆಧರ್ಮವನು ವಿ |
ಸ್ತರಿಪವರ ಕಪಟಂಗಳಿಲ್ಲದ |
ಹಿರಿಯವೃದ್ಧರ ಸೇವಿಪರಸಿಗೆ ವೃದ್ಧಿಯಹುದೆಂದ || ೨೯ ||

ಭಾ. ಷ. ಕಪಟವಿಲ್ಲದೆ ಸೊಕ್ಕಿಮೆಱೆಯದೆ |
ವಿಪುಲ[1]ವೈಭವಗಳನು ಭೂಮಿಪ |
ನಪರಿಮಿತಭಾಗ್ಯಗಳ ಕೊಡಲದನೋಡಿ ಮನದೊಳಗೆ ||
ಚಪಲರಾಗಿಯಸೂಯೆಗೆಯ್ಯದೆ |
ಕೃಪಣರಲ್ಲದ ಜನರು ಮಿಗೆ ಸೇ |
ವಿಪ ಧರಿತ್ರೀಪಾಲಕಗೆಯಭಿವೃದ್ಧಿಯಹುದೆಂದ || ೩೦ ||

ಭಾ. ಷ. ಅರಸ ಧನದಾರಾ[2]ದಿವಸ್ತೂ |
ತ್ಕರ[3]ವ ರಕ್ಷಿಸಿಕೊಂಬನಾವನು |
ಹಿರಿದೆನಿಸುವಾಜ್ಞೆಯಲಿ ರಕ್ಷಿಪರಾಜನಿಲ್ಲದೊಡೆ ||
ಧರೆಯೊಳರಿದಾದಿಯಲಿ ದಾನವ |
ಗುರು ನುಡಿಯನೇ ಸಕಲನೀತಿ |
ಜ್ಞರು ನಲಿಯೆ ನೀತಿಗಳನೆಂದರುಹಿದನು ಗಾಂಗೇಯ || ೩೧ ||

---

## ಚನ್ನಬಸವ ಪುರಾಣ.

ವಾ. ಷ. ಪರಿಕಿಪೊ[4]ಡೆ ಸಂತತಂ ವಕ್ರಚರಿತಂ ನುಡಿವ |
ಡೆರಡುನಾಲಗೆ ಧನವನೇ ಕಾದುಕೊಂಡಿರ್ಪ | [ಕೋಪಂ ||
ಪರಮಲೋಭಂ ಭೋಗದೊಡನೆ ಕೂಡಿದ ಬಾಳ್ವೆ ಪರರಸುವ[5]ನುಗಿವ
ಉರಗಂಗಮರಸಿಂಗಮನ್ಯೋನ್ಯಮಾದೊಡಂ |
ನಿರುತದಿಂ ಕಂಚುಕಿವಿ ಕಿವಿಯೆಕಂಹೆಂದೆಂಬ | [ || ೩೨ ||
ಪರಿಯಾಯಭೇದಮಿದು ನಾಡಾ[6]ಣ್ಮಗಿದು ನೀತಿಗನುಚಿತಂ ಕೇಳೆಂದನು

---

1 .ಬಹಳ. 2 ಹೆಂಡತಿ. 3 ಸಮೂಹವನ್ನು. 4 ಪರೀಕ್ಷಿಸಿದರೆ. 5 ಅಪಹರಿಸುವ. 6 ಅರಸಿಗೆ.

ಕೊಂಡೆಯರ ನುಡಿಗಳೇ ಕರ್ಣಕ್ಕೆ ಭೂಷಣಂ |
ಕೊಂಡೆಯರ ಮಾರ್ಗವೆದೆದಾವರೆಗೆ ಭಾಸ್ಕರಂ |
ಕೊಂಡೆಯರೆ ತನಗೆ ಕಡುಹಿತವರೆಂದೆರಡಿಲ್ಲದೇ ನಂಬುವವನೀಶನ ||
ಮಂಡಲಕೆ ಕೇಡಪ್ಪುದಾನೃಪನಸಿರಿನಭೋ |
ಮಂಡಲದ ಕುಸುಮದೋಲ್ ಬಯಲಪ್ಪುದದಱಿಂದ | [|| ೩೩ ||
ಮಂಡಲೇಶ್ವರರಾವಗಂ ಕೊಂಡೆಯಂಗೇಳ್ವುದನುಚಿತಂ ಕೇಳೆಂದನು

ಕುಳಿರ[1]ಮಂಜಿನ ಪನಿಗಳಿಂ ಕಮಲಸಂಕುಲಂ |
ಜಲಬಿಂದುವಿಂದೆ ಮಧು ಲೋಭದಿಂ ಗುಣಗಣಂ |
ಗಳಹ[2]ತನದಿಂದೆ ಗೌರವಮನಾಚಾರಪ್ರವರ್ತನದೆ ಕುಲದಪೆಂಪು ||
ಪುಳಿಯಿಂದ ಪಾಲ್ ಬಹಳ ಕೋಪದೆ ತಪಃಫಲಮು |
ಮಲೆ[3]ದು ಬೀಸುವ ಗಾಳಿಯಿಂ ಮೇಘದೊಡ್ಡ[4]ವಣೆ | [ದನು || ೩೪ ||
ಸಲೆಕೆಡುವವೊಲ್ಕೆಡುವುದರಸಾಳ್ವ ಧರೆ ಪಿಸುಣರಿಂ ನೃಪತಿ ಕೇಳೆಂ

ಖಳರ ಮಾಯಾವಿಗಳ ದುರ್ವಿನೀತರ ಮಹಾ |
ಕು[5]ಳರ ದುರ್ಜನರ ಡಂಭರ ನೀತಿಮಾ[6]ರ್ಗವಿ |
ಹ್ವಲರನಿಷ್ಠುರವಚನಕೋ[7]ವಿದರ ದುರ್ಬೋಧಕರ ದುರಾಚಾರಪರರ ||
ಕುಲವಿಹೀನರ ಕುಮಂತ್ರಾನ್ವಿತರ ಶ್ರುತಿಪಥವ |
ನುಳಿದು ನುಡಿವವರ ಕಂಡರೆ ನಿರಾ[8]ಕರಿಸುವುದು | [|| ೩೫ ||
ನೆಲನನಾಳ್ವರಸುಮಕ್ಕಳ ನೀತಿ ಬಿಜ್ಜಳನೃಪಾಲ ನೀಂ ಕೇಳೆಂದನು

ಪರಗೆ ತಾಂ ಮಾಡಿದುಪಕಾರಂಗಳಂ ತನಗೆ |
ಪರರಿಂದಲೊದಗಿದಪಕಾರಂಗಳಂ ನಾಡೆ | [ದೊಳು ||
ಪರರ ಕೂಡಾಡಿ ಕೆಡಿಸುವುದುತ್ತಮರ ಮತಕೆ ಸಲ್ಲದು ಮಹೀತಳ

---

1 ಚಳಿಯು. 2 ಹರಟೆ ಕೊಚ್ಚೋಣ. 3 ಬಲದಿಂದ ಬೀಸೋಣ. 4 ಗುಂಪು (ದಟ್ಟಣೆ). 5 ನೀಚರ. 6 ಚಲೋ ದಾರಿಯನ್ನು ಬಿಟ್ಟು ಅಡ್ಡಹಾದಿ ತುಳಿಯುವವರ. 7 ಜಾಣರ. 8 ಅನಾದರ ಮಾಡುವದು.

ಪರಗೆ ತಾಂ ಮಾಡಿದಪಕಾರಂಗಳಂ ತನಗೆ |
ಪರರಿಂದಲೊದಗಿದುಪಕಾರಂಗಳಂ ನಾಡೆ | [||೩೬||
ಪರರ ಕೂಡಾಡಿ ತೋರುವುದುತ್ತಮರ ಮತಕೆ ಸಲ್ವುದೈ ಕೇಳೆಂದನು

ಧರ್ಮಮಂ ಬಿಡದೆ ಮಾಳ್ಪುದು ತನ್ನ ರಾಜ್ಯದೊಳ್ |
ಧರ್ಮಿಷ್ಠರುಳ್ಳೊಡವರಂ ಪಾಲಿಪುದು ವಿಮಲ | [ಪುದು||
ಧರ್ಮಕ್ಕೆಡರ್ಬಂ[1]ದೊಡಾಲಸ್ಯಮಂ ಮಾಡದೊಡನೊಡನೆ[2] ಪರಿಹರಿ
ಧರ್ಮಹೀನರನುದಾಸಿಪುದು ನಿರುಪಮ[3]ಜಾತಿ |
ಧರ್ಮಂಗಳಂ ತಪ್ಪದಂತೆ ನಡೆಸುವುದು ನೃಪ | [||೩೭||
ಧರ್ಮದ ರಹಸ್ಯ[4]ವಿದು ತಪ್ಪದವನೀಪಾಲತಿಲಕ ನೀಂ ಕೇಳೆಂದನು

ಧನವಧಿಕವಾಗಬೇಕೆಂಬಾಸೆಯಿಂದ ದು |
ರ್ಜನರ ಚಹಡಿಯ ಮಾತುಗಳ ಕೇಳ್ದು ಸಕಲ ಸ |
ಜ್ಜನರನಾಕರಿಸಿ ಪಾಪವನೆ ಸಂಗ್ರಹಿಪಂತೆ ಸಂಗ್ರಹಂ ಮಾಡಿದೊಡವೆ||
ಘನವಾಗಿ ಕಾಲೋಚಿತಕೆ ತೋರಿ ಹೆಚ್ಚಿ[5]ದಿಂ |
ಧನವಗ್ನಿಯಿಂ ದಹನವಪ್ಪಂತೆ ಶತ್ರುನೃಪ | [ದನು||೩೮||
ಜನದಿಂದೆ ಕಡೆಗೆ ಬಯಲಹುದು ಪುಸಿಯಲ್ಲವನಿಪಾಲ ನೀಂ ಕೇಳೆಂ

ಧನದಾಸೆಗಾಗಿ ದೇಶಪ್ರಜೆಯ ನೋಯಿಸದೆ |
ಧನಮುಳ್ಳವರ ಬದುಕುಗಳ ಕಂಡು ಕಱು[6]ಬಿಸದೆ | [ದೊಳು||
ಧನವನೊದವಿಸುವ[7]ದೊಕ್ಕಲಿಗಯ್ದು ಪಾಲರಸಿಗೊಂದು ಪಾಲೀಕ್ರಮ
ಧನವಧಿಕವಹುದೀಪರಿಯೊಳಾರ್ಜಿ[8]ಸಿದೊಡೆ ತ |
ದ್ಧನವನೊಲವಿಂ ಸುಪಾತ್ರದೆ ವೆಚ್ಚಿಸಲ್ಪುಣ್ಯ | ||೩೯||
ಧನಪಾಲನಪ್ಪನಾನೃಪತಿ ಪರಲೋಕದೊಳಗರಸ ನೀಂ ಕೇಳೆಂದನು

---

1 ಅಡ್ಡಿ, ತೊಂದರೆ. 2 ಕೂಡಲೆ. 3 ಸರಿಯಿಲ್ಲದ. 4 ಗುಟ್ಟು. 5 ಕಟ್ಟಿಗೆ, ಉರವಲ.
6 ಹೊಟ್ಟೆಕಿಚ್ಚು ಪಡದೆ. 7 ಕೂಡಿಸುವ. 8 ಗಳಿಸಿದರೆ.

ಆಣೆಯೀಗರಸುತನವೆಂದೆಂಬ ತನುವಿಂಗೆ |
ಪ್ರಾಣಮುದಕಪಜಯಂ ಬಂದು ಪೊರ್ದಿದೊಡೆ ತತ್ |
ಕ್ಷೋಣಿಪತಿ ಹರಣ[1]ವಿದ್ದುಂ ಮೃತಿಯನೆಯ್ದುವನಿದಕ್ಕೆ ಸಂದೇಹ
ತ್ರಾಣವಿಲ್ಲದೆ ಬಱಿಯ ಭುಜಬಲದ ಗರ್ವದಿಂ | [ಮೇಕೆ||
ಹಾಣೆ[2]ಹೊಕ್ಕಿಱಿಯಲಾಱದೆ ಮುಱಿದು ಬಪ್ಪವಂ | [ಳೆಂದನು ||೪೦||
ರಾಣಿಯರ ನಗೆಯ ಕಯ್[3]ಹೊಯಿಲವಾದ್ಯದಗತಿಯ ನರ್ತಕಂಕೇ

ಮುಱಿಹೊಕ್ಕವರ ಕಾಯ್ದು ಮಾರಾಂತ[4] ಭೂಭುಜರ |
ನಿಱಿವ[5] ಬೇಡಿದವರ್ಗೆ ಬೇಡಿದ ಸುವಸ್ತುವಂ | [ವನು||
ನೆಱೆ ಕೊಡುವದೀಗ ಕ್ಷತ್ರಿಯರ ಸದ್ಧರ್ಮವರ್ತನವಾಸುವರ್ತನ
ತೊಱೆದು ಚಾವಡಿಯೊಳಗೆ ಗಳಹಿ[6] ಹುಯ್ಯಲ[7]ಕಂಡು |
ಬೆಱೆತೋಡಿ ಗಟ್ಟಬೆಟ್ಟಂಗಳಂ ಸಾರ್ದುಬಾ | [ದೊಳು ||೪೧||
ಯ್ದಿಱಿವವಂ ರಾಜನೇಹಗರಣದ[8] ರಾಜನಲ್ಲವೆ ಮಹೀ ಮಂಡಲ

ಎನಿತೆನಿತು ಸನ್ಮಾರ್ಗದೊಳು ಬಿಡದೆ ನಡೆದರೆಯುಂ |
ಮೆನಿತೆನಿತು ಸತ್ಕೀರ್ತಿಪಡೆದರೆಯುಮವನಿಯೊಳ | [ದೊಳು||
ಗೆನಿತೆನಿತು ಸದ್ಧರ್ಮಸಂಜನಿತ[9]ವಸ್ತುವಂ ಪಿಡಿದೊಡೆಯುಮೀನೆಲ
ಎನಿತೆನಿತು ಬಲ್ಲವಿಕೆ[10] ಮೊಳೆತೊಡಂ[11] ಬಾಹುಬಲ |
ಮೆನಿತೆನಿತು ತನಗೆ ಪಿರಿದಾಗಿರ್ದೊಡಂ ಶತ್ರು | [||೪೨||
ಜನವ ಸಾಧಿಸುವಲ್ಲಿ[12] ಕರುಣಮಂ ಮಾಱ್ಪುದನುಚಿತವರಸಕೇಳೆಂದನು

ಸಾಮವೇ ವೇದಂಗಳೊಳಗಧಿಕವಾದಂತೆ |
ಸಾಮವೇ ಮಿಗಿಲಾಯ್ತು[13]ಪಾಯಂಗಳಲ್ಲಿ ತ | [ಗಳು||
ತ್ಸಾಮವೇ ಭೂಭುಜರ ಬಾಳ್ಕೆಗನುಸಾರಿ ಮಿಕ್ಕಿನ ಮೂರುಪಾಯಂ

---

1 ಪ್ರಾಣ. 2 ಸಮರಾಂಗಣ. 3 ಚಪ್ಪಾಳೆ. 4 ಎದುರಾದ. 5 ಹೊಡೆಯುವ, ಕಾದುವ. 6 ಬಾಯಿಗೆ ಬಂದಂತೆ ಮಾತಾಡಿ. 7 ಕಾಳಗ. 8 ಹೇಡಿತನದ. 9 ಚೆನ್ನಾಗಿ ಹುಟ್ಟಿದ. 10 ಜಾಣ್ಮೆ. 11 ಹುಟ್ಟಿದರೂ. 12 ಗೆಲ್ಲುವಲ್ಲಿ, ಗೆಲ್ಲುವಾಗ. 13 ಚತುರೋಪಾಯಗಳು:— ಸಾಮ, ದಾನ, ಭೇದ, ದಂಡ.

ಸಾಮಾನ್ಯಮದಱೊಳಗೆ ದಂಡಮೆಂದೆಂಬುದದು |
ಸಾಮಾನ್ಯದೊಳಗೆ ಸಾಮಾನ್ಯಮಿದನಱಿಯದರು | [|| ೪೩ ||
ಸಾಮಾನ್ಯರೆನಿಪರವನೀಪತಿಗಳೊಳು ನೃಪಲಲಾಮ[1]ನೀಂಕೇಳೆಂದನು

ಅರಿನೃಪರ ಸಂಧಾನ[2]ಸಮಯಂಗಳಲ್ಲಿ ಕರಿ |
ತುರಗಂಗಳೇರಾಟದಲ್ಲಿ ಸಂಗರದಲ್ಲಿ |
ತರುಣಿಯರ ಕೇಳಿಮೇಳಂಗಳೆಡೆಯಲ್ಲಿ ಮಜ್ಜನದಲ್ಲಿ ಮಲಗುವಲ್ಲಿ ||
ಪರಿಪರಿಯ ಪರಿ[3]ಕರದ ಭೋಜ್ಯಭೋಜನದಲ್ಲಿ |
ಪರವಿವಾಹಾದ್ಯನೇಕೋತ್ಸಹದಲ್ಲಿ ಭೂ |
ವರನಿ[4]ಕರಕೆಚ್ಚಱಿಕೆಪಿರಿದಾಗಬೇಕು ಬಿಜ್ಜಳನೃಪತಿಕೇಳೆಂದನು ||೪೪||

ವ್ಯಸನ[5]ಸಪ್ತಕದ ನೆತ್ತಿಗಳ ನಿಱಿದೊಡೆಬಡಿದು |
ಪುಸಿಯನವನೀತಳದೊಳಡಿಯೂರದಂತೆ ತೊಲ |
ಗಿಸಿಜಾತಿಸಂಕರ[6]ಂಗಳ ಮೂಗನರಿ[7]ದು ಬೆಳುಗವ[8]ತೆಯಂಸುಟ್ಟುತೂಱಿ||
ಪೆಸರನಡಗಿಸಿ ಕಳವು ಪಾದರಂಗಳಹಿಂಸೆ |
ಯಸುವ ತೊಲಗಿಸಿ ಧರಾತಳವನಾಜ್ಞೆಯೊಳು ಪಾ | [ || ೪೫ ||
ಲಿಸುವ ರಾಜಂಗಿಹಪರಂಗಳೊಳಗನುಮಾನವಿಲ್ಲರಸ ಕೇಳೆಂದನು ||

ಹಿರಿಯರೊಳು ದೇವರೊಳು ಗುರುಗಳೊಳು ಘನಭಯಂ |
ಪರಮಪುಣ್ಯಕ್ಷೇತ್ರ ತೀರ್ಥಂಗಳೊಳು ಭಕ್ತಿ |
ಶರಣಾಗತರೊಳವಗುಣಂಗಳಂನೋಡದೀಡೇಱಿ[9]ಸುವದೃಢಮಪ್ಪುವ ||
[10]ಪರಿಜನಂಗಳೊಳಮುಳದಯೆಸಾಧುಸಜ್ಜನರ |
ನೆರವಿಯೊಳಗಾದರಣೆ ಹಿತರೊಳತಿವಿಶ್ವಾಸ | || ೪೬ ||
ವಿರಬೇಕು ನೀತಿಕೋವಿದನೆನಿಸುವರಸಿಂಗೆ ನೃಪತಿ ನೀಂಕೇಳೆಂದನು

---

1 ಶ್ರೇಷ್ಠ. 2 ಒಡಂಬಡಿಕೆ, ಒಪ್ಪಂದ. 3 ಸಿದ್ಧತೆಯು. 4 ಸಮೂಹ. 5 ಮೃಗಯಾ, ದ್ಯೂತ, ದಿವಾಸ್ವಪನ, ಪರಿವಾದ, ಸ್ತ್ರೀ, ಮದ, ತೌರ್ಯತ್ರಿಕ (ಕುಣಿಯೋಣ, ಹಾಡೋಣ, ವಾದ್ಯಬಾರಿಸೋಣ) ಇವು ಸಪ್ತವ್ಯಸನಗಳು. 6 ಒಟ್ಟುಗೂಡಿಕೆಯು, ಮಿಶ್ರಣದ. 7 ಕಡಿದು, ಕೊಯಿದು. 8 ಅಜ್ಞಾನ, ದಡ್ಡತನ. 9 ಸಿದ್ಧಿಗೊಯ್ಯುವ. 10 ಆಳುಗಳಲ್ಲಿ, ಸೇವಕರಲ್ಲಿ.

ಸಿರಿಯು ಮುದದಿಂ ಸೊಕ್ಕಿ ಮಾನ್ಯರಂ ಧಿಕ್ಕರಿಸಿ ।
ಪರಿವಾರಕ[1]ಾಗಾಗ ಸಂಬಳಂಗಳನಿತ್ತು ।
ಪೊರೆದುಕೊಂಡಿರದೆ ಸಪ್ತಾಂಗ[2]ಸನ್ನಾಹದೊಳಗೆಚ್ಚಱಿಕೆಯನಿತಿಲ್ಲದೆ ॥
ಪರಮಬಾಂಧವರ ಲೆಕ್ಕಿಸದೆ ಕಯ್ವಿಡಿದವಳ ।
ನರವರಿಸಿ[3] ಸೂಳೆವೆಂಡಿರ ಸಂಗದೊಳಗಿಪ್ಪ ।
ಧರಣಿಪತಿಯುಂ ಹಿಂಗದಿರ್ಪ[4]ಳೇ ಜಯಲಕ್ಷ್ಮಿನೃಪತಿ ನೀಂ ಕೇಳೆಂದನು [ ॥ ೪೭ ॥

ಆವಾಗಲುಂ ಸಚ್ಚರಿತ್ರವೊಂದೇಮಾತು ।
ರೂವ[5]ಱಿದು ಮಾಟ್ಪ ಬೀಯ[6]ುಂ ಸಕಲಪರಿಜನವ ।
ನೋವಿ[7] ಕಾಲೋಚಿತವನಱಿದು ಭೋಗಿಪ ಭೋಗಮುಪರಾಧಕುಳ್ಳ [ಕೋಪಂ ॥
ಲಾವಕರ[8] ನುಡಿಗೇಳದುದು ಕೇಳ್ದೊಡಂ ಬಲ್ಲ ।
ಕೋವಿದರ ಮುಖದೆ ನಿರ್ಧರಿಸಿ ಮಾಟ್ಪುದು ಸನ್ಮ ।
ಹೀವಲ್ಲಭರ ಮಾರ್ಗವಿದ ಪಿಡಿವುದುತ್ತಮೋತ್ತಮವರಸ ಕೇಳೆಂದನು [ ॥ ೪೮ ॥

ಮುಟೆಯಿಂದ ಸಕಲಸಸ್ಯಾದಿಗಳ್ಕುಸುಮಪರಿ[9] ।
ಮಳದಿಂದ ತುಂಬಿಗಳ್ ಜ್ಞಾನದಿಂ ತಪಮಿಂದು ।
ಕಳೆಯಿಂ ಚಕೋರಿಗಳು ಧರ್ಮದಿಂದರಸಾಳ್ವ ಭೂಮಂಡಲಂ [ಭಾವಿಸೆ ॥
ಕೆಳೆಯ[10]ರಿಂ ಬೇಟ[11]ಂ ಸುಪುತ್ರರಿಂದಿಹಪರಂ ।
ಗಳಸುಖಂ ಪೆಚ್ಚುವಂದದೆ ಪೆಚ್ಚುವುದು ಮಂತ್ರಿ ।
ತಿಲಕನಿಂದೈಶ್ವರ್ಯವವನಿಪಂಗಿದು ರಾಜನೀತಿ ನೀಂಕೇಳೆಂದನು [ ॥ ೪೯ ॥

---

1 ಸೇವಕರಿಗೆ, ಪಡೆಯುವರಿಗೆ. 2 ಸಪ್ತಪ್ರಕೃತಿ. 3 ಹೆದರಿಸಿ. 4 ಬಿಟ್ಟುಹೋಗು. 5 ರೂಪವನ್ನು ತಿಳಿದು, ಯೋಗ್ಯತೆಯನ್ನರಿತು. 6 ವೆಚ್ಚವು. 7 ಕಾಪಾಡಿ. 8 ಕೀಳರ. 9 ಸುವಾಸನೆಯಿಂದ. 10 ಗೆಳೆಯರಿಂದ. 11 ಪ್ರೀತಿ.

## ಬಸಪ್ಪಶಾಸ್ತ್ರಿಯ ಭರ್ತೃಹರಿ ನೀತಿಶತಕ.

ಪುಸಿಯಹುದೊಮ್ಮೆ ಸತ್ಯತರವಾದಪುದೊಮ್ಮೆ ಕಠೋರವೊಮ್ಮೆ ಭಾ | ವಿಸೆ ಮೃದುವಾದಿಯೊಮ್ಮೆ ಬಲುಹಿಂಸಕವೊಮ್ಮೆ ದಯಾರ್ದ್ರವೊಮ್ಮೆ ನೋೞ್ || ಅಸುವಿಗಮರ್ಥಕಂ ಪೆಱೆದುಕೊಂಡಿಹುದೊಮ್ಮೆ[1] ಮಹಾವದಾ[2]ನ್ಯವಾ। ಗೆಸೆದಪುದೊಮ್ಮೆ ಲೋಕದೊಳನೇಕವಿಧಂ ನೃಪನೀತಿ ವೇಶಿ[3]ವೋಲ್। [ || ೫೦ ||

ಕಂ. ಎಣಿಸಲ್ಕಾಜ್ಞಾ ದ್ವಿಜರ |
ಕ್ಷಣ ವಿತರಣ[4] ಭೋಗ ಕೀರ್ತಿ ಮಿತ್ರಾವನ[5] ಷ |
ಡ್ಗುಣಗಳ ನುಳಿದಿರ್ಪಾರ್ಥಾ |
ರಿಣಿಯೊಡೆಯರುಪಾಶ್ರಯದೊಳದೇಂ ಫಲಮಿಳೆಯೊಳ್ || ೫೧ ||

## ರಾಮಚಂದ್ರಚರಿತಪುರಾಣ.

ಕಂ. ಇಱಿಯದೆ ಬೇಡಿದೊಡೀಯದೆ |
ಬಱಿದೆ ಕುಲೀನತೆಗೆ[6] ಬೆಸೆದು[7] ಪಾರ್ಥಿವಶಬ್ದ ||
ಕ್ಕೆಱೆವಟ್ಟೆನಿಸಿ[8] ಧರಿತ್ರಿಗೆ |
ಪೊಱೆಯೆನಿಪಂ ರಾಜನಾಮಧಾರಕನಲ್ತೆ? || ೫೨ ||

## ಕರ್ಣಾಟಕ ಶಬ್ದಾನುಶಾಸನಮ್.

ಇಂಗಡಲಕುವರಿಯುರಸಂ[9] |
ಗಂಗೆಂಟಹುದರ್ಥಸಿದ್ಧಿಯರಮನೆಯೋಳ್[10] ಲಂ ||
ಚಂಗುಳಿಗಳೊಳರೆನಲ್ ನೃಪ |
ಸಂಗಳಿಸಾ ಸ್ವಾಮಿಕಾರ್ಯಪರರಂ ಚರರಂ || ೫೩ ||

---

1 ಒಂದರೊಡನೆ ಒಂದು ತಗುಲಿಕೊಂಡು. 2 ಸವಿಮಾತಿನದು. 3 ಸೂಳೆಯಂತೆ. 4 ದಾನ. 5 ಗೆಳೆಯರ ರಕ್ಷಣ. 6 ಒಳ್ಳೇ ಕುಲದಲ್ಲಿ ಹುಟ್ಟಿದುದಕ್ಕೆ. 7 ಹೆಮ್ಮೆಗೊಂಡು. 8 ಹೊರತಾದವರು, ಅಯೋಗ್ಯರು. 9 ಪಾಲ್ಗಡಲ ಮಗಳು, ಲಕ್ಷ್ಮಿಯು. 10 ದೂರವಾಗುವದು, ಕೆಡುವದು

## ಕುಮಾರವಾಲ್ಮೀಕಿರಾಮಾಯಣ.

ಕಳವನೃತವನ್ಯಾಯ ಹುಸಿದಟ |
ದುಟವು[1] ದುರ್ಮಾರ್ಗಭಾಧೆ ವಂಚನೆ |
ಹಟವು ಹಾದರ ಬಂದಿ[2] ಸಂಕರಜಾತಿಧರ್ಮಗಳು ||
ಉಳಿಯಲರಿಯವು ರಾಮರಾಜ್ಯದ |
ಸುಲಭತೆಗೆ ಸರಿಯಾವುದೈ ಕುಶ |
ಕೇಳು ಕೇಳಾಶ್ಚರ್ಯವಿದನೀಗೆಂದನಾಮುನಿಪ || ೫೪ ||



1 ದಂಡಿನ ಗದ್ದಲ. 2 ಸೆರೆಹಿಡಿಯೋಣ.

# ಪರಿಶಿಷ್ಟ (ಇ).

## ಸ್ಥಳವಿವರಣೆಗಳು.

(೧) **ಕನೋಜ್:** ಈ ಪಟ್ಟಣವು ವಾಯುವ್ಯಪ್ರಾಂತದ ಫರಕಾಬಾದ್ ಜಿಲ್ಲೆಯಲ್ಲಿ ಹರಿಯುವ, ಕಾಳೀನದಿಯ ತೀರದಲ್ಲಿ ಕಾಳೀ-ಗಂಗಾ ನದಿಗಳ ಸಂಗಮಕ್ಕೆ ೫ ಮೈಲು ದೂರದಲ್ಲಿರುತ್ತದೆ. ಇದು ಮೊದಲು ಗುಪ್ತರ ರಾಜಧಾನಿಯಾಗಿತ್ತು.

(೨) **ಸೆಹವಾನ್:** ಇದು ಈಗ ಕರಾಚಿ ಜಿಲ್ಲೆಯ ಒಂದು ತಾಲೂಕಾಗಿರುತ್ತದೆ. ಇದರ ಮೂಡಣ ಮೇರೆಯಲ್ಲಿ ಸಿಂಧುನದಿಯು ಹರಿಯುತ್ತದೆ. ಇದರ ಮುಖ್ಯ ಪಟ್ಟಣ ಕೊಟ್ರಿ.

(೩) **ಬಕ್ಕರ:** ಇದು ಸಿಂಧುಪ್ರಾಂತದಲ್ಲಿ ಷಿಕಾರಪುರ ಜಿಲ್ಲೆಯಲ್ಲಿ ಸಕ್ಕರ್ ರೋರಿ ಎಂಬ ಎರಡು ಪಟ್ಟಣಗಳ ನಡುವೆ ಸಿಂಧುನದಿಯಲ್ಲಿ ಒಂದು ಚಿಕ್ಕ ದ್ವೀಪ (ನಡುಗಡ್ಡೆ) ಆಗಿದೆ.

(೪) **ಪಾಟೂರ:** ಇದು ಸಿಂಧುನದಿಯ ಪಡುವಣಿಗೆ ೨೦ ಮೈಲು ದೂರದಲ್ಲಿರುವ ಒಂದು ಸಣ್ಣ ಹಳ್ಳಿಯಾಗಿದೆ.

(೫) **ಉಮರಕೋಟೆ**ನ್ನು ಸುಮ್ರಾ ಜಾತಿಯ **ಉಮರ**ನೆಂಬುವನು ಕಟ್ಟಿಸಿದನಂತೆ. ಇದು ಹೇಗೆ ಕಟ್ಟಲ್ಪಟ್ಟಿತೆಂಬುದು ಗೊತ್ತಾಗುವುದಿಲ್ಲ. ಇದು ಈಗ ಸಿಂಧುಪ್ರಾಂತದಲ್ಲಿ ಥರ್‌ಪಾರ್ಕರ್ ಜಿಲ್ಲೆಯಲ್ಲಿ ಇದೇ ಹೆಸರಿನ ತಾಲೂಕಿನ ಮುಖ್ಯ ಪಟ್ಟಣವಾಗಿದೆ. ಇಲ್ಲಿ **ಅಕ್ಬರ**ನು ಹುಟ್ಟಿದೆಡೆಯಲ್ಲಿ ಅವನ ಜನನಸಂಬಂಧವಾದ ಲೇಖನವುಳ್ಳ ಒಂದು ಕಲ್ಲನ್ನು ಹೂಳಿರುತ್ತಾರೆ. **ಉಮರಕೋಟೆ**ಯು ಉತ್ತರ ಅಕ್ಷಾಂಶ ೨೫°--೨೧°, ಪೂರ್ವ ರೇಖಾಂಶ ೬೯°--೪೬° ರಲ್ಲಿ ಇರುತ್ತದೆ.

(೬) **ಶಾಲಿ:** ಇದು ಪಂಜಾಬ್‌ಪ್ರಾಂತದಲ್ಲಿ ಸಿಮ್ಲಾ ಜಿಲ್ಲೆಯಲ್ಲಿ ಒಂದು ಗುಡ್ಡವಾಗಿದೆ. ಇದರ ಮೇಲೆ ಬುನಾದಿಯ (ಪ್ರಾಚೀನ ಕಾಲದ) ಗುಡಿ ಇದೆ.

(೭) **ಕಂದಹಾರ್ :** ಆಫ್ಘಾನಿಸ್ಥಾನದಲ್ಲೆಲ್ಲಾ ದೊಡ್ಡ ಪಟ್ಟಣ. ಜನಸಂಖ್ಯೆ ೩೦,೦೦೦; ಪೂರ್ವದ ರಾಜಧಾನಿ.

(೮) **ಗಜನಿ :** ಕಾಬೂಲಿಗೆ ನೈಋತ್ಯದಲ್ಲಿ ೭೮ ಮೈಲು ದೂರದಲ್ಲಿದೆ; ಬಹಳ ವ್ಯಾಪಾರ ನಡೆಯುವ ಸ್ಥಳ; ಜನಸಂಖ್ಯೆ ೧೦,೦೦೦.

(೯) **ಫಾರಾ :** ಎಂಬುದು ಆಗ್ರಾದ ಹತ್ತಿರವಿದೆ.

(೧೦) **ಕಾಳಾನೂರ್ :** ಪಂಜಾಬ್‌ದೇಶದಲ್ಲಿ ಗುರ್ದಾಸಪುರ ಜಿಲ್ಲೆಯಲ್ಲಿ ಕೊಂಚ ದೊಡ್ಡ ಊರಾಗಿದೆ. ತನ್ನ ತಂದೆಯು ಸತ್ತ ಸುದ್ದಿಯನ್ನು **ಅಕ್ಬರ**ನು ಕೇಳಿದುದು ಇಲ್ಲಿದ್ದಾಗಲೇ.

(೧೧) **ಮಚ್ಚಿವಾರ :** ಪಂಜಾಬ್ ದೇಶದ ಲೂಡಿಯಾನಾ ಜಿಲ್ಲೆಯಲ್ಲಿ ಸಟ್ಲೆಜ್ (ಶತದ್ರು) ನದಿಯ ತೀರದಲ್ಲಿರುವ ಒಂದು ಊರಾಗಿರುತ್ತದೆ. ಇದರ ಹೆಸರು ಮಹಾಭಾರತದಲ್ಲಿಯೂ ಬಂದಿದೆ. ಇಲ್ಲಿ ಎರಡು ಹಳೆಯ ಮಸೀದಿಗಳೂ, ಅನೇಕ ಹಿಂದೂದೇವಾಲಯಗಳೂ, ಸಿಕ್ಕರ ಗುರುದ್ವಾರವೂ ಇವೆ. ಇಲ್ಲಿ ಸಕ್ಕರೆ ತಯಾರಾಗುತ್ತದೆ.

(೧೨) **ಸರಹಿಂದ್ :** ಎಂಬುದು ಈಗ ಯಾವ ರಾಜಕೀಯವಿಭಾಗವಾಗಿಯೂ ಇಲ್ಲ. ಯಮುನಾ-ಸಟ್ಲೆಜ್ ನದಿಗಳ ನಡುವೆ ಅಂಬಾಲಾ, ಲೂಡಿಯಾನಾ, ಫಿರೋಜಪುರ ಜಿಲ್ಲೆಗಳೂ, ಪಾಟಿಯಾಲಾ, ಜಿಂದ್‌ನಾಭಾ ಸಂಸ್ಥಾನಗಳೂ ಇರುವ ಪ್ರದೇಶಕ್ಕೆ ಪೂರ್ವದಲ್ಲಿ ಸರಹಿಂದ್ ಎನ್ನುತ್ತಿದ್ದರು. ಕಾಳಗವಾದ ಸ್ಥಳವು ಈಗ ಸರಿಯಾಗಿ ಗೊತ್ತಾಗುವುದಿಲ್ಲ.

(೧೩) **ರೋಹಿಲ್‌ಖಂಡ :** ವಾಯುವ್ಯಪ್ರಾಂತದಲ್ಲಿ ಒಂದು ಭಾಗವಾಗಿರುತ್ತದೆ. ಇದರ ವಿಸ್ತೀರ್ಣ ೧೯,೯೦೮ ಚದರಮೈಲು, ಜನಸಂಖ್ಯೆ (೧೯೧೧ರಲ್ಲಿ) ೫೫॥ ಲಕ್ಷ. ಈಭಾಗದಲ್ಲಿ ೬ ಜಿಲ್ಲೆಗಳಿರುತ್ತವೆ.

(೧೪) **ಕಾಲ್ಪಿ :** ೨೪ ಪರಗಣೆಗಳ ಜಿಲ್ಲೆಯೊಳಗೆ ಹುಗ್ಲಿನದಿ ದಡದಲ್ಲಿ ಕಲ್ಕತ್ತೆಗೆ ತೆಂಕಣಿಗೆ ೪೮ ಮೈಲು ದೂರದಲ್ಲಿರುವ ಒಂದು ದೊಡ್ಡ ಹಳ್ಳಿಯಾಗಿದೆ.

(೧೫) **ಮೋಹಣಕೋಟೆ :** ವಾಯುವ್ಯಪ್ರಾಂತದಲ್ಲಿರುವ ಡಿಹರಾಡೂನ್ ಜಿಲ್ಲೆಯಲ್ಲಿ ಸಿವಾಲಿಕ್‌ಗುಡ್ಡದ ಸಾಲಿನಲ್ಲಿ ಒಂದು ಭದ್ರವಾದ ಕೋಟೆಯಾಗಿರುತ್ತದೆ.

(೧೬) **ಜಲಂಧರ: ಪಂಜಾಬ್** ದೇಶದಲ್ಲಿ ಇದೇ ಹೆಸರಿನ ಜಿಲ್ಲೆಯ ಮುಖ್ಯಪಟ್ಟಣವಾಗಿದೆ. ಮಹಾಭಾರತಕಾಲದಲ್ಲಿ ಇದನ್ನು **ಸುಶರ್ಮ ಚಂದ್ರ**ನೆಂಬ ಅರಸನು ಆಳುತ್ತಿದ್ದನು.

(೧೭) **ಪಾಣಿಪತ: ಪಂಜಾಬ್** ದೇಶದ ಕರ್ನಾಲಜಿಲ್ಲೆಯಲ್ಲಿ ಒಂದು ತಾಲ್ಲೂಕಾಗಿರುತ್ತದೆ. ಇದರ ನೆರೆಯಲ್ಲಿದ್ದ ವಿಸ್ತಾರವಾದ ರಣ ಭೂಮಿಯು ಪ್ರಾಚೀನಕಾಲದಿಂದ ಹೆಸರಾಗಿರುತ್ತದೆ. ಇಲ್ಲಿಯೇ ಪಾಂಡವ ರಿಗೂ ಕೌರವರಿಗೂ ಭಯಂಕರವಾದ ಯುದ್ಧ ನಡೆದುದು. **ಅಕ್ಬರ**ನ ಅಜ್ಜ ನಾದ **ಬಾಬರ**ನು **ಇಬ್ರಾಹಿಂ ಲೋಡಿ**ಯನ್ನು ಸೋಲಿಸಿದುದು ಇಲ್ಲಿಯೇ (ಮೇ ೧೫೨೬). ಇಲ್ಲಿ ೧೭೬೧ನೆಯ ಜನವರಿ ೭ರಲ್ಲಿ ನಡೆದ ಕಾಳಗದಲ್ಲಿ **ದುರಾಣಿ ಅಹಮುದ್‌ಷಹ**ನು ಮರಾಟೆಯವರ ದಂಡನ್ನು ದಿಕ್ಕುಪಾಲು ಮಾಡಿದನು.

(೧೮) **ಬಿಯಾನ:** ರಾಜಸ್ಥಾನದೊಳಗೆ ಭರತಪುರಸಂಸ್ಥಾನದಲ್ಲಿ **ಆಗ್ರಾ**ಕ್ಕೆ ನೈಋತ್ಯದಲ್ಲಿ ೫೦ ಮೈಲು ದೂರದಲ್ಲಿರುವ ಒಂದು ಪಟ್ಟಣವಾಗಿದೆ. ಇಲ್ಲಿ ಭೀಮಲಾಟವೆಂಬ ಬಹಳ ಎತ್ತರವಾದ ಒಂದು ಕಲ್ಲುಕಂಬವಿದೆ. ಮಹಮ್ಮದೀಯರು ಇದನ್ನು **ಮಕ್ಕಾ**ಕ್ಕೆ ಎರಡನೆಯ ಪುಣ್ಯಸ್ಥಾನವೆಂದು ಎಣಿಸುತ್ತಾರೆ. ಇದರ ಹತ್ತಿರದಲ್ಲಿ **ಬಾಬರ**ನಿಗೂ **ಉದಯಪುರ**ದ **ಸಂಗರಾಣ**ನಿಗೂ ದೊಡ್ಡ ಕಾಳಗವಾಯಿತು (೧೫೨೭).

(೧೯) **ನಾಗೂರು:** ರಾಜಸ್ಥಾನದೊಳಗೆ **ಜೋಧಪುರ**ಸಂಸ್ಥಾನ ದಲ್ಲಿ ನಸೀರಾಬಾದಿಗೆ ಈಶಾನ್ಯದಲ್ಲಿ ೭೫ ಮೈಲು ದೂರದಲ್ಲಿದೆ. **ಅಕ್ಬರ**ನು ೧೫೬೧ರಲ್ಲಿ ಇದನ್ನು ಹಿಡಿದುಕೊಂಡು, **ಬೀಕಾನೀರಿ**ನ ಅರಸನಿಗೆ ಕೊಟ್ಟನು. ಈಗ ಇದು **ಜೋಧಪುರ**ಕ್ಕೆ ಸೇರಿದೆ. ಇಲ್ಲಿ ಒಳ್ಳೆಯ ದನಗಳು ದೊರೆಯುತ್ತವೆ.

(೨೦) **ತಿಲ್ಹಾರ:** ಇದು ವಾಯುವ್ಯಪ್ರಾಂತದ ಷಹಜಹಾನ್‌ಪುರ ಜಿಲ್ಲೆಯಲ್ಲಿ ಒಂದು ಪಟ್ಟಣವಾಗಿದೆ. ಇಲ್ಲಿಯ ಮುಸಲ್ಮಾನರು ೧೮೫೭ರಲ್ಲಿ ನಡೆದ ದಂಗೆಯಲ್ಲಿ ಸೇರಿದ್ದುದರಿಂದ ಅವರ ಆಸ್ತಿಗಳನ್ನು ಸರ್ಕಾರಕ್ಕೆ ಸೇರಿಸಿಕೊಂಡರು.

(೨೧) **ಅಜಮೀರ್ :** ೧೬ನೆಯ ಶತಮಾನದಲ್ಲಿ ಇದ್ದಂತೆ ಸ್ವತಂತ್ರ ಭಾಗವಾಗಿಲ್ಲ. ಈಗ ಇದು ಜಿಲ್ಲೆಯ ಮುಖ್ಯಸ್ಥಾನವಾಗಿರುತ್ತದೆ. ಈ ಜಿಲ್ಲೆಯೂ, ಮೇರವಾಡಜಿಲ್ಲೆಯೂ ಸೇರಿ ಒಂದು ಪ್ರಾಂತವಾಗಿರುತ್ತದೆ. ಇವುಗಳ ಮೇಲಣಧಿಕಾರಿಯಾದ ಕಮೀಷನರು, ವೈಸರಾಯಿಕಡೆಯ ರಾಜಸ್ಥಾನದ ರಾಯಭಾರಿಯ (Political Agent) ಅಧಿಕಾರಕ್ಕೊಳಗಾಗಿ ಇರುತ್ತದೆ. ಈ ಪಟ್ಟಣವನ್ನು ತಾರಾಗಡವೆಂಬ ದಿಣ್ಣೆಯಮೇಲೆ ಅಜರಾಜನು ಕಟ್ಟಿಸಿದನಂತೆ. ೭ನೆಯ ಶತಮಾನದಲ್ಲಿ ಇಲ್ಲಿನ ಅರಸನಾದ ದೋಲರಾಯನು ಸಿಂಧುದೇಶಕ್ಕೆ ನುಗ್ಗಿ, **ಮಹಮದ್‌ಕಾಸಿಮ**ನನ್ನು ಎದುರಿಸಿಮಡಿದನು (ಕ್ರಿ. ಶ. ೬೮೫). ಮುಂದೆ ಇದರ ಅಣನೆಂಬ ಅರಸನು ಕಟ್ಟಿಸಿದ ಅಣಸರೋವರದ ತೀರದಲ್ಲಿ **ಷಹಜಹಾನ**ನು ಒಂದು ಅಂದವಾದ ಅರಮನೆಯನ್ನು ಕಟ್ಟಿಸಿದನು. ಅಣನ ಮೊಮ್ಮಗನಾದ **ಸೋಮಶೇಖರ**ನು ಅಲ್ಲಿಯ ಅರಸನಾದ **ಅನಂಗಪಾಲ**ನ ಮಗಳನ್ನು ಮದುವೆಯಾಗಿ ಮುಂದೆ ಹೆಸರುವಾಸಿಗೆ ಬಂದ **ಪೃಥ್ವೀರಾಜ**ನ ತಂದೆಯಾದನು. **ಪೃಥ್ವೀರಾಜನು ಅಜಮೀರ್, ಡಿಲ್ಲಿ**ಗಳ ಅರಸನಾಗಿದ್ದಾಗ **ಗೋರಿಷಹಬುದ್ದೀನ**ನು ಅವನನ್ನು ಮೋಸದಿಂದ ಕೊಲ್ಲಿಸಿದನು (೧೧೯೩). **ಅಜಮೀರಿ**ನಲ್ಲಿರುವ **ಸೈದ್ ಹುಸೇನ್** ಗೋರಿಯನ್ನು **ಅಕ್ಬರ**ನು ಪುತ್ರಾರ್ಥಿಯಾಗಿ ಬೇಡಿಕೊಂಡು, **ಸಲೀಮ**ನು ಹುಟ್ಟಿದ ಬಳಿಕ ಅಲ್ಲಿಗೆ ನಡೆದುಕೊಂಡೇ ಬಂದನು (೧೫೫೧). ೧೫೫೬ರಲ್ಲಿ ಇದು ಮೊಗಲರ ಕೈಸೇರಿತು. ಇದರ ಸಮೀಪದಲ್ಲಿ **ಔರಂಗಜೀಬ**ನು ತನ್ನ ಅಣ್ಣನಾದ **ದಾರ**ನ ದಂಡನ್ನು ೧೬೫೯ರಲ್ಲಿ ಸೋಲಿಸಿದನು. ಅನಂತರ ಇದನ್ನು ೧೭೨೦ರಲ್ಲಿ ರಜಪೂತರೂ, ೧೭೫೬ರಲ್ಲಿ ಮರಾಟೆಯವರೂ, ೧೮೧೮ರಲ್ಲಿ ಇಂಗ್ಲೀಷರೂ ಹಿಡಿದುಕೊಂಡರು.

(೨೨) **ಗ್ವಾಲಿಯರ್ :** ಈಗ **ಸಿಂಧ್ಯ**ನ ಸಂಸ್ಥಾನವಾಗಿದೆ. ಇಲ್ಲಿನ ಕೋಟೆಯನ್ನು **ಸೂರ್ಯಸೇನ**ನೆಂಬ ಅರಸನು ಕ್ರಿ. ಶ. ೭೭೩ರಲ್ಲಿ ಕಟ್ಟಿಸಿದನಂತೆ. **ಗಜನಿಮಹಮದ**ನು ಇದನ್ನು ೧೦೨೩ರಲ್ಲಿ ಮುತ್ತಿ ಬೇಸತ್ತು ಹೊರಟುಹೋದನು. ಬಳಿಕ **ಗೋರಿಮಹಮದ**ನು ಇದನ್ನು ಹಿಡಿದುಕೊಂಡನು (೧೧೯೬). ತರುವಾಯ ಇದನ್ನು **ನರಸಿಂಹರಾಯ**ನೆಂಬ ಹಿಂದೂ ಸರದಾರನೂ (೧೩೯೮), **ಬಾಬರ**ನೂ (೧೫೨೬),

**ಅಕ್ಬರನೂ** (೧೫೫೬) ತೆಗೆದುಕೊಂಡರು. ಮೊಗಲರ ಘನತೆಯಕಾಲ ದಲ್ಲಿ ಇದು ದೊಡ್ಡಮನುಷ್ಯರ ಸೆರೆಮನೆಯಾಗಿತ್ತು. ಮುಂದೆ ಇದನ್ನು **ಸಿಂಧ್ಯ**ನಿಂದ ಇಂಗ್ಲಿಷರು ತೆಗೆದುಕೊಂಡು (೧೭೮೦), **ಗೋಹದದ ರಾಣ** ನಿಗೆ ಕೊಟ್ಟದ್ದು, ಅನಂತರ ೧೮೦೩ರಲ್ಲಿ ಹಿಡಿದುಕೊಂಡು, ೧೮೦೫ರಲ್ಲಿ ಪುನಃ **ಸಿಂಧ್ಯ**ನಿಗೆ ಕೊಟ್ಟರು.

(೨೩) **ಲಕನೋ**: ವಾಯುವ್ಯಪ್ರಾಂತದಲ್ಲಿ ಇದೇಹೆಸರಿನ ಭಾಗದ ಮುಖ್ಯ ಸ್ಥಳವಾಗಿದೆ. ಮೊದಲು ಇಲ್ಲಿ **ಜನಮೇಜಯರಾಯ**ನು ಬ್ರಾಹ್ಮ ಣರಿಗೆ ಅಗ್ರಹಾರಗಳನ್ನು ಕಟ್ಟಸಿಕೊಟ್ಟನೆಂದು ಪ್ರವಾದ (ದಂತಕಥೆ) ಇದೆ.

(೨೪) **ಕಾಶಿ**: ವಾಯುವ್ಯಪ್ರಾಂತದಲ್ಲಿ ವಾರಣಾಸಿ ಜಿಲ್ಲೆಯ ಮುಖ್ಯ ಪಟ್ಟಣವಾಗಿದೆ. ವಾರಣಾನದಿಯ ದಡದಲ್ಲಿ ಇದ್ದುದರಿಂದ ಈ ಹೆಸರು ಬಂದಿತು. ಜನಸಂಖ್ಯೆ ಸುಮಾರು ಎರಡುಲಕ್ಷದ ಒಂಬತ್ತುಸಾವಿರ. ಪೂರ್ವಕಾಲದಲ್ಲಿ ಇದು ಬೌದ್ಧಮತ, ಸ್ಮಾರ್ತಮತಗಳ ಮುಖ್ಯಸ್ಥಾನವಾ ಗಿತ್ತು. ಇದನ್ನು **ಗೋರಿಮಹಮದ**ನು ೧೧೯೪ರಲ್ಲಿ ಹಿಡಿದುಕೊಂಡನು. ಅಲ್ಲಾವುದೀನನು ಇಲ್ಲಿದ್ದ ೧,೦೦೦ ಹಿಂದೂದೇವಾಲಯಗಳನ್ನು ಕೆಡವಿಸಿ ದನು. ಮುಂದೆ **ಮನ್ಸಾರಾಮ**ನೆಂಬ ಒಬ್ಬ ಗೌತಮಬ್ರಾಹ್ಮಣನು ಮೊ ಗಲರಿಂದ ಈ ಪಟ್ಟಣವನ್ನು ಸಂಪಾದಿಸಿಕೊಂಡನು. ಅವನ ಮೊಮ್ಮಗ ನಾದ **ಚೈತಸಿಂಗ**ನು **ವಾರನ್‌ಹೇಸ್ಟಿಂಗ್ಸ**ನೊಡನೆ ಮಾಡಿದ ಜಗಳವು ಇತಿಹಾಸಪ್ರಸಿದ್ಧವಾಗಿದೆ. ಈಗಲೂ ಅವನ ವಂಶದವನೊಬ್ಬನು **ಕಾಶಿ**ಯ ಮಹಾರಾಜನಾಗಿರುತ್ತಾನೆ.

(೨೫) **ಚೂಣಾರ್**: ವಾಯುವ್ಯಪ್ರಾಂತಕ್ಕೆ ಸೇರಿದ ಮಿರ್ಜಾಪುರ ಜಿಲ್ಲೆಯಲ್ಲಿ ಒಂದು ತಾಲೂಕಿನ ಮುಖ್ಯಸ್ಥಳವಾಗಿದೆ. ಇಲ್ಲಿನ ಕೋಟೆಯು ಹೆಸರಾದುದು. ಇದನ್ನು **ವಿಕ್ರಮಾದಿತ್ಯ**ನ ತಮ್ಮನು ಕಟ್ಟಿಸಿದನಂತೆ. ಇಲ್ಲಿ ಪ್ರತಿವರುಷವೂ ಒಬ್ಬ **ಮುಸಲ್ಮಾನ್** ಸಾಧುವಿನ ಗೋರಿಯ ಉತ್ಸವ ವಾಗುತ್ತದೆ.

(೨೬) **ವಿಜಯಗಡ**: ವಾಯುವ್ಯಪ್ರಾಂತದಲ್ಲಿ ಅಲಿಗರಿನಿಂದ ೧೨ ಮೈಲು ದೂರದಲ್ಲಿರುವ ಒಂದು ಸಾಧಾರಣವಾದ ಗ್ರಾಮವಾಗಿದೆ.

(೨೭) **ಬರ್ಹಾಣಪುರ:** ಮಧ್ಯಪ್ರಾಂತದ ನೀಮಾರಜಿಲ್ಲೆಯಲ್ಲಿ ತಾಪಿಹೊಳೆಯ ದಡದಲ್ಲಿ ಒಂದು ತಾಲೂಕಿನ ಗ್ರಾಮವಾಗಿದೆ. ಇಲ್ಲಿ **ಅಕ್ಬರ**ನು ಕಟ್ಟಿಸಿದ ಲಾಲ್ ಕಿಲ್ಲಾ (ಕೆಂಪು ಕೋಟೆ) ಎಂಬ ಅರಮನೆಯೂ, **ಔರಂಗಜೀಬ**ನು ಕಟ್ಟಿಸಿದ ಜುಮ್ಮಾ ಮಸೀದಿಯೂ ಇವೆ. ಮೊಗಲಸಾಮ್ರಾಜ್ಯದಲ್ಲಿ ಇದು ದಕ್ಷಿಣದೇಶ, ಖಾನದೇಶಗಳ ರಾಜಧಾನಿಯಾಗಿತ್ತು. ಇಲ್ಲಿಯೇ **ನಿಜಾಮುಲ್‌ಮುಲ್ಕ**ನು ತೀರಿಹೋದನು (೧೭೪೮). ಪೂರ್ವಕಾಲದಲ್ಲಿ ಇಲ್ಲಿನ ರೇಷ್ಮೆಯ ವಸ್ತ್ರಗಳೂ, ಮಲ್‌ಮಲ್ ಬಟ್ಟೆಗಳೂ ಜರತಾರಿಯ ಸಾಮಾನುಗಳೂ ಹೆಸರುವಾಸಿಯಾಗಿದ್ದುವು. ಈಚೆಗೆ ಈ ಕಸಬುಗಳು ಕುಗ್ಗಿಹೋದುವು. ಇದನ್ನು ೧೭೬೦ರಲ್ಲಿ ನಿಜಾಮನಿಂದ ಮರಾಟರೂ, ೧೮೦೩ರಲ್ಲಿ ಸಿಂಧ್ಯನಿಂದ ಇಂಗ್ಲೀಷರೂ ಹಿಡಿದುಕೊಂಡರು.

(೨೮) **ರಾವಲ್‌ಪಿಂಡಿ :** ಜಿಲ್ಲೆಯ ಪಂಜಾಬ್‌ಆಧಿಪತ್ಯದಲ್ಲಿ ಉ. ಅಕ್ಷಾಂಶ ೩೩°೩' ಮತ್ತು ೩೪°೪', ಪೂ. ರೇಖಾಂಶ ೭೧°೪೬' ಮತ್ತು ೭೩°೪೧'ರ ಮಧ್ಯದಲ್ಲಿರುತ್ತದೆ. ಪ್ರಸಿದ್ಧನಾದ **ಅಲೆಗ್ಝಾಂಡರ**ನು ಸಿಂಧು ದೇಶದೊಳಕ್ಕೆ ನುಗ್ಗಿದಾಗ ಇಲ್ಲಿ ತಕ್ಷಕರೆಂಬ ಜನರು ವಾಸಮಾಡುತ್ತಿದ್ದರು. ಮುಂದೆ **ಗಜನಿಮುಹಮದ**ನು ಬಂದಾಗ ಗಕ್ಕರು ಇದ್ದರು. ಇದನ್ನು ಮೊಗಲರಿಂದ ಸಿಕ್ಕರೂ (೧೭೬೫), ಅವರಿಂದ ಇಂಗ್ಲೀಷರೂ (೧೮೪೯) ಹಿಡಿದುಕೊಂಡರು.

(೨೯) **ಚೌರಗಡ :** ಎಂಬುದು ಮಧ್ಯದಲ್ಲಿ ನರಸಿಂಗಪುರದ ನೈರುತ್ಯಕ್ಕೆ ೨೨ ಮೈಲು ದೂರದಲ್ಲಿರುವ ಒಂದು ಪಾಳುಕೋಟೆಯಾಗಿದೆ.

(೩೦) **ಹುಸೆಂಗಾಬಾದು :** ಮಧ್ಯಪ್ರಾಂತದಲ್ಲಿ ಇದೇ ಹೆಸರಿನ ಜಿಲ್ಲೆಯ ಮುಖ್ಯಸ್ಥಳವಾಗಿದೆ. ಇದು ಮೊದಲು ದೇವಗಡದ ಗೊಂಡಜಾತಿಯ ಅರಸರ ವಶದಲ್ಲಿತ್ತು. ಇದನ್ನು ಮೊದಲು ಮೊಗಲರೂ, ಭೂಪಾಳದ ಅರಸರೂ (೧೭೨೦), ತರುವಾಯ ನಾಗಪುರದ ಭೌನ್‌ಸ್ಲೆಯೂ (೧೮೦೯), ಕಟ್ಟಕಡೆಗೆ ಇಂಗ್ಲೀಷರೂ (೧೮೧೭) ಹಿಡಿದುಕೊಂಡರು.

(೩೧) **ನರವಾರ:** ಗ್ವಾಲಿಯರ್ ಸಂಸ್ಥಾನದಲ್ಲಿ ಗ್ವಾಲಿಯರಿನ ತೆಂಕಣಿಗೆ ೪೪ ಮೈಲು ದೂರದಲ್ಲಿ, ಸಿಂಧುನದಿಯ ದಡದಲ್ಲಿ ಒಂದು ಪಟ್ಟಣವಾಗಿರುತ್ತದೆ. ಇದಕ್ಕೆ ಮೊದಲು ನಿಷಧವೆಂದು ಹೆಸರಿತ್ತು, ಇಲ್ಲಿ ಒಂದು ಭವ್ಯವಾದ ಕೋಟೆ ಇದೆ.

(೩೨) **ಜಾನ್‌ಪುರ:** ವಾಯುವ್ಯಪ್ರಾಂತದಲ್ಲಿ ಅದೇ ಹೆಸರಿನ ಜಿಲ್ಲೆಯ ಮುಖ್ಯಗ್ರಾಮವಾಗಿದೆ. ಇದು ಮೊದಲು ಅನಾರ್ಯರ ಮುಖ್ಯಸ್ಥಳವಾಗಿತ್ತು.

(೩೩) **ಚಪ್ರಾ :** ಬಂಗಾಳಾ ಆಧಿಪತ್ಯದಲ್ಲಿ ಗೋಗ್ರಾನದೀತೀರದಲ್ಲಿ ಸಾರಾನಾಜಿಲ್ಲೆಯ ಮುಖ್ಯಪಟ್ಟಣ. ೧೮ನೆಯ ಶತಮಾನದಲ್ಲಿ ಇಲ್ಲಿ ಫ್ರೆಂಚ್, ಡಚ್ ಮತ್ತು ಪೋರ್ಚುಗೀಸರ ಅಂಗಡಿಗಳಿದ್ದವು. ಆ ಕಾಲದಲ್ಲಿ ಇಲ್ಲಿಂದ ಸೋರುಪ್ಪು ರಫ್ತಾಗುತ್ತಿತ್ತು.

(೩೪) **ಲಾಹೋರು :** ಪಂಜಾಬ್ ಆಧಿಪತ್ಯದ ರಾಜಧಾನಿಯಾಗಿರುತ್ತದೆ. ಇದನ್ನು ಮೊದಲು **ರಾಮಚಂದ್ರ**ನ ಮಗನಾದ **ಲವ**ನು ಕಟ್ಟಿಸಿದನೆಂದು ದಂತಕಥೆಯುಂಟು. **ಹುಯೆನ್‌ತ್‌ಸಿಯಾಂಗ**ನು ಈ ದೇಶಕ್ಕೆ ಬಂದಿದ್ದಾಗ, ಇಲ್ಲಿ ಬ್ರಾಹ್ಮಣರ ಪ್ರಾಬಲ್ಯವಿತ್ತು. ಮುಂದೆ **ಗಜನಿಮಹಮದ**ನು ಪೇಷಾವರಿನ ಅಜಮೀರದ ಅರಸನಾದ **ಅನಂಗಪಾಲ**ನನ್ನು ಸೋಲಿಸಿ ಲಾಹೋರನ್ನು ಹಿಡಿದುಕೊಂಡನು. ಬಳಿಕ **ಗೋರಿಮಹಮದ**ನು ಡಿಲ್ಲಿಯನ್ನು ರಾಜಧಾನಿಯಾಗಿ ಮಾಡುವವರೆಗೆ (೧೧೯೩), ಇದು ಮುಸಲ್ಮಾನರ ರಾಜಧಾನಿಯಾಗಿತ್ತು. ಮುಂದೆ **ಅಕ್ಬರ**ನ ಆಳಿಕೆಯಲ್ಲಿ ಈ ಪಟ್ಟಣವು ಅಭಿವೃದ್ಧಿಗೆ ಬಂತು. ಮೊಗಲರ **ಬಾದಷಹ**ರು ಇಲ್ಲಿ ಕೆಲಕೆಲವು ದಿವಸವಿರುತ್ತಿದ್ದರು. **ಜಹಂಗೀರ**ನು ಕಟ್ಟಿಸಿದ ಖ್ವಾಬಾಗ್ (ಮಲಗುವ ಮನೆ), ಮೋತೀಮಸೀದಿ, ಶಹದ್ರಾ ಎಂಬ ಗೋರಿ, **ಷಹಾಜಿಹಾನ**ನು ಕಟ್ಟಿಸಿದ ಸಮನ್ಬುರ್ಜ್, ನವಲಾಖ್, ಶಿಷ್‌ಮಹಾಲ್ ಮುಂತಾದ ಕಟ್ಟಡಗಳು ಪ್ರಯಾಣಿಕರ ಮನಸ್ಸನ್ನು ಸೆಳೆಯುತ್ತವೆ. ಮೊಗಲರ ತರುವಾಯ ಇದು **ರಣಜಿತಸಿಂಗ**ನ ರಾಜಧಾನಿಯಾಯಿತು. ಸಿಕ್ಕರ ೨ನೆಯ ಯುದ್ಧವು ಮುಗಿದ ಬಳಿಕ ಇದನ್ನು **ದುಲೀಪ್‌ಸಿಂಗ**ನು ಇಂಗ್ಲೀಷರಿಗೆ ಒಪ್ಪಿಸಿದನು (೨೬ ಮಾರ್ಚ್ ೧೮೪೯). ಲಾಹೋರಿನಲ್ಲಿ ಒಂದು ವಿಶ್ವವಿದ್ಯಾಲಯವೂ, ಬೇರೆ ತರದ ಹಲವು ವಿದ್ಯಾಲಯಗಳೂ ಇರುತ್ತವೆ. ಇದರ ನೆರೆಯಲ್ಲಿರುವ ಕಾಸೂರಲ್ಲಿ ಒಂದು ಔದ್ಯೋಗಿಕಶಾಲೆಯಿರುತ್ತದೆ.

(೩೫) **ರಾಯಬರೇಲಿ:** ವಾಯುವ್ಯಪ್ರಾಂತದಲ್ಲಿ ಇದೇ ಹೆಸರಿನ ಜಿಲ್ಲೆಯ ಮುಖ್ಯ ಸ್ಥಾನವಾಗಿದೆ. ಕಮಿಾಷನರ್ ಅಧಿಕಾರಕ್ಕೆ ಒಳಪಟ್ಟು ಇದೆ. ಇದು ೧೫ನೆಯ ಶತಮಾನದಲ್ಲಿ ಮುಸಲ್ಮಾನರ ಕೈಸೇರಿತು.

(೩೬) **ಮಾಣಿಕಪುರ:** ಅಯೋಧ್ಯಾಪ್ರಾಂತದಲ್ಲಿರುವ ಪ್ರತಾಪಗಡ ಜಿಲ್ಲೆಯಲ್ಲಿ ಗಂಗಾನದಿ ದಡದಲ್ಲಿ ಒಂದು ಹಳ್ಳಿಯಾಗಿದೆ.

(೩೭) **ಪ್ರಯಾಗ:** ಗಂಗಾ-ಯಮುನೆಗಳ ಸಂಗಮದಲ್ಲಿರುತ್ತದೆ. ಇದು ೧೮೫೮ರಿಂದ ವಾಯುವ್ಯಪ್ರಾಂತದ ರಾಜಧಾನಿಯಾಗಿರುತ್ತದೆ. ಮಹಾಭಾರತದಲ್ಲಿ ಇದಕ್ಕೆ ವಾರಣಾವತವೆಂಬ ಹೆಸರು ಕೊಟ್ಟಿದೆ. ರಾಮಾಯಣದ ಕಾಲದಲ್ಲಿ ಇದು ಕೋಸಲರಾಜ್ಯಕ್ಕೆ ಸೇರಿತ್ತು. ಇಲ್ಲಿ **ಅಶೋಕನ** ಒಂದು ಶಿಲಾಲೇಖನವಿದೆ. ೧೧೯೪ರಲ್ಲಿ **ಗೋರಿಷಹಬುದ್ದೀನನು** ಇದನ್ನು ಹಿಡಿದುಕೊಂಡನು. (೧೫೨೯)ರಲ್ಲಿ ಇದು **ಬಾಬರನ** ಕಯ್ಸೇರಿತು. **ಅಕ್ಬರನು** ಇಲ್ಲಿ ಒಂದು ಕೋಟೆಯನ್ನು ಕಟ್ಟಿಸಿ ಇದಕ್ಕೆ ಅಲ್ಲಾಬಾದ್ ಎಂಬ ಹೆಸರನ್ನು ಕೊಟ್ಟನು (೧೫೭೫). ಮೊಗಲರ ರಾಜ್ಯವಳಿದ ಬಳಿಕ, ಇಂಗ್ಲಿಷರು ಇದನ್ನು ೫೦ಲಕ್ಷ ರೂಪಾಯಿಗಳಿಗೆ ಅಯೋಧ್ಯದ ನವಾಬನಿಗೆ ಮಾರಿದರು (೧೭೭೧). ಮುಂದೆ ನವಾಬನು ತಾನು ಕೊಡಬೇಕಾಗಿದ್ದ ಪಗುದಿಗೆ ಬದಲು ಇಂಗ್ಲೀಷರಿಗೆ ಗಂಗಾ-ಯಮುನೆಗಳ ನಡುವಣ ಪ್ರಾಂತಗಳನ್ನು ಕೊಟ್ಟನು (೧೮೦೧). ಅಂದಿನಿಂದ ಇದು ಇಂಗ್ಲೀಷರ ವಶದಲ್ಲಿ ಇದೆ. ಪ್ರಯಾಗದ ಜನಸಂಖ್ಯೆಯು ಒಂದೂ ಮುಕ್ಕಾಲು ಲಕ್ಷವು. ಇಲ್ಲಿ ಒಂದು ದಂಡಿನ ಪಾಳೆಯವಿರುತ್ತದೆ. ಇದು ಪೂರ್ವಕಾಲದಿಂದ ಪವಿತ್ರಸ್ಥಾನವೆಂದು ಹೆಸರಾಗಿದೆ.

(೩೮) **ಚಿತ್ತೂರು:** ಉದಯಪುರಸಂಸ್ಥಾನದಲ್ಲಿ ಒಂದು ಪಟ್ಟಣವಾಗಿದೆ. ಇಲ್ಲಿಯ ಕೋಟೆಯು ಹೆಸರಾದುದು. ಇದು ೭೨೮ರಿಂದ ೧೫೬೮ರ ವರೆಗೆ ಈ ಸಂಸ್ಥಾನದ ರಾಜಧಾನಿಯಾಗಿತ್ತು.

(೩೯) **ರಣತಂಭರ:** ಈಗ ಜಯಪುರಕ್ಕೆ ಸೇರಿದೆ. ಇಲ್ಲಿನ ಕೋಟೆಯು ಒಂದು ದೊಡ್ಡ ಬಂಡೆಯ ಮೇಲೆ ಕಟ್ಟಲ್ಪಟ್ಟಿದೆ. ಇದು ೧೨೯೧ರಲ್ಲಿ **ಜಲಾಲುದೀನ್ ಖಿಲ್ಜಿಯು** ಮುತ್ತಿದಾಗ ಅವನ ವಶವಾಗಲಿಲ್ಲ. ಇದನ್ನು ಮುಂದೆ **ಅಲ್ಲಾವುದೀನನು** ಹಿಡಿದುಕೊಂಡನು. ೧೫೧೬ರಲ್ಲಿ

ಇದು ಮಾಳವಕ್ಕೆ ಸೇರಿತ್ತು. ೧೫೫೩ರಲ್ಲಿ **ಹುಮಾಯೂನನು ಮಹ ಮುದ್‌ಷಹ**ನನ್ನು ದೆಹಲಿಯಿಂದ ಓಡಿಸಿದಾಗ ಬುಂದಿಯ ಅರಸನು ಇದನ್ನು ಹಿಡಿದುಕೊಂಡನು.

(೪೦) **ಫತ್ತೇಪುರಸಿಕ್ರಿ:** ಈಗ ಆಗ್ರಜಿಲ್ಲೆಯ ಒಂದು ಗ್ರಾಮ ವಾಗಿದೆ. **ಅಕ್ಬರ, ಜಹಂಗೀರ**ರು ಕಟ್ಟಿಸಿದ ಎಷ್ಟೋ ಕಟ್ಟಡಗಳೂ, **ಷೇಕ್‌ಸೆಲೀಂಕ್ರಿಸ್ಟಿ**ಯ ದುರ್ಗವೂ, ರಾಣಿವಾಸ, ಹಜಾರಗಳೂ, **ಅಬುಲ್ ಫಾಜಲ್, ಬೀರಬಲ**ರ ಮನೆಗಳೂ ಈಗಲೂ ಕಾಣುತ್ತವೆ. ಇದನ್ನು **ಅಕ್ಬರ**ನು ೧೫೭೦ರಲ್ಲಿ ಕಟ್ಟಿಸಿದನು.

(೪೧) **ದೀಪಾಲಪುರ:** ಪಂಜಾಬ್ ದೇಶದ ಮಾಂಟಗಾಮೆರಿ ಜಿಲ್ಲೆ ಯಲ್ಲಿ ಒಂದು ತಾಲೂಕಿನ ಊರಾಗಿದೆ. ಇದರ ಮೊದಲಿನ ಹೆಸರು ಶ್ರೀಪುರ. ಪಠಾಣರ ಹೆಚ್ಚಳ (ಪ್ರಾಬಲ್ಯ)ದ ಕಾಲದಲ್ಲಿ ಇದು ಪಂಜಾಬಿಗೆ ರಾಜಧಾನಿಯಾಗಿತ್ತು.

(೪೨) **ಅಹಮ್ಮದಾಬಾದ್:** ಮುಂಬಯಿಆಧಿಪತ್ಯದೊಳಗೆ ಒಂದು ಜಿಲ್ಲೆಯ ಪಟ್ಟಣವಾಗಿರುತ್ತದೆ. ಇದು ಮುಂಬಯಿಯ ಬಡಗಣಿಗೆ ೩೧ ಮೈಲು ದೂರದಲ್ಲಿ ಸಾಬರಮತಿಯ ತೀರದಲ್ಲಿದೆ. ಇದರ ಕೋಟೆಯನ್ನು **ಅಹಮ್ಮದ ಷಹ**ನೆಂಬರಸನು ಕಟ್ಟಿಸಿದನು (೧೪೧೩-೧೪೪೩). ಈಚಿಗೆ ಇಂಗ್ಲಿಷರು ಅದನ್ನು ೨೫,೦೦೦ ಪೌಂಡು ವೆಚ್ಚಮಾಡಿ ನೆಟ್ಟಗೆ ಮಾಡಿಸಿದರು (೧೮೩೨). ಇದರ ಘನತೆಯ ಕಾಲದಲ್ಲಿ ಇಲ್ಲಿ ೯,೦೦,೦೦೦ ಜನರಿದ್ದರು. ಈಗ (೧೯೧೧) ಇದರ ಜನಸಂಖ್ಯೆಯು ಒಂದೂವರೆ ಲಕ್ಷ. ಇದು ೧೫೭೩ರಿಂದ ೧೭೩೮ರ ವರೆಗೆ ಮೊಗಲರ ವಶದಲ್ಲಿತ್ತು. ಮುಂದೆ **ದಾಮಾಜಿಗಾಯಕ ವಾಡ**ನು ಇದನ್ನು ಹಿಡಿದುಕೊಂಡನು. ಬಳಿಕ ೧೭೫೭ರಿಂದ ೧೮೧೮ರ ವರೆಗೆ ಇದು ಪೇಷ್ವೆಯ ಕೈಯಲ್ಲಿತ್ತು. ಮೊದಲು ರೇಷಿಮೆ ವಸ್ತ್ರಗಳಿಗೂ, ನೂಲಿನ ಬಟ್ಟೆಗಳಿಗೂ, ಜರತಾರಿಯ ಬಟ್ಟೆಗಳಿಗೂ ಇದು ಬಹಳ ಹೆಸರಾ ಗಿತ್ತು. ಆದರೆ ವಿಲಾಯಿತಿಯಿಂದ ಅರಿವೆಗಳು ಬರಲು ಪ್ರಾರಂಭವಾದಂದಿ ನಿಂದ ಈ ಊರಿನ ವ್ಯಾಪಾರವು ಕಳೆಗುಂದುತ್ತ ಬಂದಿದೆ. ಅಂಗಡಿಕಾರರು ಬಳಸುವ ಕರಡೆ (ಕೋರಿ) ಕಾಗದಗಳು ಇಲ್ಲಿ ಆಗುತ್ತವೆ.

(೪೩) **ಭಡೋಚ್:** ಮುಂಬಯಿ ಆಧಿಪತ್ಯದಲ್ಲಿ ಇದೇ ಹೆಸರಿನ ಜಿಲ್ಲೆಯ ಮುಖ್ಯ ಗ್ರಾಮವಾಗಿರುತ್ತದೆ. ಬಹಳ ಹಿಂದಿನ ಕಾಲದಲ್ಲಿ ಇದಕ್ಕೆ ಭರುಕಚ್ಛವೆಂದು ಹೆಸರಿತ್ತು. ಇಲ್ಲಿ ಇಂಗ್ಲೀಷರು ೧೬೧೬ರಲ್ಲಿ ಒಂದು ಅಂಗಡಿಯನ್ನಿಟ್ಟರು. ಇದನ್ನು ಅವರು ೧೭೭೨ರಲ್ಲಿ ಭರೋಚಿನ ನವಾಬನಿಂದ ತೆಗೆದುಕೊಂಡು ೧೭೮೨ರಲ್ಲಿ ನಡೆದ ಸಾಲ್ಬಾಯಿಯ ಒಪ್ಪಂದದ ಮೇರೆಗೆ ಮರಾಟಿಯವರಿಗೆ ಕೊಟ್ಟರು. ಮುಂದೆ ವಸಯಿ ಒಪ್ಪಂದದಿಂದ ಇದು ಅವರಿಗೆ ತಿರುಗಿ ಬಂತು.

(೪೪) **ಬರೋಡೆ:** ಇದು **ಗಾಯಕವಾಡ**ನ ರಾಜಧಾನಿಯಾಗಿರುತ್ತದೆ. ಈ ಸಂಸ್ಥಾನದಲ್ಲಿ ೪ ಭಾಗಗಳಿರುತ್ತವೆ:—ಕಾಡಿ ಅಥವಾ ಉತ್ತರ ಭಾಗ, ೨ ಬಡೋದೆ ಅಥವಾ ಮಧ್ಯಭಾಗ, ೩ ನವಸರಿ ಅಥವಾ ದಕ್ಷಿಣ ಭಾಗ, ೪ ಅಮರೇಲಿಯ ಭಾಗ. ಈ ಕಡೆಯಭಾಗವು ಕಾಟೇವಾಡದಲ್ಲಿರುತ್ತದೆ. ಈ ರಾಜ್ಯದ ಒಟ್ಟು ವಿಸ್ತೀರ್ಣವು ೮೦೯೯ ಚ. ಮೈಲು. ಜನಸಂಖ್ಯೆಯು ೨,೧೮,೫೦೦. ನವಸರಿಯು ಪಾರ್ಶಿಜನರ ಅಗ್ರಹಾರವಾಗಿರುತ್ತದೆ.

(೪೫) **ಸೂರತ್:** ಮುಂಬಯಿಆಧಿಪತ್ಯದಲ್ಲಿ ಇದೇ ಹೆಸರಿನ ಜಿಲ್ಲೆಯ ಮುಖ್ಯಪಟ್ಟಣವು. ಇದು ಪುರಾತನ ಕಾಲದಿಂದ ವ್ಯಾಪಾರಕ್ಕೆ ಹೆಸರುವಾಸಿಯಾಗಿದೆ. ಇದು ದೊಡ್ಡ ವ್ಯಾಪಾರದ ಸ್ಥಳವೆಂದು ಗ್ರೀಕರಿಗೆ ಕ್ರಿ. ಪೂ. ೧೫೦ರಲ್ಲಿಯೇ ಗೊತ್ತಾಗಿತ್ತು. ಇದು ೧೫೭೨ರಿಂದ ೧೭೩೩ರವರೆಗೆ ಮೊಗಲರ ವಶದಲ್ಲಿತ್ತು. ಮುಂದೆ ೧೭೫೯ರಲ್ಲಿ ಇದನ್ನು ಇಂಗ್ಲೀಷರು ಹಿಡಿದುಕೊಂಡರು. ೧೬೧೨ರಲ್ಲಿ ಇಂಗ್ಲೀಷರು ಮೊದಲು ಇಲ್ಲಿ ಒಂದು ಅಂಗಡಿಯನ್ನು ಇಟ್ಟರು. ೧೬೮೭ರಲ್ಲಿ ಮುಂಬಯಿಯು ಇಂಗ್ಲೀಷರ ಮುಖ್ಯ ವ್ಯಾಪಾರದ ಸ್ಥಳವಾಯಿತು.

(೪೬) **ಖಂಬಾಯತ್:** ಇದೇ ಹೆಸರಿನ ಸಂಸ್ಥಾನದ ರಾಜಧಾನಿ. ಅಹಮುದಾಬಾದಿಗೆ ತೆಂಕಣಿಗೆ ೫೨ ಮೈಲು ದೂರದಲ್ಲಿದೆ. ಇಲ್ಲಿರುವ ೧೩೨೫ರಲ್ಲಿ ಕಟ್ಟದ ಜುಮ್ಮಾಮಸೀದಿಕಟ್ಟಡವು ನೋಡತಕ್ಕದ್ದಾಗಿದೆ. ಮೊದಲು ವ್ಯಾಪಾರಕ್ಕೆ ಪ್ರಸಿದ್ಧವಾಗಿತ್ತು. ಈಗ ಹರಳುಕಲ್ಲುಗಳ ಸಾಮಾನುಗಳು ತಯಾರಾಗುತ್ತವೆ.

(೪೭) **ಸರ್ನಾಳ:** ಮುಂಬಯಿಆಧಿಪತ್ಯದಲ್ಲಿ ಕೈರಾ ಜಿಲ್ಲೆಗೆ ಸೇರಿದ ಆನಂದತಾಲೂಕಿನ ಒಂದು ಪಟ್ಟಣ. ಇಲ್ಲಿ ಹತ್ತಿ ಹೆಚ್ಚಾಗಿ ಬೆಳೆಯುತ್ತದೆ.

(೪೮) **ಕಾಂಗ್ರಾ:** ಪಂಜಾಬ್‌ದೇಶದ ಇದೇ ಹೆಸರಿನ ಜಿಲ್ಲೆಯ ಒಂದು ಊರು. ಪೂರ್ವದ ಹೆಸರು ನಾಗರಕೋಟೆ. ಇದರ ಕೋಟೆಯು ಬಾಣಗಂಗಾತೀರದಲ್ಲಿದೆ. ೧೦೦೯ರಲ್ಲಿ **ಘಜನಿ ಮಹಮುದ**ನೂ, ೧೩೬೦ ರಲ್ಲಿ **ತೊಗಲಕ್ ಫಿರೋಜಷಹ**ನೂ ಇಲ್ಲಿನ ದೇವಿಯ ಗುಡಿಯನ್ನು ಲೂಟಮಾಡಿ ವಿಗ್ರಹವನ್ನು ಎತ್ತಿಕೊಂಡು ಹೋದರು. ಈ ಕೋಟೆಯು ೧೫೭೭ರಲ್ಲಿ **ಅಕ್ಬರ**ನ ಕೈಸೇರಿತು. ೧೮೨೮ರಿಂದ ೧೮೪೫ರ ವರೆಗೆ ಸಿಕ್ಕರ ವಶದಲ್ಲಿತ್ತು. ಇಲ್ಲಿ ಬೆಳೆಯುವ ಚಾಸೊಪ್ಪು ಬಹಳ ಉತ್ಕೃಷ್ಟವಾದುದು.

(೪೯) **ಪಾಟ್ಣಾ:** ಬಂಗಾಳಾಆಧಿಪತ್ಯದಲ್ಲಿ ಇದೇ ಹೆಸರಿನ ಜಿಲ್ಲೆಯ ಮುಖ್ಯಪಟ್ಟಣ. ಇದನ್ನು ಉದಯಾಶ್ವನೆಂಬ ಅರಸನು ಕಟ್ಟಿಸಿದನೆಂದು ವಾಯುಪುರಾಣದಲ್ಲಿ ಹೇಳಿದೆ. ಪೂರ್ವದಿಂದಲೂ ಇದು ಪಾಟಲಿಪುತ್ರ ವೆಂದು ಪ್ರಸಿದ್ಧವಾಗಿತ್ತು. **ಶೇರಷಹ**ನ ವಂಶದವರಿಗೆ ಇದು ರಾಜಧಾನಿ ಯಾಗಿತ್ತು. **ಅಕ್ಬರ**ನ ಕೈಸೇರಿದನಂತರ ಇದರ ಮಹತ್ತ್ವವು ಕಡಿಮೆ ಯಾಯಿತು. ಗಂಗಾ, ಗಂಡಕ, ಶೋಣನದಿಗಳ ಕೂಡಲಿನಲ್ಲಿ (ಸಂಗಮ ದಲ್ಲಿ) ಇರುವುದರಿಂದ ವ್ಯಾಪಾರಕ್ಕೆ ಬಹಳ ಅನುಕೂಲವಾಗಿದೆ.

(೫೦) **ಮಹಮುದಾಬಾದ್:** ಅಯೋಧ್ಯಾ ಪ್ರಾಂತದ ಸೀತಾಪುರ ಜಿಲ್ಲೆಯಲ್ಲಿ ಒಂದು ತಾಲೂಕಿನ ಊರಾಗಿದೆ.

(೫೧) **ಚೌಸಾ:** ಬಂಗಾಳಾಆಧಿಪತ್ಯದಲ್ಲಿ ಷಹಬಾದ್ ಜಿಲ್ಲೆಗೆ ಸೇರಿದ ಒಂದು ಹಳ್ಳಿಯಾಗಿದೆ. ಬಕ್ಸಾರಿಗೆ ಪಡುವಲಲ್ಲಿ ೪ ಮೈಲು ದೂರದಲ್ಲಿ ಕರ್ಮನಾಸಾನದಿಯ ದಡದಲ್ಲಿ ಇದೆ. **ಶೇರ್‌ಷಹ**ನು **ಹುಮಾಯೂನ**ನನ್ನು ಇಲ್ಲಿ ಸೋಲಿಸಿದನು (ಜೂನ್ ೧೫೩೯). ಈ ಕಾಳಗದಲ್ಲಿ ೮೦೦೦ ಮೊಗಲ ಸೈನ್ಯವು ಮಡಿಯಿತು. ಗಂಗೆಯನ್ನು ದಾಟ ಹೋಗಬೇಕಾದರೆ **ಹುಮಾಯೂನ**ನಿಗೆ ಸಾಕುಸಾಕಾಯಿತು.

(೫೨) **ಹಾಜಿಪುರ:** ಬಂಗಾಳಾಆಧಿಪತ್ಯದಲ್ಲಿ ಮುಜಾಫರಪುರ ಜಿಲ್ಲೆಯ ಒಂದು ತಾಲೂಕಿನ ಊರು. **ಅಕ್ಬರ**ನು ಇದನ್ನು ಎರಡು ಸಲ ಹಿಡಿದುಕೊಂಡನು (೧೫೭೨ ಮತ್ತು ೧೫೭೪).

(೫೩) **ದರ್ಯಾಪುರ :** ವರಾಡಪ್ರಾಂತದ ಎಲಿಚಪುರ್ ಜಿಲ್ಲೆಯ ಒಂದು ಗ್ರಾಮವಾಗಿರುತ್ತದೆ.

(೫೪) **ಕಾನ್‌ಪುರ :** ವಾಯುವ್ಯಪ್ರಾಂತದಲ್ಲಿ ಇದೇ ಹೆಸರಿನ ಜಿಲ್ಲೆಯ ಮುಖ್ಯ ಪಟ್ಟಣ. ಇದು ಗಂಗಾತೀರದಲ್ಲಿ ಇರುತ್ತದೆ. ಮೊದಲು ಒಂದು ಸಣ್ಣ ಹಳ್ಳಿಯಾಗಿದ್ದು ಇಂಗ್ಲೀಷರು ತಮ್ಮ ಸೈನ್ಯವನ್ನು ಇಲ್ಲಿ ಇಟ್ಟಾಗಿನಿಂದ (೧೭೭೮) ಇದು ದೊಡ್ಡ ಪಟ್ಟಣವಾಯಿತು. ೧೮೫೭ರಲ್ಲಿ ನಡೆದ **ನಾನಾರಾಯ**ನ ದಂಗೆಯೂ, ಮೋಸದಿಂದ ೧,೦೦೦ ಮಂದಿ ಇಂಗ್ಲೀಷರನ್ನು ಇಲ್ಲಿ **ನಾನಾರಾಯ**ನು ಕೊಲ್ಲಿಸಿದುದೂ ಇತಿಹಾಸಪ್ರಸಿದ್ಧ ವಿಷಯಗಳಾಗಿವೆ.

(೫೫) **ಮೂಂಗೀರ್ :** ಬಂಗಾಳಾಆಧಿಪತ್ಯದಲ್ಲಿ ಇದೇ ಹೆಸರಿನ ಜಿಲ್ಲೆಯ ಮುಖ್ಯ ಸ್ಥಳವು. ಇದು ಗಂಗಾತೀರದಲ್ಲಿರುತ್ತದೆ. ಇಲ್ಲಿ ವಿಶೇಷ ವಾಗಿ ಕಬ್ಬಿಣದ ಸಾಮಾನುಗಳು ತಯಾರಾಗುವುವು. ಪೂರ್ವದಲ್ಲಿ ಇದು ಇಂಡಿಯಾದೇಶದ ಬರ್ಮಿಂಘಾಂ ಆಗಿತ್ತು. ಇಲ್ಲಿಯ ಜನರು ಖರಗ್‌ಪುರ ವೆಂಬಲ್ಲಿಂದ ಕಬ್ಬಿಣದ ಅದರುಗಳನ್ನು ತಂದು ಕರಗಿಸಿ ಬಗೆಬಗೆಯ ಸಾಮಾನುಗಳನ್ನು ಮಾಡುತ್ತಾರೆ. **ಅಕ್ಬರ**ನ ಮಗ **ಷಹಷೂಜ**ನು ಇದ್ದ ಅರಮನೆಯು ಈಗ ಸೆರೆಮನೆಯಾಗಿದೆ.

(೫೬) **ಭಾಗಲ್ಪುರ :** ಬಂಗಾಳಆಧಿಪತ್ಯದಲ್ಲಿ ಇದೇ ಹೆಸರಿನ ಜಿಲ್ಲೆಯ ಮುಖ್ಯ ಪಟ್ಟಣವು. ಇದು ಗಂಗಾನದಿಯ ಮೇಲಿರುತ್ತದೆ. ಈ ಜಿಲ್ಲೆಯೊಳಗೆ ಮಂದರಗಿರಿಯೆಂಬ ಪರ್ವತದ ೭೦೦ ಅಡಿ ಎತ್ತರವಾದು ದೊಂದು ಬಂಡೆಗಲ್ಲಿನ ಮೇಲೆ ವಿಷ್ಣುವಿನ ಪಾದುಕೆಗಳಿರುತ್ತವೆ. ಇಲ್ಲಿ ಜೈನರದೊಂದು ಹಳೆಯ ಗುಡಿಯೂ, ಕೆಲವು ಮಸೀದಿಗಳೂ ಇರುತ್ತವೆ. ಇಲ್ಲಿ ಪ್ರತಿಯೊಂದು ಹಳ್ಳಿಯವರೂ ರಾಕ್ಷಸನನ್ನು ಪೂಜಿಸುತ್ತಾರೆ. ಇಲ್ಲಿ ನೀಲಿಯೂ ರೇಷಿಮೆಯ ಬಟ್ಟೆಗಳೂ ಆಗುತ್ತವೆ.

(೫೭) **ಗೌರ್ :** ಬಂಗಾಳಆಧಿಪತ್ಯದಲ್ಲಿ ಮಾಲ್ಡಾಜಿಲ್ಲೆಯಲ್ಲಿ ಒಂದು ಊರಾಗಿ ಇರುತ್ತದೆ. ಪೂರ್ವಕಾಲದಲ್ಲಿ ಇದು ಹಿಂದೂ ಅರಸರ ರಾಜಧಾನಿಯಾಗಿತ್ತು. ಇದರ ಮೊದಲಿನ ಹೆಸರು ಲಕ್ಷಣಾವತೀ. ವಿಸ್ತೀರ್ಣವು ಸುಮಾರು ೧೪ ಚ. ಮೈ. ಆಫಗಾನ ಅರಸರು ಇದನ್ನು

ಬಿಟ್ಟು ಪಾಂಡುವಾ ಎಂಬಲ್ಲಿ ತಮ್ಮ ರಾಜಧಾನಿಯನ್ನು ಮಾಡಿಕೊಂಡಿದ್ದರು. ಈಗಲೂ ಇದರ ಮೊದಲಿನ ವೈಭವದ ಕುರುಹುಗಳು ಅಂದರೆ—ಪೂರ್ವ ಕಾಲದಲ್ಲಿದ್ದ ದೇವಸ್ಥಾನ, ಕೆರೆಕಟ್ಟೆ, ಕಾಲುವೆಗಳು, ಬೀದಿಗಳು, ಕಟ್ಟಡ ಗಳು ಇವುಗಳ ಪಾಳುಗಳು ಕಾಣುತ್ತವೆ.

(೫೮) **ನರ್ನಾಲ್:** ಇದು ವರಹಾಡ ಪ್ರಾಂತದ ಅಕೋಲಜಿಲ್ಲೆ ಯಲ್ಲಿ ಭದ್ರವಾದ ಕೋಟೆಯನ್ನು ಹೊಂದಿರುವ ಒಂದು ಗ್ರಾಮ.

(೫೯) **ಹಳದಿಗಟ್ಟ:** ಉದಯಪುರಸಂಸ್ಥಾನದಲ್ಲಿ ಗೋಗುಂದ ಪ್ರಾಂತದಲ್ಲಿರುತ್ತದೆ.

(೬೦) **ಅಟಕ್:** ಪಂಜಾಬ್ಆಧಿಪತ್ಯದಲ್ಲಿ ರಾವಲ್‌ಪಿಂಡಿಜಿಲ್ಲೆ ಯ ಒಂದು ತಾಲೂಕಿನ ಊರು. ಸಿಂಧೂನದಿಯ ದಡದಲ್ಲಿದೆ.

(೬೧) **ಅಸೀರ್ಗಡ:** ಮಧ್ಯಪ್ರಾಂತದಲ್ಲಿ ನೀಮಾರ್‌ಜಿಲ್ಲೆಯಲ್ಲಿ ಒಂದು ಕೋಟೆಯುಳ್ಳ ಗ್ರಾಮವಾಗಿರುತ್ತದೆ. ಇದನ್ನು **ಅಸಾಹೀರ**ನೆಂಬು ವನು ೧೩೭೦ರಲ್ಲಿ ಕಟ್ಟಿಸಿದನಂತೆ. **ಅಕ್ಬರ**ನು ಹಿಡಿದುಕೊಳ್ಳುವವರೆಗೆ ಇದು ಖಾನ್‌ದೇಶದ ಅರಸರ ವಶದಲ್ಲಿತ್ತು. ೧೮೧೯ರಿಂದ ಇದು ಇಂಗ್ಲೀ ಷರ ಅಧೀನದಲ್ಲಿದೆ. ಇಲ್ಲಿ **ಔರಂಗಜೀಬಬಾದಷಹ**ನು ಮಾಡಿಸಿದ ದೊಡ್ಡ ದೊಡ್ಡ ತೋಫುಗಳಿರುತ್ತವೆ.

(೬೨) **ಶ್ರೀನಗರ:** ಕಾಶ್ಮೀರಕ್ಕೆ ರಾಜಧಾನಿಯಾದ ಈ ಪಟ್ಟಣವು ಜೀಲಂ ಹೊಳೆಯ ದಡದಲ್ಲಿದೆ. ಜನಸಂಖ್ಯೆ ೧,೨೨,೦೦೦. ಇಲ್ಲಿನ ಹರಿ ಪರ್ವತವೆಂಬ ಕೋಟೆಯನ್ನು **ಅಕ್ಬರ**ನು ಕಟ್ಟಿಸಿದನು (೧೫೯೦). ಈ ಊರ ಸುತ್ತಲೂ ರಮಣೀಯವಾದ ತೋಟಗಳಿವೆ.

(೬೩) **ದೌಲತ್ತಾಬಾದ್:** ಮುಂಬಯಿಯ ಈಶಾನ್ಯಕ್ಕೆ ೧೭೦ ಮೈಲು ದೂರದಲ್ಲಿ **ನಿಜಾಮ**ನ ರಾಜ್ಯದಲ್ಲಿರುವ ಒಂದು ಪಟ್ಟಣವಾಗಿರುತ್ತದೆ. ಇದರ ಜನಸಂಖ್ಯೆಯು (೧೯೧೧) ಸುಮಾರು ೧೦೦೦. ಇದರ ಕೋಟೆಯು ಸುತ್ತಳತೆಯು ೨॥ ಮೈಲು. ಈ ಕೋಟೆಯ ನೆರೆಯಲ್ಲಿದ್ದ ಚೀನಿಮಹಲಿನಲ್ಲಿ **ಔರಂಗಜೀ**ಬನು ಗೋವಳಕೊಂಡದ ಕಡೆಯ ಅರಸನನ್ನು ಸೆರೆಯಿಟ್ಟಿ ದ್ದನು. ಈ ಪಟ್ಟಣದ ಮೊದಲಿನ ಹೆಸರು ದೇವಗಿರಿ. **ಖಿಲ್ಜಿ ಅಲ್ಲಾವುದ್ದೀ**ನನು ಇಲ್ಲಿನ ಅರಸನಾದ **ರಾಮಚಂದ್ರರಾಜ**ನನ್ನು ಸೋಲಿಸಿ ಇದನ್ನು

ಹಿಡಿದುಕೊಂಡನು (೧೨೯೪). ಮುಂದೆ **ತಗಲಖ್ ಮಹಮ್ಮದ**ನು ಇದಕ್ಕೆ ದೌಲತ್ತಾಬಾದ್ ಎಂಬ ಹೆಸರನ್ನು ಕೊಟ್ಟು, ಇದನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡನು (೧೩೩೮). ಬಳಿಕ ಇದು ಬಹಮನೀ ರಾಜ್ಯಕ್ಕೆ ಸೇರಿತು. ಇದನ್ನು **ಅಕ್ಬರಬಾದಷಹ**ನು **ನಿಜಾಮುಷಾಹಿ**ಯಿಂದ ತೆಗೆದುಕೊಂಡಂದಿನಿಂದ **ಔರಂಗಜೇಬ**ನು ಸಾಯುವವರೆಗೆ ಇದು ಮೊಗಲರ ಸಾಮ್ರಾಜ್ಯಕ್ಕೆ ಸೇರಿತ್ತು. ೧೭೦೮ರಲ್ಲಿ **ನಿಜಾಮ**ನ ಮೂಲ ಪುರುಷನಾದ **ಅಸಫ್‌ಜಹ**ನು ಇದನ್ನು ಹಿಡಿದುಕೊಂಡನು. ಮೊದಲು ಇಲ್ಲಿ ಹೆಸರುವಾಸಿಯಾಗಿದ್ದ ತೋಟಗಳಲ್ಲಿ ಒಂದಾದರೂ ಈಗ ಕಾಣುವದಿಲ್ಲ.

(೬೪) **ಇಟಾವ:** ವಾಯುವ್ಯಪ್ರಾಂತ್ಯದಲ್ಲಿ ಇದೇ ಹೆಸರಿನ ಜಿಲ್ಲೆಯ ಮುಖ್ಯನಗರ. ಯಮುನಾತೀರದಲ್ಲಿ ಇದೇ ೧೬ನೆಯ ಶತಮಾನದ ಆರಂಭದಲ್ಲಿ **ಬಾಬರ**ನು ಇದನ್ನು ಹಿಡಿದುಕೊಂಡನು. ಮುಂದೆ ಅಯೋಧ್ಯೆಯ ನವಾಬನು ಇದನ್ನು ಇಂಗ್ಲೀಷರಿಗೆ ಕೊಟ್ಟನು (೧೮೦೧). ಇಲ್ಲಿ ೧೮೬೧ ವರೆಗೆ ಇಂಗ್ಲೀಷರು ದಂಡನ್ನು ಇಟ್ಟದ್ದರು. ಇಲ್ಲಿ ಎಣ್ಣೆಯ ಬುದ್ದಲಿಗಳೂ, ಕೊಂಬಿನ ಬಾಚಣಿಗೆಗಳೂ ತಯಾರಾಗುತ್ತವೆ. ಇಲ್ಲಿಂದ ತುಪ್ಪ, ಕಡಲೆ, ಹತ್ತಿ, ಕುಸುಬೆ ಮೊದಲಾದುವು ರಫ್ತಾಗುತ್ತವೆ.

(೬೫) **ಅರ್ಚಾ:** ಬಂಡಲಖಂಡದ ತೇಹರಿ ಅಥವಾ ತೆಕಮ್‌ಗಡ ಸಂಸ್ಥಾನದ ಪೂರ್ವರಾಜಧಾನಿ. ಇದರ ಅರಸನು ರಜಪೂತನು. ೧೮೫೭ರ ದಂಗೆಯಲ್ಲಿ ಇದರ ಅರಸನು ಇಂಗ್ಲೀಷರಿಗೆ ನೆರವಾದುದರಿಂದ ಇವನು ಪ್ರತಿವರ್ಷವೂ ಕೊಡುತ್ತಿದ್ದ ೩೦೦ ಪೌಂಡುಗಳ ಪೊಗದಿಯನ್ನು ಮಹಾರಾಣಿಯವರು ಬಿಟ್ಟುಕೊಟ್ಟದ್ದಲ್ಲದೆ ೧೮೮೨ರಲ್ಲಿ ಈ ಅರಸನಿಗೆ ಸವಾಯಿ ಮಹಾರಾಜನೆಂದು ಬಿರುದು ಕೊಟ್ಟರು.

(೬೬) **ಜಾಲ್ನಾ: ನಿಜಾಮ**ನ ರಾಜ್ಯದಲ್ಲಿ ಔರಂಗಾಬಾದ್ ಜಿಲ್ಲೆಯಲ್ಲಿ ಒಂದು ಪಟ್ಟಣವಾಗಿದೆ. ಇಲ್ಲಿ ಇಂಗ್ಲೀಷರ ಸೈನ್ಯವಿದೆ. ಪೂರ್ವದ ಹೆಸರು ಜನಕಪುರ. ನೂಲಿನ ಬಟ್ಟೆಗಳೂ, ಜರತಾರಿಯೂ (ಜರವೂ) ತಯಾರಾಗುವುವು. ಹಣ್ಣು ಹಂಪಲುಗಳು ಮುಂಬಾಯಿ ಮೊದಲಾದ ಸ್ಥಳಗಳಿಗೆ ರಫ್ತಾಗುತ್ತವೆ.

(೬೭) **ಸಿಕ್ರಿ:** ೪೦ನೆಯ ಫತ್ತೇಪುರಸಿಕ್ರಿಯ ಟಿಪ್ಪಣವನ್ನು ನೋಡಿರಿ.

(೬೮) **ಚಾಂದೇರಿ:** ಗ್ವಾಲಿಯರ್ ಸಂಸ್ಥಾನದಲ್ಲಿ ಒಂದು ಜಿಲ್ಲೆಯ ಮುಖ್ಯಪಟ್ಟಣವಾಗಿದೆ. ೧೭ನೆಯ ಶತಮಾನದಲ್ಲಿ ೧೪,೦೦೦ ಕಲ್ಲುಮನೆಗಳೂ, ೩೮೪ ಪೇಟೆಗಳೂ, ೩೬೦ ಧರ್ಮಶಾಲೆಗಳೂ, ೧೨,೦೦೦ ಮಸೀದಿಗಳೂ ಇದ್ದುವು. ಇದರ ಕೋಟೆಯು ಪೂರ್ವದಿಂದಲೂ ಹೆಸರಾಗಿತ್ತು. ಗುಮಟ, ಕಕಾಲಿ ಎಂಬ ಇದರ ಹೆಬ್ಬಾಗಿಲುಗಳನ್ನು **ಗಯೂಸುದೀನ್ ತೊಗಲಖನು** ಕಟ್ಟಿಸಿದನು (೧೩೦೧). ಈ ಜಿಲ್ಲೆಯನ್ನು ಸಿಂಧ್ಯನು ದಂಡಿನ ವೆಚ್ಚಕ್ಕಾಗಿ ಇಂಗ್ಲೀಷರಿಗೆ ಕೊಟ್ಟನು.

(೬೯) **ಜೋಧಪುರ** ಅಥವಾ **ಮಾರವಾಡ:** ರಾಜಸ್ಥಾನದಲ್ಲಿ ಒಂದು ಸಂಸ್ಥಾನವಾಗಿದೆ. ವಿಸ್ತೀರ್ಣ ೩೬,೦೦೦ ಚದರ ಮೈಲು. ಜನಸಂಖ್ಯೆ—(೧೯೧೧) ೨೫ ಲಕ್ಷ. ಇದರ ಅರಸನು ಇಂಗ್ಲಿಷರಿಗೆ ಸುಮಾರು ೧ ಲಕ್ಷ ರೂಪಾಯಿ ಪೊಗದಿಕೊಡುತ್ತಾನೆ. ಈ ಅರಸೇ ಹಣಕ್ಕೆ ಬದಲಾಗಿ ಇಂಗ್ಲೀಷರಿಗೆ ಉಮರಕೋಟವನ್ನು ಕೊಟ್ಟನು.

(೭೦) **ಮಾಲ್ಕೋಟೆ**: ಜೋಧಪುರಕ್ಕೆ ಈಶಾನ್ಯದಲ್ಲಿ ೭೬ ಮೈಲು ದೂರದಲ್ಲಿ ಇದೆ. ಇಲ್ಲಿ ಜೋಧಪುರದ ಅರಸನಾದ **ವಿಜಯಸಿಂಹನನ್ನು ಸಿಂಧ್ಯನು** ಸೋಲಿಸಿ ಅಜಮೀರನ್ನು ತೆಗೆದುಕೊಂಡನು (೧೭೫೪). ಇದರ ಸಮೀಪದಲ್ಲಿ ಹಿಂದಿನ ಕಾಳಗಗಳ ಸೂಚಕವಾದ ಎಷ್ಟೋ ಕಲ್ಲುಕಂಬಗಳಿರುತ್ತವೆ.

(೭೧) **ನಾಗೋರು:** ಜೋಧಪುರಸಂಸ್ಥಾನದಲ್ಲಿ ಒಂದು ಗ್ರಾಮವಾಗಿದೆ. ಮೊದಲು ಇದು ಪಡುಮೂಲೆಯ ಸ್ಥಾನವಾಗಿತ್ತು.

(೭೨) **ಬಿಕಾನೀರ್**: ರಾಜಸ್ಥಾನದಲ್ಲಿ ಒಂದು ಸಂಸ್ಥಾನವಾಗಿದೆ. ವಿಸ್ತೀರ್ಣ ೨,೩೦೯ ಚ. ಮೈ. ಜನಸಂಖ್ಯೆ (೧೯೧೧) ೫,೮೪,೧೭೧. ವಾರ್ಷಿಕ ಉತ್ಪನ್ನವು ೧,೨೫,೦೦೦ ಪೌಂಡು. ೧೮೫೭ರ ದಂಗೆಯಲ್ಲಿ ಇದರ ಅರಸನಾದ **ಸರದಾರಸಿಂಗನು** ಇಂಗ್ಲೀಷರಿಗೆ ಬಹಳ ಸಹಾಯ ಮಾಡಿದುದರಿಂದ ಇವನಿಗೆ ೪೧ ಹಳ್ಳಿಗಳನ್ನು ಉಂಬಳಿಹಾಕಿಕೊಟ್ಟರು.

(೭೩) **ಸೇವಾನ್**: ಪಂಜಾಬ್ ಆಧಿಪತ್ಯದಲ್ಲಿ ಕರ್ನಾಲ ಜಿಲ್ಲೆಯಲ್ಲಿ ಒಂದು ಹಳ್ಳಿಯಾಗಿದೆ. ಇಲ್ಲಿ ಮೊಗಲರು ಕಟ್ಟಿಸಿದ ಒಂದು ಹಳೆಯ ಸೇತುವೆ (ಪೂಲು) ಇರುತ್ತದೆ.

(೭೪) **ಮೇವಾಡ** ಅಥವಾ **ಉದಯುಪುರ**: ರಾಜಸ್ಥಾನದಲ್ಲಿ ಒಂದು ಸಂಸ್ಥಾನವಾಗಿರುತ್ತದೆ. ಇಲ್ಲಿಯ ಅರಸರು **ದಶರಥ**ನ ಮಗನಾದ **ರಾಮಚಂದ್ರ**ನ ವಂಶದವರಂತೆ. **ಕನಕಸೇನ**ನೆಂಬುವನು ಈ ಸಂಸ್ಥಾನವನ್ನು ಸ್ಥಾಪಿಸಿದನು. ಈ ವಂಶದ ಅರಸರಲ್ಲಿ **ಬಪ್ಪರಾವಲ್, ಹಮೀರ ಸಂಗರಾಜ, ಪ್ರತಾಪಸಿಂಗ** ಇವರು ಹೆಸರುವಾಸಿಯುವರು. ೧೬೧೩ರಲ್ಲಿ ಇಲ್ಲಿಯ **ರಾಣ**ನು **ಜಹಂಗೀರ**ನ ಮಾಂಡಲಿಕನಾದನು. ೧೭೪೦ರಲ್ಲಿ **ಪೇಷವೆ ಬಾಜಿರಾಯ**ನು ಈ ಸಂಸ್ಥಾನಕ್ಕೆ ನುಗ್ಗಿ ತನಗೆ ಪ್ರತಿವರ್ಷ ೧೬,೦೦೦ ಪೌಂಡನ್ನು ಕೊಡಬೇಕೆಂದು **ರಾಣ**ನೊಡನೆ ಗೊತ್ತುಮಾಡಿದನು. ಈಗ **ರಾಣ**ನು ಪ್ರತಿವರ್ಷ ೨೦,೦೦೦ ಪೌಂಡು ಪೊಗದಿಯನ್ನೂ, ೫೦,೦೦೦ ಪೌಂಡು ದಂಡಿನ ವೆಚ್ಚದ ಸಂಬಂಧದ ಹಣವನ್ನೂ ಇಂಗ್ಲೀಷರಿಗೆ ಕೊಡುತ್ತಾನೆ. ಈ ಸಂಸ್ಥಾನದ ವಿಸ್ತಾರವು ೧೨,೮೬೧ ಚ. ಮೈ. ಜನಸಂಖ್ಯೆಯು (೧೯೧೧) ೧೦,೨೦,೨೦೦. ಈ ಸಂಸ್ಥಾನಕ್ಕೆ ೫೧ ಮಂದಿ ಮಾಂಡಲಿಕ ರಾಜರಿರುತ್ತಾರೆ.

(೭೫) **ಸಿರೋಹಿ**: ರಾಜಸ್ಥಾನದಲ್ಲಿರುವ ೧೯೬೬ ಮೈಲು ವಿಸ್ತಾರವುಳ್ಳ ಒಂದು ಚಿಕ್ಕ ಸಂಸ್ಥಾನವಾಗಿರುತ್ತದೆ. ಇಲ್ಲಿ ಕತ್ತಿಯ ಅಲಗುಗಳೂ, ಕಠಾರಿಗಳೂ, ಬರ್ಜಿಗಳೂ, ಚೂರಿಗಳೂ ಆಗುತ್ತವೆ. ಸಂಸ್ಥಾನದ ಜನಸಂಖ್ಯೆ ೧,೫೪,೦೦೦.

(೭೬) **ದುಂಡೋಕ್**: ಎಲ್ಲಿರುತ್ತದೆಂಬುದು ಸ್ಪಷ್ಟವಾಗಿ ಗೊತ್ತಾಗುವುದಿಲ್ಲ. ಇದು ರೇವಾಕಂಠಾದಲ್ಲಿರುವ **ಗಾಯಕವಾಡ**ನ ಆಶ್ರಿತಸಂಸ್ಥಾನವಾದ ದೋಡಕ್ ಆಗಿದ್ದರೂ ಆಗಿರಬಹುದು.

(೭೭) **ಧಾರಾ**: ಮಧ್ಯಹಿಂದುಸ್ಥಾನದಲ್ಲಿ ರತ್ಲಾಮುಸಂಸ್ಥಾನದ ತೆಂಕಣಿಗಿರುವ ಒಂದು ಸಂಸ್ಥಾನವಾಗಿರುತ್ತದೆ. ಇಲ್ಲಿಯ ಅರಸನು **ವಿಕ್ರಮಾದಿತ್ಯ, ಭೋಜರಾಜ**ರ ವಂಶದವನಂತೆ. ಇವನು ಭಿಲ್ಲಜಾತಿಯವನು. ೧೨ ಮಂದಿ ರಜಪೂತ ಕುಲದ ಚಿಕ್ಕ ಸಂಸ್ಥಾನಿಕರು ಇವನಿಗೆ ಮಾಂಡಲಿಕರಾಗಿರುತ್ತಾರೆ. ಈ ಸಂಸ್ಥಾನದ ವಿಸ್ತಾರವು ೧೭೭೪೦ ಚ. ಮೈ; ಜನಸಂಖ್ಯೆಯು (೧೯೧೧) ೩೭,೫೦೦. ವಾರ್ಷಿಕೋತ್ಪನ್ನವು ೭೪,೩೧೨ ಪೌಂಡು. ಈ ಸಂಸ್ಥಾನಿಕನು ಇಂಗ್ಲೀಷ್ ಸರಕಾರಕ್ಕೆ ಪ್ರತಿವರ್ಷ ದಂಡಿನ ವೆಚ್ಚಕ್ಕಾಗಿ ೧,೯೬೫ ಪೌಂಡನ್ನು ಕೊಡುತ್ತಾನೆ.

(೭೮) **ರತ್ಲಾಂ:** ಮಾಳವಾದಲ್ಲಿರುವ ಒಂದು ರಜಪೂತಸಂಸ್ಥಾನವಾಗಿರುತ್ತದೆ. ಇದರ ವಿಸ್ತಾರವು ೭೨೯ ಚ. ಮೈ; ಜನಸಂಖ್ಯೆಯು (೧೯೧೧) ೮೭,೩೧೪. ಇಲ್ಲಿಯ ಅರಸನು ಜೋಧಪುರದರಸನ ವಂಶದವನು. ಈ ಸಂಸ್ಥಾನದ ವಾರ್ಷಿಕೋತ್ಪನ್ನವು ೧,೩೦,೦೦೦ ಪೌಂಡು. ಇದು ಮೊದಲು **ಸಿಂಧ್ಯನ** ಮಾಂಡಲಿಕಸಂಸ್ಥಾನವಾಗಿತ್ತು. ೧೮೪೪ರಲ್ಲಿ **ಸಿಂಧ್ಯನು** ತಾನು ದಂಡಿನ ವೆಚ್ಚಕ್ಕಾಗಿ ಇಂಗ್ಲೀಷರಿಗೆ ಕೊಡುವ ಹಣದ ಬದಲು ಈ ಸಂಸ್ಥಾನದ ಪೊಗದಿಯನ್ನು ಕೊಟ್ಟನು. ಆದುದರಿಂದ ರತ್ಲಾಮಿನ **ರಾಣನು** ಪ್ರತಿವರ್ಷ ಇಂಗ್ಲೀಷ ಸರಕಾರಕ್ಕೆ ೬,೬೦೦ ಪೌಂಡುಗಳನ್ನು ಕೊಡುತ್ತಾನೆ.

(೭೯) **ಕಿಸನಗಡ:** ರಾಜಸ್ಥಾನದಲ್ಲಿರುವ ಒಂದು ಸಂಸ್ಥಾನವಾಗಿರುತ್ತದೆ. ಇದನ್ನು ಜೋಧಪುರದ ಅರಸನ ೨ನೆಯ ಮಗನಾದ **ಉದಯಸಿಂಗನು ಅಕ್ಬರಬಾದಷಹನ** ಅಪ್ಪಣೆಯಿಂದ ಸ್ಥಾಪಿಸಿದನು (೧೫೯೪). ಇದರ ವಿಸ್ತಾರವು ೮೭೪ ಚ. ಮೈ; ಜನಸಂಖ್ಯೆಯು (೧೯೧೧) ೮೮,೦೦೦. ರಾಜಸ್ಥಾನದಲ್ಲಿ ಹೊಗೆಬಂಡಿಯ ಸಂಚಾರಕ್ಕೆ ಮೊದಲಾದಂದಿನಿಂದ ಈ ಸಂಸ್ಥಾನದ ಉತ್ಪನ್ನವು ಕಡಿಮೆಯಾದುದರಿಂದ, ಇಂಗ್ಲೀಷಸರಕಾರದವರು ಇಲ್ಲಿನ ಅರಸನಿಗೆ ಪ್ರತಿವರ್ಷ ೨,೦೦೦ ಪೌಂಡು ಕೊಡಲು ಒಡಂಬಟ್ಟರುತ್ತಾರೆ. ಈ ಸಂಸ್ಥಾನದಲ್ಲಿರುವ ಸಾಂಬರ್‌ಸರೋವರದ ಉಪ್ಪು ಹೆಸರಾದುದು. ಈ ಸಂಸ್ಥಾನಿಕರು ಇಂಗ್ಲೀಷರಿಗೆ ಪೊಗದಿಯನ್ನು ಕೊಡುವುದಿಲ್ಲ.

(೮೦) **ರೂಪನಗಡ:** ಈಗ ಉದಯಪುರಸಂಸ್ಥಾನದಲ್ಲಿ ಒಂದು ಕೋಟೆಯುಳ್ಳ ಸ್ಥಳವಾಗಿರುತ್ತದೆ. ಇದರಲ್ಲಿ ಉತ್ಪನ್ನವೇನೂ ಇಲ್ಲ.

(೮೧) **ಗೋವಿನಗಡ:** ಪಂಜಾಬ್ ಆಧಿಪತ್ಯದಲ್ಲಿರುವ ಅಮೃತಸರ ಪಟ್ಟಣದ ಈಶಾನ್ಯಕ್ಕೆ ಒಂದು ಕೋಟೆಯುಳ್ಳ ಸ್ಥಳವಾಗಿರುತ್ತದೆ. ಈಗ ಇದರಲ್ಲಿ ಇಂಗ್ಲೀಷರ ದಂಡಿನ ಪಾಳೆಯವುಂಟು.

(೮೨) **ಪಿಸನಗಡ:** ರಾಜಸ್ಥಾನದಲ್ಲಿ ಅಜಮಿಾರ ಜಿಲ್ಲೆಯಲ್ಲಿ ಒಂದು ಪಟ್ಟಣವಾಗಿದೆ. ಇಲ್ಲಿ ಹತ್ತಿ, ಹೊಗೆಸೊಪ್ಪು (ತಂಬಾಕು)ಗಳ ವ್ಯಾಪಾರವು ಬಹಳವಾಗುತ್ತದೆ.

(೮೩) **ಹಿಸ್ಸಾರ್** : ಪಂಜಾಬ್‌ಆಧಿಪತ್ಯದಲ್ಲಿ ಒಂದು ಜಿಲ್ಲೆಂ ಮುಖ್ಯ ಸ್ಥಳವಾಗಿರುತ್ತದೆ. ಇದನ್ನು **ತಗ್ಲಖ ಫಿರೋಜಷಹ**ನು ಕಟ್ಟ ದನು (೧೩೫೪). ಇದು ೧೮೧೦ರಲ್ಲಿ ಬ್ರಿಟಿಷ್ ರಾಜ್ಯಕ್ಕೆ ಸೇರಿತು. ಇ ಸೋರುಪ್ಪು ಸಿಕ್ಕುತ್ತದೆ.

(೮೪) **ಭಟಿಯೂನಾ**: ಈ ಪ್ರಾಂತವು ಪಂಜಾಬ್ ಆಧಿಪತ್ಯದಲ್ಲಿರು ಸಿಸಾರ್‌ಜಿಲ್ಲೆಯ ಭಾಗವಾಗಿರುತ್ತದೆ. ಇದು ೧೮೧೦ರಲ್ಲಿ ಇಂಗ್ಲೀಷರಿ ಸೇರಿತು.

(೮೫) **ಪುನ್ನಿಯೂರ** : ಗ್ವಾಲಿಯರಿಗೆ ನೈರುತ್ಯಕ್ಕೆ ೧೨ ಮೈ ದೂರದಲ್ಲಿ ಗ್ವಾಲಿಯರ್‌ಸಂಸ್ಥಾನಕ್ಕೆ ಸೇರಿರುತ್ತದೆ. ಇಲ್ಲಿ ಇಂಗ್ಲೀಷ ಮರಾಟೆಯುವರನ್ನು ಸೋಲಿಸಿದರು (೨೯ ಡಿಸೆಂಬರ್, ೧೮೪೩).

(೮೬) **ಅಂಬರ್** ಅಥವಾ **ಜಯಪುರ** : ರಾಜಸ್ಥಾನದಲ್ಲಿ ವಿಸ್ತೀರ್ಣ ೧೪,೪೬೫ ಚ. ಮೈ. ಜನಸಂಖ್ಯೆ (೧೯೧೧) ೨೫,೦೦,೦೦ ಇಂಗ್ಲೀಷರಿಗೆ ಸಲ್ಲತಕ್ಕ ವಾರ್ಷಿಕ ಪೊಗದಿ ೪೦,೦೦೦ ಪೌಂಡು. ಪೂರ್ವ ರಾಜಧಾನಿ ಅಂಬರ್. ೨ನೆಯ **ಜಯಸಿಂಗ**ನು ೧೭೨೮ರಲ್ಲಿ ಜಯಪು ವನ್ನು ಕಟ್ಟಿಸಿದನು.

(೮೭) **ಕಾಶಿ**: ವಾಯುವ್ಯ ಪ್ರಾಂತದಲ್ಲಿ ಗಂಗಾನದೀತೀರದಲ್ಲಿ ಹಿಂದೂಗಳ ಪವಿತ್ರ ಸ್ಥಳ. ಜನಸಂಖ್ಯೆ ಎರಡುಲಕ್ಷದ ಒಂಬತ್ತು ಸಾವಿ (ಮೇಲೆ ೩೭ನೆಯದನ್ನು ನೋಡಿರಿ).

(೮೮) **ಗೊಂಡವನ**: ಈ ಪ್ರಾಂತವು ಮಧ್ಯಹಿಂದುಸ್ಥಾನದಲ್ಲಿ ಇಲ್ಲಿ ಅನಾರ್ಯರೇ ವಾಸಿಸುತ್ತಾರೆ. ಇವರ ಸಂಖ್ಯೆ ಸುಮಾರು ೨೭ ಲಕ್ಷ

(೮೯) **ಪಾಲಿಯೂಟಾಣ**: ಈ ಸಂಸ್ಥಾನವು ಕಾಠೇವಾಡದ ಗೋ ಲ್ವಾಡಭಾಗಕ್ಕೆ ಸೇರಿರುತ್ತದೆ. ವಿಸ್ತೀರ್ಣ ೨೮೮ ಚ. ಮೈ. ಇದ ವಾರ್ಷಿಕೋತ್ಪನ್ನವು ೨೦,೦೦೦ ಪೌಂಡು. **ಗಾಯಕವಾಡ**ನಿಗೂ, ಜುನ ಗಡದ ನವಾಬನಿಗೂ ಸೇರಿ ವರ್ಷ ಒಂದಕ್ಕೆ ೧,೦೩೬ ಪೌಂಡು ೮ ಷಿಲ್ಲಿಂಗ ಪೊಗದಿ ಸಲ್ಲುತ್ತದೆ. ಇದರಲ್ಲಿರುವ ಶತ್ರುಂಜಯವೆಂಬ ಗುಡ್ಡದ ಮೇ ಜೈನರ ಪುರಾತನ ಗುಡಿಗಳಿವೆ. ಅನೇಕಯಾತ್ರಾರ್ಥಿಗಳು ಬರುತ್ತಾ

(೯೦) **ಪಾಂಡೇಲಿ:** ಅಕ್ಬರನ ದೀಪಸ್ತಂಭ (**ಅಕ್ಬರಕಾ ದಿವಾ**) ಎಂಬ ಶ್ವೇತಶಿಲೆಯಿಂದ (ಸಂಗಮರವರಿಯಕಲ್ಲಿ)ನಿಂದ ಕಟ್ಟಸಿದ ದೊಡ್ಡ ಕಂಬವಿದೆ.

(೯೧) **ಸ್ಪಾರ್ಟ** : ಗ್ರಿಸ್ ದೇಶದಲ್ಲಿದೆ. ಶತ್ರುಗಳಿಗೆ ಬೆನ್ನು ತೋರಿಸಿ ಬರಬೇಡಿರೆಂದು ಯುದ್ಧಕ್ಕೆ ಹೋಗುವಾಗಲೆಲ್ಲಾ ಇಲ್ಲಿನ ಹೆಂಗಸರು ತಮ್ಮ ಮಕ್ಕಳಿಗೆ ಬೋಧಿಸುತ್ತಿದ್ದರು.

(೯೨) **ರಾಜಪಿಂಪಳ** : ಮುಂಬಾಯಿಆಧಿಪತ್ಯದಲ್ಲಿ ರೇವಾಕಂಠ ದಲ್ಲಿ ಒಂದು ಸಂಸ್ಥಾನವಾಗಿದೆ. ವಿಸ್ತೀರ್ಣ ೧,೫೧೪ ಚ. ಮೈ. ಜನಸಂಖ್ಯೆ (೧೯೧೧) ೨ ಲಕ್ಷ. ಇದರ ವಾರ್ಷಿಕೋತ್ಪನ್ನವು ೬೦,೦೦೦ ಪೌಂಡು, **ಗಾಯಕವಾಡ**ನಿಗೆ ವರ್ಷಕ್ಕೆ ೬,೫೦೦ ಪೌಂಡು ಸಲ್ಲುತ್ತದೆ. ರಾಜಪಿಂಪ ಳದ ಗುಡ್ಡವು ಇಲ್ಲಿ ಹಬ್ಬಿದೆ. ಅರಸನು ರಜಪೂತಕುಲದವನು. ಇವನು ಮೊದಲು ಅಹಮದ್‌ನಗರದ ಅರಸನ ಮಾಂಡಲಿಕನಾಗಿದ್ದನು. **ಅಕ್ಬರ**ನು ಇದನ್ನು ಹಿಡಿದುಕೊಂಡ ಬಳಿಕ ಮೊಗಲರಿಗೆ ವರ್ಷಕ್ಕೆ ೩,೫೫೫ ಪೌಂಡು ಪೊಗದಿ ಸಲ್ಲುತ್ತಿತ್ತು. ಈ ಸಂಸ್ಥಾನದ ರಾಜಧಾನಿ ನಂದೋದ್.

(೯೩) **ಸಾಲುಂಬರ**: ಉದಯಪುರದ ಸಂಸ್ಥಾನದಲ್ಲಿ ಒಂದು ಮಾಂ ಡಲಿಕ ಸಂಸ್ಥಾನವಾಗಿರುತ್ತದೆ. ಇದಕ್ಕೆ ೧೦೬ ಹಳ್ಳಿಗಳು ಸೇರಿವೆ. ಇದಕ್ಕೆ ಮುಖ್ಯಸ್ಥನು **ಚಂದಾವತ್ ರಾಜಪೂತ**ನು.

(೯೪) **ದಿಲ್ವಾರ**: ಉದಯಪುರಕ್ಕೆ ಸೇರಿದ ಒಂದು ಮಾಂಡಲಿಕ ಸಂಸ್ಥಾನವಾಗಿದೆ. ಇದಕ್ಕೆ ೧೪೯ ಹಳ್ಳಿಗಳು ಸೇರಿವೆ.

(೯೫) **ಗೋಗುಂದ** : ಉದಯಪುರಕ್ಕೆ ಸೇರಿದ ಒಂದು ಪಟ್ಟಣ. ಇಲ್ಲಿಯ ರಜಪೂತ್ ಸರದಾರನು ೧೦೪ ಹಳ್ಳಿಗಳಿಗೆ ಒಡೆಯನಾಗಿದ್ದಾನೆ. ಇದಕ್ಕೆ ಪಶ್ಚಿಮಕ್ಕೆ ೨೫ ಮೈಲುದೂರದಲ್ಲಿ ಜಾಗರ್ೊ ಎಂಬ ದೇವರ ದೊಡ್ಡ ಜಾತ್ರೆ ನಡೆಯುತ್ತದೆ.

(೯೬) **ಶಹಾಪುರ** : ಪಂಜಾಬ್‌ಆದಿಪತ್ಯದಲ್ಲಿ ರಾವಲ್ಪಿಂಡಿ ಭಾಗ ದಲ್ಲಿ ಒಂದು ಜಿಲ್ಲೆಯಾಗಿದೆ.

(೯೭) **ಆಬು** : ರಾಜಸ್ಥಾನದ ಸಿರೋಹಿ ಸಂಸ್ಥಾನದಲ್ಲಿ ಒಂದು ಬೆಟ್ಟ ವಾಗಿದೆ. ರಾಜಸ್ಥಾನದ ಇಂಗ್ಲೀಷ್‌ರೆಸಿಡೆಂಟರು ಬೇಸಗೆಯಲ್ಲಿ ಇಲ್ಲಿ

ವಾಸಮಾಡುತ್ತಾರೆ. ಈ ಬೆಟ್ಟದ ಮೇಲೆ ೬೦೦-೭೦೦ ವರ್ಷಗಳಿಗೆ ಹಿಂದೆ ಕಟ್ಟಿದ ಜೈನರ ದೇವಸ್ಥಾನಗಳಿವೆ. ಅವುಗಳಲ್ಲಿ ಋಷಭನಾಥ, ವಿಮಾಲಸ, ವಸ್ತುಪಾಲ, ತೇಜಪಾಲರ ಗುಡಿಗಳು ನೋಡತಕ್ಕವುಗಳು. ಇದರ ಮೇಲಿನ ನಖಿ ತಲಾವ್ ಎಂಬ ಕೆರೆಯು ಅರ್ಧಮೈಲು ಅಗಲವಾಗಿದೆ.

(೯೮) **ಚೌಂದ**: ಮೇವಾಡದ ನೈರುತ್ಯಕ್ಕೆ ೩೫೦ ಹಳ್ಳಿಗಳುಳ್ಳ ಒಂದು ಜಿಲ್ಲೆಯಾಗಿದೆ. ಇಲ್ಲಿ ಭಿಲ್ಲರೇ ವಾಸಮಾಡುತ್ತಾರೆ. ಇದಕ್ಕೆ ಚಪ್ಪಣವೆಂದು ಇನ್ನೊಂದು ಹೆಸರು.

(೯೯) **ಜಾವೂರ್**: ಮಾಳವದಲ್ಲಿ ಒಂದು ಸಂಸ್ಥಾನವಾಗಿದೆ. ವಿಸ್ತೀರ್ಣ ೮೭೨ ಚದರ ಮೈಲು. ಜನಸಂಖ್ಯೆ (೧೯೧೧) ಸುಮಾರು ಒಂದು ಲಕ್ಷ. ಇದರ ನವಾಬನು ಪಠಾಣ ಕುಲದವನು. ಮೊದಲು ಹೋಳಕರನ ಮಾಂಡಲಿಕನಾಗಿದ್ದನು. ಈಗಲೂ ಇವನು ಪಟ್ಟವೇರುವಾಗ ಅವನಿಗೆ ೨೦,೦೦೦ ಪೌಂಡು ಕಾಣಿಕೆ ಕೊಡುತ್ತಾನೆ. ೧೮೧೮ರಿಂದ ಇಂಗ್ಲೀಷರ ಆಶ್ರಯವನ್ನುಹೊಂದಿ ದಂಡಿನ ವೆಚ್ಚಕ್ಕಾಗಿ ೧೬,೧೮೧ ಪೌಂಡುಗಳನ್ನು ಕೊಡುತ್ತಾನೆ. ಇಲ್ಲಿ ಗಸಗಸೆ ವಿಶೇಷವಾಗಿ ಬೆಳೆಯುತ್ತದೆ.

(೧೦೦) **ಸೋಗಡ**: ಇದು ಎಲ್ಲಿದೆ ಎಂಬುವುದು ಸರಿಯಾಗಿ ಗೊತ್ತಾಗುವುದಿಲ್ಲ.

(೧೦೧) **ದವೇರ**: ರಾಜಸ್ಥಾನದಲ್ಲಿ ಮೇರವಾಡಕ್ಕೆ ತೆಂಕಣಿನಲ್ಲಿ ಒಂದು ಸಣ್ಣ ಊರು.

(೧೦೨) **ಉಮೇಟ**: ಗುಜರಾತಿನಲ್ಲಿ ಒಂದು ಸಣ್ಣ ಸಂಸ್ಥಾನವಾಗಿದೆ. ಇದಕ್ಕೆ ಸೇರಿದ ೫ ಹಳ್ಳಿಗಳು ಕೈರಾ ಜಿಲ್ಲೆಯಲ್ಲಿಯೂ, ೭ ಹಳ್ಳಿಗಳು ರೇವಾಕಂಠದಲ್ಲಿಯೂ ಇವೆ. ವಿಸ್ತೀರ್ಣ ೩೬॥ ಚ. ಮೈ. ವಾರ್ಷಿಕೋತ್ಪನ್ನವು ೨,೯೩೦ ಪೌಂಡು. ಇದರ ಸಂಸ್ಥಾನಿಕನು ರಜಪೂತಕುಲದವನು. ವರ್ಷ ೧ಕ್ಕೆ ಇಂಗ್ಲೀಷರಿಗೆ ೫೦೦ ಪೌಂಡನ್ನೂ, **ಗಾಯಕ್**ವಾಡನಿಗೆ ೨೫೫ ಪೌಂಡನ್ನೂ ಪೊಗದಿ ಕೊಡುತ್ತಾನೆ.

(೧೦೩) **ಮಂಡಲಗಡವು**: ಉದಯಪುರಸಂಸ್ಥಾನದಲ್ಲಿ ಒಂದು ಕೋಟೆ. ಇದನ್ನು **ಔರಂಗಜೀಬ**ನು ಪಿಸನಗಡಸಂಸ್ಥಾನಿಕನಿಗೆ ಕೊಟ್ಟನು (೧೬೯೯). ಉದಯಪುರದ **ರಾಣ**ನು ಇದನ್ನು ಹಿಡಿದುಕೊಂಡನು.

(೧೦೪) **ಮೂಳಪುರವು**: ಮುಂಬಯಿಆಧಿಪತ್ಯದೊಳಗೆ ಗುಜ ರ್ರಾತಿನಲ್ಲಿ ಒಂದು ಚಿಕ್ಕ ಸಂಸ್ಥಾನ. ಇಲ್ಲಿಯ ಸಂಸ್ಥಾನಿಕನು ರಜಪೂತ ಜಾತಿಯವನಾದ **ಈಡರದ ರಾವನ** ವಂಶದವನು. ಇವನು ಪ್ರತಿವರ್ಷ ಇಂಗ್ಲೀಷರಿಗೆ ೪೭ ಪೌಂಡನ್ನೂ, **ಈಡರದ ರಾವನಿಗೆ** ೩೯ ಪೌಂಡನ್ನೂ, **ಗಾಯಕವಾಡನಿಗೆ** ೨೮ ಪೌಂಡನ್ನೂ ಕಾಣಿಕೆಯಾಗಿ ಕೊಡುತ್ತಾನೆ. ಈ ಚಿಕ್ಕ ಸಂಸ್ಥಾನದ ಜನಸಂಖ್ಯೆಯು ಸುಮಾರು ೧೫,೦೦೦.

(೧೦೫) **ಪೆಶಲ**: ಈ ಸರೋವರದ ಸಮೀಪದಲ್ಲಿಯೇ ಉದಯ ಪುರದ ಅರಸನ ಅರಮನೆ ಇರುತ್ತದೆ.

(೧೦೬) **ರಾಮಪುರ**: ಉದಯಪುರಸಂಸ್ಥಾನದ ಪಡುವಣ ಮೇರೆ ಯಲ್ಲಿ ಒಂದು ಹಾಳು ಊರು. **ಧರ್ಮಸೆಟ್ಟಿ** ಎಂಬುವನು ೭೫ ಲಕ್ಷ ರೂಪಾಯಿಗಳ ವೆಚ್ಚದಿಂದ ಕಟ್ಟಿಸಿದ ಪಾರ್ಶ್ವನಾಥನ ಎರಡು ಗುಡಿಗಳಿವೆ. ಇವುಗಳಲ್ಲಿನ ಕಲ್ಲುಕೆಲಸ ನೋಡತಕ್ಕುದು. ಇಲ್ಲಿ ಮಾರ್ಚ್, ಸೆಪ್ಟಂಬರ್ ತಿಂಗಳುಗಳಲ್ಲಿ ನಡೆಯುವ ಜಾತ್ರೆಗಳಿಗೆ ಸುಮಾರು ೧೦,೦೦೦ ಯಾತ್ರಿಕರು ಬರುತ್ತಾರೆ.

(೧೦೭) **ನಗರವು** (ರಾಜನಗರ) ಬಂಗಾಳದ ಆಧಿಪತ್ಯದಲ್ಲಿ ಬೀರ ಭೂಮಜಿಲ್ಲೆಯಲ್ಲಿ ಒಂದು ಪಟ್ಟಣವಾಗಿದೆ. ಇಲ್ಲಿ ಹಾಳು ಮಸೀದಿಗಳೂ, ಶಿಥಿಲವಾದ ದೇವಾಲಯುಗಳೂ ಇವೆ.



### ಪರಿಶಿಷ್ಟ (ಉ.)

# ಮೊಗಲರ ವಂಶಾವಳಿಯು.

ತೈಮುರ್ಲೆಂಗ್ (ಸತ್ತಕಾಲ ೧೪೦೪).



## ಶ್ರೀ ಶಂಕರಕರ್ನಾಟಕಪುಸ್ತಕಭಾಂಡಾರ

## ಮೊಳಮಡ್ಡಿ, ಧಾರವಾಡ.

---

### ಈ ಸಂಸ್ಥೆಯ ಉದ್ದೇಶಗಳು.

೧. ಕನ್ನಡ ಬರಹಗಾರರನ್ನು (ಅ) ಆದಷ್ಟು ಮಟ್ಟಿ
ಗಾರರನ್ನಾಗಿ ಸೇರಿಸಿಕೊಂಡು (ಇ) ಅವರ ಉತ್ತಮಪುಸ್ತಕಗಳನ್ನು
ನಿದ್ದ ಮಟ್ಟಿಗೆ ಪ್ರಚಾರಗೊಳಿಸಿ (ಉ) ಹಣದ ಅನುಕೂಲತೆಯು
ರಿಗೆ ನೆರವಾಗಿ, ಒಟ್ಟುಗೂಡಿಸುವುದು.

೨. (ಅ) ಮೈಸೂರುಕನ್ನಡು, ಮಂಗಳೂರುಕನ್ನಡು,
ವಾಡಕನ್ನಡು ಎಂಬ ಭೇದವನ್ನು ತೆಗೆದುಹಾಕಿ, (ಇ) ಮಹತ್ವದ
ಗಳನ್ನು ಪತ್ರಿಕೆಗಳಲ್ಲಿ ಚರ್ಚಿಸಿ, (ಉ) ಆಗಾಗ ಬರಹಗಾರರ ಸಮ್ಮೆ
ಕೂಡಿಸಿ, ಕನ್ನಡಕ್ಕೆ ಏಕರೂಪತೆಯನ್ನು ಕೊಡುವುದು.

೩. ಚೆಲೊ ಅಚ್ಚಾದ ಮತ್ತು ಶುದ್ಧವಾದ ಉತ್ತಮಗ್ರಂ
ಕನ್ನಡಿಗರಿಗೆ ಆದಷ್ಟು ಕಡಮೆ ಬೆಲೆಗೆ ಒದಗಿಸಿ ಕೊಡುವುದು ಮತ್ತು
ದೊಡ್ಡ ಊರುಗಳಲ್ಲಿ ಭಾಂಡಾರದ ಶಾಖೆಗಳನ್ನು ಸ್ಥಾಪಿಸುವುದು.

### ಬಿನ್ನಹ

೧. ಬರಹಗಾರರು ತಂತಮ್ಮ ಪುಸ್ತಕಗಳ ಒಂದೊಂದು ಪ್ರ
ಮಾದರಿಯಾಗಿ ಕಳಿಸಿದರೆ ಯೋಗ್ಯಕಂಡ ಪುಸ್ತಕಗಳ ಕೆಲವು ಪ್ರ
ಕೊಂಡುಕೊಂಡು ಮಾರಲಿಕ್ಕಿಡುವುದು.

೨. ಪುಸ್ತಕದ ವ್ಯಾಪಾರಿಗಳಿಗೆ ಯೋಗ್ಯ ದಲಾಲಿಯು
ವುದು.

**ಶ್ರೀಪಾದ ರಾಮಚಂದ್ರ ದೇಶಪಾಂಡೆ ಬಿ. ಎಸ್.**

ವ್ಯಾ